ರಾಗಿದ್ದರು. ಮಾನವ ಸ್ವಭಾವದಲ್ಲಿ ನಖಶಿಖಾಂತ ಪರಿವರ್ತನೆಯನ್ನು ಮಾಡುವದು ಅವರ ಗುರಿಯಾಗಿತ್ತು. ಆದರಿಂದಾಗಿ ಮನದ ವ್ಯವಹಾರ ಲಕ್ಷಣಬದ್ಧ ಮಾನವನನ್ನು ಘನಮನ ( Super – Mind ) ಸಂಪಾದಿಸಿದ ಅತಿಮಾನವನನ್ನಾಗಿ–ಶರಣನನ್ನಾಗಿ ಮಾರ್ಪಡಿಸ ಬಯಸಿದರು. ಆದಕ್ಕಾಗಿ ಪಾಂಡಿಚೆರಿಯಲ್ಲಿ ಅಂದು ಅವರು ಕಟ್ಟಿದ — ಇಂದು ಸುತ್ತುಮುತ್ತಲೂ ಭವ್ಯವಾಗಿ ಬೆಳೆದಿದ್ದ — ಅವರ ಆಶ್ರಮವು ಬಗೆ ಬಗೆಯ ಕಾರ್ಯಕುಶಲತೆಯ ರಂಗವಾಗಿ, ಬಗೆ ಬಗೆಯ ಬುದ್ಧಿಸಾಮರ್ಥ್ಯ- ಭಾವನಾಸಾಮರ್ಥ್ಯಗಳ ಕ್ಷೇತ್ರ ವಾಗಿ ಪರಿಣಮಿಸಿದೆ. ಇಂಗ್ಲಂಡ–ಅಮೆರಿಕಗಳಲ್ಲಿ ಕುತೂಹಲದಿಂದ ಕೂಡಿದ ಕುಶಾಗ್ರಬುದ್ಧಿಯ ಅನೇಕರ ಶ್ರೀ ಅರವಿಂದರ ವಿಚಾರಗಳತ್ತ ಹೊರಳುತ್ತಿದ್ದಾರೆ. ಅಮೇರಿಕೆಯ ಸ್ಟ್ಯಾನ್‌ಫೋರ್ಡ ಮತ್ತು ಕಾರ್ನೆಲ್ ವಿಶ್ವವಿದ್ಯಾಲಯಗಳಲ್ಲಿ ಕ್ರಮವಾಗಿ 'ಗೀತೆಯ ಮೇಲಿನ ಪ್ರಬಂಧಗಳು' (Essays on the Gita) ಮತ್ತು 'ದಿವ್ಯ ಜೀವನ' ( Life Divine ) ಎಂಬ ಶ್ರೀ ಅರವಿಂದರ ಗ್ರಂಥಗಳನ್ನು ಸ್ನಾತಕೋತ್ತರ ಅಭ್ಯಾಸ ಕ್ಕಾಗಿ ನಿಯಮಿಸಿದ್ದಾರೆ. ನಮ್ಮ ದೇಶದಲ್ಲಿ ಬನಾರಸದ ವಿಶ್ವವಿದ್ಯಾಲಯವೂ ಶ್ರೀ ಅರವಿಂದರ ಗ್ರಂಥ ಗಳನ್ನು ಅಭ್ಯಾಸಪತ್ರಿಕೆಯಲ್ಲಿ ಸೇರಿಸಿದೆ. ಘನವಾದ ನೋಬೆಲ್ ಪಾರಿತೋಷಕವನ್ನು ಅವರಿಗೆ ಕೊಡ ಬೇಕೆಂದು ಪಡುವಣ ನಾಡುಗಳಲ್ಲಿ ಅದರಂತೆ ಮೂಡಣನಾಡುಗಳಲ್ಲಿ ಮೂಡಿದ್ದ ಪ್ರೇರಣೆಯು ಅವರು ವಿಶ್ವವ್ಯಕ್ತಿಗಳಾಗಿದ್ದರೆಂಬುವದಕ್ಕೆ ಒಂದು ವೈಭವಸಂಪನ್ನ ನಿದರ್ಶನವಾಗಿದೆ.

## ಶ್ರೀ ಅರವಿಂದರ ತತ್ತ್ವಜ್ಞಾನ

ಶ್ರೀ ಅರವಿಂದರು ಬರೆದ 'ದಿವ್ಯ ಜೀವನ' ಗ್ರಂಥವು ಒಂದು ಮನೋಹರವಾದ, ತತ್ತ್ವಜ್ಞಾನ ಮತ್ತು ಅನುಭವ ಶಾಸ್ತ್ರವನ್ನು ನಿರೂಪಿಸುವ ಉದ್ಗ್ರಂಥವೆಂದು ಸಾರ್ವತ್ರಿಕವಾದ ಮನ್ನಣೆ ಪಡೆದಿದೆ. ಅದರಲ್ಲಿ ಅವರು ಮಾನವಜನಾಂಗದ ಭವಿತವ್ಯದ ಬಗೆಗೆ ತಮ್ಮ ಹೃದಯದಿಂದುಕ್ಕುವ ಆಶೆ-ಆಕಾಂಕ್ಷೆಗಳನ್ನು ಮತ್ತು ಆತ್ಮದಿಂದ ಹೊರಹೊಮ್ಮಿದ ಅಂತಃಸ್ಫುರಣೆಗಳನ್ನು ಬಿತ್ತರಿಸಿರುವರು. ಅವರ ಸರಿಯಾದ ಪರಿಶೀಲನೆ ಯಿಂದ ಅವರ ತತ್ತ್ವಜ್ಞಾನದ ತಿರುಳನ್ನೇ ಅರಿಯಬಹುದಾಗಿದೆ. ಅದರಲ್ಲಿ ಮೊಟ್ಟಮೊದಲು ನಮ್ಮ ಮನವನ್ನು ಸೆಳೆಯುವ ಮಾತಿದು : ನಮ್ಮೀ ಜಗತ್ತು ನಿತ್ಯಸತ್ಯವಾಗಿದೆ. ಇದರ ನಿರ್ಮಾಣವು ನಮ್ಮ ತರ್ಕ ತಿಳುವಳಿಕೆಗೆ ಮೀರಿದುದು. ಇದನ್ನು ನಾವು ಪ್ರೀತಿಸಲಿ ಪ್ರೀತಿಸದಿರಲಿ ನಾವೆಲ್ಲ ಈ ಜಗತ್ತಿನ ಘಟಕಗಳೇ. ಇದನ್ನು ನಾವು ಅಲ್ಲಗಳೆಯಲಾಗುವದಿಲ್ಲ.– ಈ ಮಾತುಗಳಿಂದ ಅವರು 'ಸತ್'ವಾದವನ್ನು ಎತ್ತಿಹಿಡಿದಿದ್ದಾರೆ. ಸಾಮಾನ್ಯವಾಗಿ ತಿಳಿದಿರುವ ತತ್ತ್ವಜ್ಞಾನಕ್ಕೆ ಜೀವನವನ್ನು ಅಳ್ಯೆಸುವದು ಆಗದು. ಜೀವನವು ಊಹೆ– ವಿಚಾರಗಳಿಗೆ ಮೀರಿದುದು ಎಂದು ಶ್ರೀ ಅರವಿಂದರ ಅಭಿಮತ. ಅವರ ಅಭಿಪ್ರಾಯದಲ್ಲಿ ಜೀವನದ ಆವಿರ್ಭಾವವೇ ತತ್ತ್ವಜ್ಞಾನ. ವಿಚಾರವೀಚಿಗಳನ್ನು ಸುಸಂಬದ್ಧಗೊಳಿಸಿ ವಿವರಿಸುವದು ಮಾತ್ರವೇ ಜ್ಞಾನವಲ್ಲ. ಯಾಕೆಂದರೆ ಜೀವನವು ಅನೇಕ ಅವಸ್ಥಾಂತರಗಳಲ್ಲಿ ಅರಳುತ್ತ ಸಾಗುವದು. ಈ ಅವಸ್ಥೆಗಳಲ್ಲಿ ಹಲಕೆಲವು ನಮ್ಮ ವಿಚಾರಕ್ಕೆ ನಿಲುಕುತ್ತಿರುವದಿಲ್ಲ. ಸುಸಂಬದ್ಧವಾದ ವಿಚಾರಸರಣಿಯೇ ತತ್ತ್ವಜ್ಞಾನವೆಂದು ನಾವು ಬಗೆವುದಾದರೆ ಅದು ಮನ-ಪ್ರಕೃತಿ, ವಿವೇಕ-ಸಹಜಪ್ರವೃತ್ತಿ, ಇಂದ್ರಿಯ-ಆತ್ಮ ಎಂಬ ಒಂದಕ್ಕೊಂದು ವಿರೋಧವಾದ ಪದಗಳ ವಿಚಾರದಲ್ಲಿ ನಮ್ಮನ್ನಿಳಿಸಿಬಿಡುವದು; ಮತ್ತು ಇವುಗಳ ವಿಚಾರವು ಬಗೆಹರಿಯದೆ ನಾವು ಕೈಸೋತು ದಣಿದುಬಿಡುವೆವು. ಇವನ್ನು ಸಮಂಜಸವಾಗಿ ಬಿಡಿಸುವ ವಿಧಾನದ ದೆಸೆಯಿಂದ ಪಾರುಗಾಣದ ಅನೇಕ ಅಡೆತಡೆಗಳು ಮುಂಬಂದು ನಿಲ್ಲುವವು. ಆದರಿಂದ ನವೀನ ತೆರನಾದ ದೃಷ್ಟಿಯೊಂದು ಅವಶ್ಯವಾಗಿ ಬೇಕಾಗುವದು. ಇಂದ್ರಿಯ ಸನ್ನಿಕರ್ಷಜ್ಞಾನದ ಸುಸಂಬದ್ಧ ವಿವರಣೆಗೆ ಮಾತ್ರ ಅಂಟಿಕೊಳ್ಳದೆ ಇಡಿಯ ಜೀವನ ಮತ್ತು ಅನುಭಾವಗಳಿಂದ ಅಂಕುರಗೊಳ್ಳುವ ಸ್ಫುರಣಜ್ಞಾನ (Intuition) ವನ್ನು

ಅಂಗೀಕರಿಸಿದಾಗ ತತ್ತ್ವಜ್ಞಾನದ ಬಗೆಗೆ ಈ ನವೀನದೃಷ್ಟಿಯು ಮೂಡಲು ಅವಕಾಶವುಂಟಾದೀತು! ಶ್ರೀ ಅರವಿಂದರು ತತ್ತ್ವಜ್ಞಾನಕ್ಕೆ ಜೀವನವನ್ನೇ ತಳಹದಿಯಾಗಿರಿಸಿಕೊಂಡಿದ್ದಾರೆ. ಆದುದರಿಂದ ಅವರದು ಪರಂಪರಾಗತವಾಗಿ ತಿಳಿಯುತ್ತ ಬಂದ ತತ್ತ್ವಜ್ಞಾನವಲ್ಲ, ವೈಭವಯುಕ್ತವಾದ ದಿವ್ಯಜೀವನವನ್ನು ಆಂತರಿಕ ಪ್ರೇರಣೆಯರಿತು ಕ್ರಮಕ್ರಮವಾಗಿ ಅರಳುವಂತೆ ಸರಿಯಾದ ರೀತಿಯಲ್ಲಿ ವಿವರಿಸುವದೇ ಅವರಿಗೆ ತತ್ತ್ವಜ್ಞಾನವಾಗಿಹುದು.

## ಶಕ್ತಿಯಲ್ಲಿ ಭಾಷ್ಯ

ಈ ಪ್ರೇರಣೆಯ ವೈಶಿಷ್ಟ್ಯಕ್ಕೆ ಶ್ರೀ ಅರವಿಂದರು 'ಶಕ್ತಿ' ಎಂದು ಕರೆಯುತ್ತಾರೆ. ಈ ಪರಾಶಕ್ತಿಯು ಸೃಷ್ಟಿಯ ಮೂಲದಲ್ಲೆಲ್ಲ ಹುದುಗಿದೆ. ಅಂತರಂಗದಲ್ಲಾಗಲಿ, ಬಹಿರಂಗದಲ್ಲಾಗಲಿ, ವ್ಯಕ್ತವಾಗುವ ಆದರ ಸ್ವರೂಪಗಳು ವಿವಿಧವಾಗಿ ಕಾಣಬಹುದು. ಆದರೆ ಈ ಪರಾಶಕ್ತಿಯು ಮೂಲತಃ ಅಖಂಡವಾಗಿ ಒಂದೇ ಒಂದಾಗಿದೆ. ಮೂಲ ಶಕ್ತಿಯು ಆವಿರ್ಭಾವಗೊಳ್ಳುವಾಗ ಪ್ರಕೃತಿಯಿಂದೊದಗುವ ಒತ್ತಡವನ್ನು ಅಪ್ರತಿಹತ ವಾಗಿ ಎದುರಿಸುವ ಸಾಮರ್ಥ್ಯಕ್ಕನುಗುಣವಾಗಿ ವಿವಿಧ ರೂಪಗಳನ್ನು ತಳೆಯುತ್ತದೆ. ಬಾಹ್ಯಪ್ರಕೃತಿ ಮತ್ತು ಅಂತಃಸ್ಫೂರ್ತಿ ಇವು ಈ ಶಕ್ತಿಯ ದ್ವಿವಿಧ ಸ್ವರೂಪಗಳು. ಈ ಶಕ್ತಿಯು ಹೆಚ್ಚು ಹೆಚ್ಚು ಅಂದ ಚಂದವಾದಾಗ ಮತ್ತು ಬಿಡಿಬಿಡಿಯಾದ ಅಂಶಗಳನ್ನೆಲ್ಲ ಹೊಂದಿಸಿಕೊಂಡು ಒಂದಾಗಿ ತೋರಿದಾಗ ಸುಂದರ ಸಮನ್ವಯ ಸ್ವರೂಪವನ್ನು ವ್ಯಕ್ತಗೊಳಿಸುವದು. ಇದರಿಂದಾಗಿ ಶರೀರ ಪ್ರಾಣ ಮನ ಮತ್ತು ಘನಮನದಲ್ಲಿಯೂ ಸಹ ಹುದುಗಿದ ಶಕ್ತಿಯ ಬಗೆಬಗೆಯ ಸ್ವರೂಪಗಳಿಗೆ ಅವಕಾಶವುಂಟಾಗುತ್ತದೆ. ಆದರೆ ಶಕ್ತಿಯು ಶಿವನಲ್ಲಿ ಆಶ್ರಯಹೊಂದುತ್ತದೆ. ಶ್ರೀ ಅರವಿಂದರು ಶಿವ–ಶಕ್ತಿಗಳಲ್ಲಿ ಸತ್ಯ–ಸೌಂದರ್ಯಗಳಲ್ಲಿ ಅವಿರಳವಾದ ಸಾಮರಸ್ಯವನ್ನು ಕಂಡಿದ್ದಾರೆ. ಈ ಶಿವಶಕ್ತಿಯ ಅವಿನಾಭಾವ ಸಂಬಂಧವು ಅವರಿಗೆ ಆತ್ಯಂತಿಕ ಘನವಾದ ಸತ್ಯವಾಗಿದೆ. ಆದಕ್ಕಾಗಿ ಪ್ರಶಾಂತತೆಯ ಗೌರವಕ್ಕೆ ಗಮನವಿತ್ತಂತೆ ಜೀವನದ ಗಾಂಭೀರ್ಯಕ್ಕೂ ಅವರು ಗಮನವನ್ನು ನೀಡಿದ್ದಾರೆ. ಅವರು ತಮ್ಮ ಗ್ರಂಥವಾದ 'ದಿವ್ಯ ಜೀವನ' ದಲ್ಲಿ "ಶಿವ ಮತ್ತು ಕಾಳಿ, ಬ್ರಹ್ಮ ಮತ್ತು ಶಕ್ತಿ, ಇವು ಒಂದರಿಂದೊಂದು ಭಿನ್ನವಾಗಿಲ್ಲ; ಒಂದಕ್ಕೊಂಂದು ಹೊಂದಿಕೊಂಡಿರುತ್ತವೆ. ಪ್ರಪಂಚವನ್ನೆಲ್ಲ ವ್ಯಾಪಿಸಿದ ಶಕ್ತಿಯು ಪ್ರಶಾಂತ ವಾದ ಸ್ಥಿತಿಯಲ್ಲಿರಬಹುದು. ಇಲ್ಲವೆ ಅದು ಪ್ರಕ್ಷುಬ್ಧವಾದ ಗತಿಯಲ್ಲಿರಬಹುದು. ಪ್ರಶಾಂತವಾದ ಸ್ಥಿತಿ ಯಲ್ಲಿದ್ದಾಗಲೂ ಅದಕ್ಕೊಂದು ಅವಕಾಶವುಂಟು. ಆದರೆ ಅದು ಆಗ ಇಲ್ಲವೆಂದಾಗಲಿ ಕುಂದಿದೆಯೆಂದಾ ಗಲಿ ಇಲ್ಲದೆ ಮೂಲತಃ ಪರಿವರ್ತನೆಯಾಗಿದೆಯೆಂದಾಗಲಿ ಅರ್ಥವಲ್ಲ" ಎಂದು ಹೇಳುತ್ತಾರೆ.

## ಲೀಲಾಸ್ಥಾನ

ಈ ವಿಶ್ವವು ದೇವದೇವನೆನ್ನಿಸಿಹ ಕರ್ತನ ಲೀಲಾಸ್ಥಾನವೆಂದು ಶ್ರೀ ಅರವಿಂದರು ಬಗೆಯುತ್ತಾರೆ. ಮತ್ತು ಆನಂದದ ಅಳವಡಿಕೆಗಾಗಿಯೇ ದಿವ್ಯಲೀಲೆಯ ಗುರಿಯಿದೆಯೆಂದೂ ಅವರು ಭಾವಿಸಿದ್ದಾರೆ. ಜೀವನದ ಪ್ರತಿಯೊಂದು ಸ್ಪಂದನವು, ಸಂಕಲ್ಪಶಕ್ತಿಯ ಪ್ರತಿಯೊಂದು ಸ್ಫುರಣೆಯು ಆ ದಿವ್ಯಾನಂದದ ಲಹರಿಯೇ ಆಗಿದೆ. ಯಾಕಂದರೆ ಅದು ಅಖಂಡತೆಯಿಂದೊಡಗೂಡಿ ಮೂಡುವ ಶಕ್ತಿಯ ಪರಿಪೂರ್ಣತೆ ಯನ್ನು ಪ್ರಕಟಿಸುವದು. ಆನಂದವು–ಪರಿಪೂರ್ಣತೆಯ ಆನಂದ, ಕ್ರಿಯಾಪ್ರವೃತ್ತಿಯ ಆನಂದ ಎಂದು–ಇತ್ತೆರ ನಾಗಿದೆ. ತಾಳಮೇಳದಿಂದ ಬೆರೆತ ಆನಂದಕ್ಕೆ ಪರಿಪೂರ್ಣತೆಯ ಆನಂದವೆಂದು ಹೆಸರು; ಯಾಕಂದರೆ ಎಂದೆಂದಿಗೂ ಪರಿಪೂರ್ಣವಾದ, ಎಂದೆಂದಿಗೂ ಪರಿಣತವಾದ, ಅನಂತವಾದ ಜೀವನದಲ್ಲಿ ತಾಳಮೇಳದ ತಿಳಿವಳಿಕೆಗೆ ಎಂದೂ ಚ್ಯುತಿಯಿಲ್ಲ. ಒಂದು ವೇಳೆ ಆ ಜೀವನದಲ್ಲಿ ಮಾರ್ಪಾಟಗಳುಂಟಾದರೆ–ಎಡೆವಿಡದ

ಮಾರ್ಪಾಟಗಳುಂಟಾಗುವದು ಸಹಜವೇ!—ಅವು ತಾಳಮೇಳಗತಿಯ ನಿಯಮಕ್ಕನುಗುಣವಾಗಿ ಉಂಟಾಗುತ್ತವೆ. ಕ್ರಿಯಾಪ್ರವೃತ್ತಿಯಲ್ಲಿ ತೋರುವ ಆನಂದವು ಜೀವನದ ಗತಿಯಲ್ಲಿ ಪೂರ್ಣತೆಯನ್ನು ಕಾಪಾಡಿಕೊಳ್ಳುವುದು ಪರಿಪೂರ್ಣತೆಯ ಆನಂದವು ಮಾತ್ರ ತನ್ನ ಅಖಂಡತ್ವವನ್ನು ನಿರಂತರವಾಗಿ ಕಾಯ್ದುಕೊಳ್ಳುವುದು. ಕಾರ್ಯಪ್ರವೃತ್ತಿಯು ಮಾನವಜೀವನಕ್ಕೆ ದಿವ್ಯಜೀವನದ ವ್ಯಾವಹಾರಿಕ ತಳಹದಿಯನ್ನು ಹಾಕುವದು ಶಕ್ಯವಿದೆ ಎಂದು ತಿಳಿಸಿ, ಆ ದಿಶೆಯಲ್ಲಿ ಶ್ರೀ ಅರವಿಂದರು ಕಾರ್ಯೋನ್ಮುಖರಾದರು. ಆ ದಿವ್ಯ ಜೀವನಕ್ಕೆ ಆನಂದ, ಶಕ್ತಿ ಇವೇ ಪ್ರಾಮುಖ್ಯವಾದ ಲಕ್ಷಣಗಳು. ಮಾನವಜನಾಂಗವು ಕ್ರಮೇಣ ಪ್ರಗತಿಯನ್ನು ಪಡೆಯುವದೆಂದು ಅವರು ದೃಢವಾಗಿ ನಂಬುತ್ತಾರೆ. ಆದರೆ ಮಾನವನ ವಿಚಾರವಿಕಾಸದಲ್ಲಿ ಕಟುವಾದ ಕೊಳೆ—ಸೀಳುಗಳುಂಟಾಗಿರುವವೆಂಬುದನ್ನರಿತು ಅವರು ಭಯಚಕಿತರಾಗಿದ್ದಾರೆ. ಸಂಸಾರಿಯು ದೇವನ ಅಸ್ತಿತ್ವವನ್ನೂ ಅರಿವಿನ ಅವಸ್ಥೆಯನ್ನೂ ಅಲ್ಲಗಳೆಯುವದಾಗಲಿ, ಸಂನ್ಯಾಸಿಯು ಅನಾದ್ಯನಂತವಾದ ಪರಮವಸ್ತುವಿನ ಆನಂದದಲ್ಲಿಯೇ ಮುಳುಗಿ ವಿಶ್ವದ ಆಗುಹೋಗುಗಳನ್ನೂ ಮರವೆಯನ್ನೂ ಗಮನಿಸದಿರುವದಾಗಲಿ ಅವರನ್ನು ಆಲೋಚನೆಗೀಡುಮಾಡಿವೆ. ಪ್ರಾಪಂಚಿಕ ಪಾರಮಾರ್ಥಿಕ ದೃಷ್ಟಿಯ ಇವರೀರ್ವರಲ್ಲಿ, ವಿಜ್ಞಾನಿ ಆತ್ಮಜ್ಞಾನಿಗಳೆನಿಸಿದ ಈ ಇಬ್ಬರಲ್ಲಿ ತೋರಿರುವ ಈ ಕೊಲ್ಲಿಗೆ ಸೇತುವೆಯನ್ನು ಕಟ್ಟಲು ಶ್ರೀ ಅರವಿಂದರು ಪ್ರಯತ್ನಿಸಿದ್ದಾರೆ. ಮಾನವಪ್ರಗತಿಯು ಪ್ರಕೃತಿಯ ನೆರವಿನತ್ತಣಿಂದಲೂ ಸಾಗುವದು; ಪುರುಷನ ನೆರವಿನತ್ತಣಿಂದಲೂ ಸಾಗುವದು—ಎಂದು ಅವರು ಹೇಳುವರು. ತೋರಿಕೆಗೆ ವಿರುದ್ಧವಾಗಿ ಕಾಣುವ ಪಡುವಣದವರ ಮತ್ತು ಮೂಡಣದವರ ಸಂಸ್ಕೃತಿಗಳಲ್ಲಿ ಒಂದು ಬೆಸಗೆಯನ್ನುಂಟುಮಾಡಲು ಅವರು ಹವಣಿಸಿ ಅವೆರಡೂ ಸಂಸ್ಕೃತಿಗಳನ್ನು ಬೆರಸುವದರಿಂದಲ್ಲ, ಆದರೆ ಆಧ್ಯಾತ್ಮಿಕ ಸಾಮರಸ್ಯವನ್ನು ಅಳವಡಿಸಿಕೊಳ್ಳುವದರಿಂದ ಒಂದು ಸಮನ್ವಯವನ್ನು ಉಂಟುಮಾಡಲು ಅವರು ಹಂಬಲಿಸುತ್ತಾರೆ. "ನಮ್ಮ ಆದರ್ಶವಾವುದು?" ಎಂದು ಪ್ರಶ್ನಿಸಿ ಅದಕ್ಕುತ್ತರವನ್ನು ತಾವೇ ಹೀಗೆ ಹೇಳಿರುವರು : "ಬಾಹ್ಯ ಹಿತಾಹಿತ ಸಂಬಂಧದಿಂದುಂಟಾದ ಸಂಗದಿಂದ ಮಾತ್ರವಲ್ಲ, ಅಂತರಂಗದ ಏಕತ್ವದಿಂದ ಮಾನವಜನಾಂಗದಲ್ಲಿ ಐಕ್ಯತೆಯು ಒಡಮೂಡಬೇಕು. ಪಶುಜೀವನದಿಂದ ಹಾಗು ಹೊನ್ನೇ ಪ್ರಾಣವೆಂಬ ಹಣಗಾಟದ ಜೀವನದಿಂದ, ಅಥವಾ ಕೇವಲ ಬೌದ್ಧಿಕ ವ್ಯವಹಾರದ ಜೀವನದಿಂದ ಹಾಗು ರಸಿಕಜೀವನದಿಂದ—ಒಟ್ಟಾರೆ, ಲೌಕಿಕಜೀವನದಿಂದ ಪಾರಮಾರ್ಥಿಕ ಜೀವನದ ಪರಮೈಶ್ವರ್ಯದಲ್ಲಿ ಮಾನವನು ಕಾಲಿಡಬೇಕು. ಕ್ರಿಮಿಕೀಟಕ-ಪಶುಪಕ್ಷಿಗಳ ಅವಸ್ಥೆಯಿಂದ ಮಾನವನ ನಿಲುವು ರೂಪಾಂತರಹೊಂದಿತೆಂದು ವಿಜ್ಞಾನವು ತಿಳಿಸುವದು. ಮಾನವ ಜೀವನವು ಇನ್ನುಳಿದ ಪ್ರಾಣಿಗಳ ಜೀವನಕ್ಕಿಂತ ಮಿಗಿಲಾದುದು, ನಮ್ಮೀ ಮಾನವ ಜೀವನಕ್ಕಿಂತ ಅತಿಮಾನವನ ಜೀವನವು ಮಿಗಿಲಾದುದು. ಮಾನವನ ತನು, ಅವನಲ್ಲಿ ವಿಶಿಷ್ಟ ಇಂದ್ರಿಯವಾಗಿರುವ ಅವನ ಮನ ಇವುಗಳಲ್ಲಿ ಅತಿಮಾನವ ಜೀವನವು ಮೊಳೆತು ಬೆಳೆದು ಬಾಳಲೆಂದು ಪ್ರಭುಶಕ್ತಿಯು ಇಳಿಯಬೇಕು. ಮಾನವ ಜನಾಂಗದ ಸಾಮರಸ್ಯ, ಮಾನವನ ಪಾರಮಾರ್ಥಿಕ ಜೀವನಸೌಂದರ್ಯ, ಮಾನವನ ಅಂಗಾಂಗಗಳಲ್ಲಿ ಪ್ರಭುಶಕ್ತಿಯ ಪ್ರಾದುರ್ಭಾವ-ಈ ಮೂರೂ ಒಂದಾಗಿ ಹೊಂದಿಕೊಳ್ಳಬೇಕು. ಮಾನವತೆಯ ಐಕ್ಯ ಮತ್ತು ಅತಿಮಾನವತೆ ಇವು ಪರವಸ್ತುವಿನಲ್ಲಿ ಏಕತಾನವನ್ನು ಪಡೆದು ಜೀವಿಸುವದರಿಂದ ಮಾತ್ರವೆ ಸಾಧ್ಯ !"

## ಶ್ರೀ ಅರವಿಂದರ ಯೋಗ

ಅರಿವಿನ ಸಪ್ತ ಅವಸ್ಥೆಗಳ ಬಗೆಗೆ ಪರಂಪರಾಗತವಾಗಿ ಬಂದ ತಿಳಿವಳಿಕೆಯನ್ನೇ ಅವಲಂಬಿಸಿ ಶ್ರೀ ಅರವಿಂದರು ತಮ್ಮ ಯೋಗದ ರೂಪರೇಷೆಯನ್ನು ಕೊಟ್ಟಿರುವರು. ಮನಃಶಾಸ್ತ್ರದ ದೃಷ್ಟಿಯಿಂದ ಈ ಅವಸ್ಥೆಗಳು ಮಾನವನ ಅಂತರಂಗದಲ್ಲಿ ಒಂದರಮೇಲೊಂದು ಇರುತ್ತವೆಯೆಂದು ಭಾವಿಸುತ್ತಾರೆ.

ವಿಶ್ವೋತ್ಪತ್ತಿ ಶಾಸ್ತ್ರದ ದೃಷ್ಟಿಯಿಂದ ಇವು ಒಂದರ ಸುತ್ತು ಮತ್ತೊಂದಾಗಿ ಇದ್ದು ಸಪ್ತಲೋಕಗಳೆಂದು ಹೆಸರ್ವೆತ್ತಿವೆಯೆಂದು ತಿಳಿಯುತ್ತಾರೆ. ಶರೀರ, ಪ್ರಾಣ, ಮನ, ಘನಮನ, ಜ್ಞಾನ, ಸಂಕಲ್ಪಶಕ್ತಿ, ಆತ್ಮ– ಇವು ಏಳೂ ಅರಿವಿನ ಅವಸ್ಥೆಗಳೆಂದೂ ಮನಃಶಾಸ್ತ್ರದ ದೃಷ್ಟಿಯಿಂದ ಹೇಳುತ್ತಾರೆ. ಶರೀರ ಮತ್ತು ಆತ್ಮ, ಇವು ಎರಡು, ಇರವಿನ ಕನಿಷ್ಠ ಮತ್ತು ಶ್ರೇಷ್ಠ ಪದವಿಯನ್ನು ಸೂಚಿಸುವ ಪದಗಳು. ಘನಮನವು ಸತ್ತ್ವ-ರಜ-ತಮೋಮಯವಾದ ಮೊದಲಿನ ಅರ್ಧಭಾಗವೆನಿಸುವ ಪರಾಜ್ಞಾನ ಮತ್ತು ಸತ್-ಚಿತ್-ಆನಂದ ಮಯವಾದ ಎರಡನೆಯ ಅರ್ಧಭಾಗವೆನಿಸುವ ಅಪರಾಜ್ಞಾನ ಇವುಗಳಿಗೆ ಮಧ್ಯವರ್ತಿಯಾಗಿರುತ್ತದೆ. ಮೊದಲಿನ ಅರ್ಧದ ಮುಖಾಂತರ ಕೆಳಗಿನಿಂದ ಮೇಲೇರುವುದರಲ್ಲಿ ಮತ್ತು ಎರಡನೆಯ ಅರ್ಧದ ಮುಖಾಂತರ ಮೇಲಿನಿಂದ ಕೆಳಗಿಳಿಯುವುದರಲ್ಲಿ ಸಾಧನದ ರಹಸ್ಯವಿರುತ್ತದೆ. ಈ ಸಾಧನೆಯಿಂದಾಗಿ ಮೇಲಿರುವ ಪುರುಷ ಪ್ರಯತ್ನವೂ ಕೆಳಗಿಳಿಯುವ ಪ್ರಭುಕಾರುಣ್ಯವೂ ಮಧ್ಯವರ್ತಿಯಾದ ಕಾರಣಸೃಷ್ಟಿಯ ಅರಿವಿನ ಅವಸ್ಥೆಯಲ್ಲಿ ಬೆರೆತು, ಘನಮನದ ಶಕ್ತಿಸಾಮರ್ಥ್ಯಗಳಲ್ಲಿ ಅರಳಿಕೊಳ್ಳುವದು. ಹೀಗೆ ಅನುಭವ ಸಾಕ್ಷಾತ್ಕಾರವು, ಮೇಲೇರುವ ಪುರುಷಭಕ್ತಿ ಕೆಳಗಿಳಿಯುವ ಪ್ರಭುಶಕ್ತಿ ಇವುಗಳಿಂದ ಕೂಡಿಕೊಂಡು ಇಬ್ಬಗೆಯಾಗಿರುತ್ತದೆ. ಪ್ರಕೃತಿಯ ವಿಕಾಸಕ್ರಮದಲ್ಲಿ, ಸೃಷ್ಟಿಯಲ್ಲಿ ಈ ಅನುಭವ ಸಾಕ್ಷಾತ್ಕಾರವು ನಿರಂತರವಾಗಿ ಸಾಗಿರುತ್ತದೆ. ಆದರೆ ಮಾನವನಲ್ಲಿ ಈ ಬಗೆಯ ತಿಳಿವಳಿಕೆ ತಲೆದೋರಿದಾಗ ಮಾತ್ರ ಅದು ಜೀವನದ ಸಾಧನವಾಗಿ ಪರಿಣಮಿಸುತ್ತದೆ. ವಿಕಾರವನ್ನು ಪಡೆಯುವ ಎಲ್ಲದರಲ್ಲಿ ಪರಬ್ರಹ್ಮವು ಮೊದಲಿಗೆ ಪರಿಪೂರ್ಣವಾಗಿಯೇ ತಾನೇ ತಾನಾಗಿರುತ್ತದೆ. ಅದು ವಿಕಾಸದ ಕಳಸಕ್ಕೆ ಕಣಜವಾಗಿಯೂ ಕಂಗೊಳಿಸುತ್ತದೆ. ಘನಮನವು ತ್ವರಿತಜ್ಞಾನಲಕ್ಷಿತವಾದ ಪರವಸ್ತುವಿನ ಅಂಶವೆ ಆಗಿದ್ದು, ಅರಿವಿನ ಅಧಃಸೃಷ್ಟಿಯನ್ನು ಬೆಳಸಿ ಉನ್ನತಗೊಳಿಸುವದು; ಕೊನೆಗೆ ಅದನ್ನು ಸಾಮರಸ್ಯದ ನಿಲವಿನತ್ತ ಒಯ್ಯುವದು. ಮಿಥ್ಯೆಗೆ ವಿರೋಧವಾಗಿ ಸತ್ಯವನ್ನು ಕಾಣುವಂತೆ ಅಥವಾ ವಿಶ್ವದ ರಚನೆಯಲ್ಲಿ ಪೂರ್ಣತ್ವವು ಎಂದೂ ಕಾಣದಿರುವಂತೆ ಅದು ವಸ್ತುಗಳ ಸತ್ಯತೆಯನ್ನು ಗರ್ಭೀಕರಿಸಿಕೊಂಡಿರುವ ದಿಲ್ಲ. ಆದರೆ ವಿಶ್ವದ ರಚನೆಗಳೆಲ್ಲ ವಿಕಾಸದ ಲಕ್ಷಣವನ್ನು ತಿಳಿಸುವ ಪದಗಳಾಗಿರುವಂತೆ ಅದರ ಸತ್ಯತೆ ಪೂರ್ಣತೆಗಳನ್ನು ಸೂಚಿಸುವ ಅರ್ಥದಲ್ಲಿ ಆ ಘನಮನದ ಆಳವನ್ನರಿಯಬೇಕು. ಶ್ರೀ ಅರವಿಂದರು ಇಂತಹ ಘನಮನದ ಅರಿವಿನ ಅವಸ್ಥೆಯನ್ನು ಕಂಡು ಅರಿತವರು ಈ ದಿಸೆಯಿಂದ ಅವರ ಬೆಂಬಳಿಗೆ ಅತುಲವಾದ ಬೆಳ್ಜಸವು ಕಾದಿರುತ್ತದೆ.

## ಅತಿಮಾನವ

ಅತಿಮಾನವ ಅಥವಾ ಶರಣ ಈ ವಿಚಾರದಲ್ಲಿ ಶ್ರೀ ಅರವಿಂದರ ತತ್ತ್ವಜ್ಞಾನದ ನಾವೀನ್ಯತೆಯನ್ನು ಕಾಣಬೇಕು. ನಿಟ್ಸೆ ಎಂಬವನೂ ಅತಿ ಮಾನವನ ಬಗೆಗೆ ತಿಳಿಸಿದ್ದಾನೆ. ಆದರೆ ಅವನಲ್ಲಿದ್ದಂತೆ ಇಲ್ಲಿ ಮಾನವನ ಉದಯದ ವಿಚಾರವಿಲ್ಲ. ಇಲ್ಲಿ ಮಾನವನಲ್ಲಿ ಪರವಸ್ತುವಿನ ದಿವ್ಯವಾದ ಅವತಾರವುಂಟು. ಮಾನವನ ಶಕ್ತಿ ಸಾಮರ್ಥ್ಯಗಳು ದಿವ್ಯಶಕ್ತಿಯಲ್ಲಿ ಹೊಂದುಗೆಗೊಂಡು ಮಾರ್ಪಡುವ ಕ್ರಮದ ವಿಚಾರವುಂಟು. ಮಾರ್ಪಡಿಸುವ ದಿವ್ಯಶಕ್ತಿಯ ಸಹಾಯಸಂಪದದಿಂದ ಮಾನವನ ನಿರ್ಮಾಣವಿದೆಯೇ ಹೊರತು ನಿರಂತರವಾಗಿ ಮೇಲೆ ಮೇಲೆ ಏರುವ ಪುರುಷಪ್ರಯತ್ನದ ಫಲವೊಂದರಿಂದಲೆ ಮಾನವನ ನಿರ್ಮಾಣವಿಲ್ಲ. ಪ್ರಭುಕಾರುಣ್ಯವು, ಉಪಕರಣವೆನಿಸುವ ಒಂದು ವ್ಯಕ್ತಿಯನ್ನು ತನ್ನ ಪ್ರಭೆಯಲ್ಲಿ ಸ್ವೀಕರಿಸಿ ಅದರಲ್ಲಿ ತನ್ನ ಶಕ್ತಿ ಸಾಮರ್ಥ್ಯಗಳನ್ನು ಹರಿಬಿಟ್ಟಾಗ ಅತಿ ಉಚ್ಚವಾದ ಸ್ಫುರಣಜ್ಞಾನವೂ ಅಳವಿಗೆ ನಿಲುಕದ ಶಕ್ತಿಪ್ರಭಾವವೂ ಅಡೆ ತಡೆಗಳನ್ನು ಲೆಕ್ಕಿಸದೆ ಉತ್ಕಟವಾದ ಸಂಕಲ್ಪ ಶಕ್ತಿಯೂ ತುಂಬಾ ಆವರಿಸುವ ಅತುಲ ಪ್ರೇಮರಸವೂ ಆಗಿ ಅಲ್ಲಿ ಹೊರಹೊಮ್ಮಿ ತೋರುವವು. ಇಳಿದು ಬರುವ ಪ್ರಭುಕಾರುಣ್ಯದ ಪ್ರಮಾಣಕ್ಕನುಗುಣವಾಗಿ,

ಮಾರ್ಪಾಟಗೊಳ್ಳುವ ಏರುತ್ತಲಿರುವ ಪುರುಷನ ಆಧಾರಶುದ್ಧಿಗನುಗುಣವಾಗಿ ಈ ಅತಿಮಾನವರಲ್ಲಿ-ಶರಣರಲ್ಲಿ ಅನೇಕ ತರಗತಿಗಳನ್ನು ಕಾಣಬಹುದು. ಇದು ಅಲ್ಲದೆ ಮೇಲಿನಿಂದ ಓತಪ್ರೋತವಾಗಿ ಸುರಿಯುವ ಪ್ರಭುಶಕ್ತಿಯನ್ನು ಹಿಡಿದಿಟ್ಟುಕೊಳ್ಳಲಿಕ್ಕೆ ಯೋಗ್ಯವಾದ ಆಧಾರವೆನಿಸುವ ಆ ವ್ಯಕ್ತಿಯಲ್ಲಿ ತಕ್ಕ ಬಲವೂ ಇರಲಿಕ್ಕಿಲ್ಲ. ಒಮ್ಮೊಮ್ಮೆ ಅಂತರ್‌ದೃಷ್ಟಿಯುಂಟಾಗುವ ಆಚೆಗೆ ದಿವ್ಯಶಕ್ತಿಯು ಇಳಿಯುವದನ್ನೂ ಮಾಡ ಲಿಕ್ಕಿಲ್ಲ. ಇನ್ನುಳಿದ ಅಂಗಾಂಗಗಳನ್ನು ಇದ್ದಕ್ಕಿದ್ದಂತೆ ಇರಿಸಿ ಸ್ಫುರಣಜ್ಞಾನಕ್ಕೆ ಅವಕಾಶವಿಲ್ಲದಂತೆಯೂ ಆಗಿ ಬಿಡಬಹುದು. ಇಂತಹ ವ್ಯಕ್ತಿಗಳು ಆತ್ಯಂತಿಕವಾದ ಮತ್ತು ಅತಿ ಸೊಬಗಿನ ಮಾರ್ಪಾಟನ್ನು ವ್ಯಕ್ತ ಗೊಳಿಸಲಾರವು. ದಿವ್ಯ ಪ್ರಭೆಯು ತನ್ನ ಅಖಂಡವಾದ ಸಾಮರ್ಥ್ಯ, ಕಾರುಣ್ಯ, ಜ್ಞಾನ, ಸಮರಸಗಳಿಂದ ಮಾನವನಲ್ಲಿ ಸಂಪೂರ್ಣವಾಗಿ ಇಳಿದು ಬರುವದರಲ್ಲಿಯೇ ಅಂತಿಮವಾದ ಪರಮಾದರ್ಶದ ಪೂರ್ಣತೆ ಯಿರುವುದೆಂದು ಶ್ರೀ ಅರವಿಂದರು ಭಾವಿಸಿದ್ದಾರೆ. ಮಾನವನಲ್ಲಿ ಪ್ರಾಮುಖ್ಯವಾದ ಎಲ್ಲ ಅಂಶಗಳ ದಿವ್ಯ ಮತ್ತು ಸಮನ್ವಯ ಪರಾಕಾಷ್ಠತೆಯನ್ನೇ ಅವರ ಅತಿಮಾನವನು-ಶರಣನು ಪ್ರಕಟಿಸುತ್ತಾನೆ. ಈ ಬಗೆಯಲ್ಲಿ ಅವರು ಹೇಳುತ್ತಾರೆ. "ದೇವನು ಗೂಢಾತ್‌ಗೂಢತರವಾಗಿದ್ದಾನೆ. ನಾವು ತಿಳಿಯುವಷ್ಟು ಸುಲಭವಾಗಿ ಅವನ ನಿಲವಿಲ್ಲ. ದೇವತ್ವದ ಅನೇಕ ಸಿದ್ಧಾಂತ ಕಲ್ಪನೆಗಳಲ್ಲಿ ಯಾವುದೊಂದರ ಕೇವಲ ಆರಾಧನೆಯಿಂದ ಒಂದು ನೇರವಾದ ದಾರಿಯನ್ನು ಕಂಡು ಆ ಗೂಢವನ್ನರಿಯಬೇಕೆಂದು ಮಾನವ ಬುದ್ಧಿಯು ಹಂಬಲಿಸು ವದು. ಆನಂದ ಶಕ್ತಿ ಸಮರಸಗಳೇ ಕುರುಹಾದ ಭಕ್ತಿಜ್ಞಾನಗಳು ದೇವನ ಹಲಕೆಲವು ನಾಮಗಳನ್ನು ನಿರೂಪಿಸುತ್ತಿವೆ. ಅವೆಲ್ಲ ಪೂಜ್ಯವಾಗಿದ್ದರೂ ಅವುಗಳಲ್ಲಿ ಕೆಲವನ್ನು ಮಾತ್ರ ಮುಖ್ಯವೆಂದು ಗ್ರಹಿಸಿ ಅನುಸರಿಸುವದು—ಮೊದಲಮೆಟ್ಟಿನ ಉತ್ಸಾಹಶಕ್ತಿ ಕಂದಿ ಕಳೆಗುಂದಿದ ಬಳಿಕ ಅವನು ನಮ್ಮಿಂದ ಓರೆಯಾ ಗಲಿ, ನಮ್ಮನ್ನವನು ಬಿಟ್ಟುಕೊಡಲಿ ಎಂದು ಬಯಸಿ ಬಿನ್ನಹವನ್ನು ಮಾಡಿಕೊಂಡತೆಯೇ ಸರಿ. ಒಂದನ್ನೇ ಗುರಿಯಾಗಿಟ್ಟುಕೊಂಡ ಸಾಮರಸ್ಯವೂ ಸಮರಸದ ಆ ಪ್ರಕಟತೆಯನ್ನು ನಿಲ್ಲಿಸಿಬಿಡುವದು. ಗೂಢವಾದ ಜ್ಞಾನಯುಕ್ತ ಭಾವ ಪ್ರಧಾನವಾದ ಸಾಮರಸ್ಯವು ಒಂದು ಒಡೆಯಲಾಗದ ಒಗಟವೇ ಸರಿ. ಭಕ್ತಿಭಾವನೆ ಯಿಂದ ತುಂಬಿ ತುಳುಕುವ ಹೃದಯವು ಜ್ಞಾನದ ನೆರವಿನಿಂದ ಪ್ರಶಾಂತವಾದ ತನ್ಮಯತೆಯಲ್ಲಿ ಪರಿವರ್ತನೆ ಗೊಂಡು ಪ್ರಬಲವಾಗಿ ಸ್ಪಂದನೆಗೊಳ್ಳುವಾಗ, ಶಕ್ತಿಯ ಬಾಹುಬಲವು ವಿಶ್ವದ ಹಿತಸಾಧನೆಗಾಗಿ ಆನಂದ ಪ್ರಕಾಶಗಳ ಸಂಪೂರ್ಣವಾದ ಕಣಂಬೆಳಗಿನಲ್ಲಿ ಅವಿಶ್ರಾಂತವಾಗಿ ಕಾರ್ಯಗೆಯ್ಯುವಾಗ, ಥಳಥಳಿಸುವ ಜ್ಞಾನಪ್ರಭೆಯು ಹೃದಯದ ಮುಸುಕುಮುಸುಕಾದ ಭಾವಸ್ಫುರಣೆಗಳನ್ನು ಸ್ವೀಕರಿಸಿ ಪಲ್ಲಟಗೊಳಿಸಿ ಅತಿ ಎತ್ತರದ ಸ್ಥಾನದಲ್ಲಿರುವ ಸಂಕಲ್ಪಶಕ್ತಿಯ ಕಾರ್ಯಕಲಾಪಗಳಿಗೆ ಸಹಾಯ ಹಸ್ತವನ್ನು ನೀಡುವಾಗ, ಈ ಎಲ್ಲ ದೇವರುಗಳು ಎಲ್ಲರೊಳು ತಾನಿರ್ದು ಎಲ್ಲವ ವ್ಯಾಪಿಸಿ ಪರಿವರ್ತನೆಗೊಳಿಸುವ ತ್ಯಾಗಾಂಗದ ಸಿದ್ಧಾಸನದಲ್ಲಿ ಮಂಡಿಸಿದಾಗ ಮಾನವನಿಗೆ ಅಖಂಡವಾದ ಅತೀಂದ್ರಿಯದ ನಿಲವು ಕೈಸೆರೆಯಾಗುವದು. ಇದುವೆ ಅತಿಮಾನವತೆಯನ್ನು-ಶರಣಪದವಿಯನ್ನು ಪಡೆಯಲು ಶ್ರೇಷ್ಠವೂ ಜ್ಯೇಷ್ಠವೂ ಪ್ರೇಷ್ಠವೂ ಆದ ಮಾರ್ಗವು. ಅಹಂಕಾರದಿಂದ ಬೆರೆತುಕೊಂಡು, ಪ್ರಬಲವೂ ತೀಕ್ಷ್ಣವೂ ಆದ ನಾನು ನನ್ನದೆಂಬ ಮೊಂಡ ಸಂಸ್ಕಾರವು- ಮಾನವ ಜನಾಂಗವನ್ನು ದಾಸ್ಯಪಂಕದಲ್ಲಿ ದೂಡಿ ಅದರ ಮೇಲೆ ನಿರಂಕುಶ ಆಧಿಪತ್ಯ ನಡೆಯಿಸಬೇಕೆಂಬ ದುಷ್ಟ ಮಮಕಾರವು-ಆ ಅತಿಮಾನವತೆಯ, ಆ ಶರಣಪದವಿಯ ಬಟ್ಟೆಯನ್ನೆಂದೂ ತೋರದು."

## ಅಮರ ಶ್ರೀ ಅರವಿಂದರು

ಅತಿಮಾನವತೆಯ-ಶರಣಮಾರ್ಗದ-ಇಂತಹ ಅಧಿನಾಯಕನು ದೇಹದಿಂದ ನಮ್ಮನ್ನು ಅಗಲಿದರೂ ತನ್ನ ಆಧ್ಯಾತ್ಮಪ್ರತಿಭೆಯಿಂದ ಬೆಳಕನ್ನು ಬೀರಿ ಪರಿಣಾಮವನ್ನುಂಟುಮಾಡುವನು. ಆ ಬೆಳಕು ಮಾನವ

ಜನಾಂಗಕ್ಕೆಲ್ಲ ಅಪ್ರತಿಹತವಾದ ಚೈತನ್ಯವನ್ನಿತ್ತು ದಾರಿ ದೀಪವಾಗುವದು. ಅವರು ಸ್ವತಃ ದಿವ್ಯಪ್ರಭೆಯು ಪರಿಪೂರ್ಣವಾದ ಪ್ರಖರವಾದ ಅಳವಡಿಕೆಯಿಂದ ಅತಿಮಾನವ-ಶರಣರಾಗಿದ್ದು, ದಿವ್ಯಜೀವನದಲ್ಲಿ ಅಡಿಯಿಟ್ಟು ಬೆಳೆಯಬೇಕೆಂದು ಹಂಬಲಿಸುವ ಆತ್ಮರಿಗೆ ದೀಪಸ್ತಂಭವಾಗಿ ದಾರಿಯನ್ನು ತೋರಿಸುವರು. ಉಪನಿಷತ್ತುಗಳ ಮಾತುಗಳಲ್ಲಿ ತಿಳಿಸುವದಾದರೆ ಅವಿರಳವಾದ ಅರಿವನ್ನು ಅಳವಡಿಸಿಕೊಂಡುದರಿಂದ ಆತ್ಮಪ್ರಭೆಯು ಎತ್ತೆತ್ತ ನೋಡಿದರೂ ಸುತ್ತಿಸುತ್ತಿ ಪಸರಿಸುವದು. ಆ ಆತ್ಮನ ದನಿಯು ವಾಯುತರಂಗ ಗಳಲ್ಲಿ ನಿನಾದಗೊಂಡು ಬಹುದೂರ ಕೇಳಿಬರುವದು. ಅವನು ಮೂಡಿ ಬೆಳಗುವ ನೇಸರನಲ್ಲಿ ಹೊಳೆಹೊಳೆಯುತ್ತ ನಿಲ್ಲುವನು; ಮಿನುಗುವ ತಾರೆಗಳಲ್ಲಿ ಥಳಥಳಿಸಿ ಬೆಳಗುವನು; ಅರಳುವ ಹೂಗಳಲ್ಲಿ ಮಕರಂದವಾಗಿ ಕಂಪನೀವನು. ಅಂತಹ ಅಮರವಾದ ಶ್ರೀ ಅರವಿಂದರ ದಿವ್ಯಾತ್ಮಕ್ಕೆ ನಮ್ಮ ಈ ಭಕ್ತಿಭಾವ ಕುಸುಮವು ಸಮರ್ಪಿತವಾಗಲಿ !

—ಶ್ರೀ ಕುಮಾರಸ್ವಾಮಿಗಳು

ಈ ಲೇಖನದಲ್ಲಿ ಬರುವ ಹಲವು ಕನ್ನಡ ಶಬ್ದಗಳ ಆಂಗ್ಲರೂಪಗಳು:—

ಮನದ ವ್ಯವಹಾರ ಲಕ್ಷಣಬದ್ಧವಾದ ಮಾನವ=Man, the mental being.
ಮನ—ಪ್ರಕೃತಿ=Mind and Matter; ವಿವೇಕ—ಸಹಜಪ್ರವೃತ್ತಿ=Reason and Instinct; ಇಂದ್ರಿಯ—ಆತ್ಮ, Sense and Spirit. ಇಂದ್ರಿಯ ಸನ್ನಿಕರ್ಷ ಜ್ಞಾನದ ಸುಸಂಬದ್ಧ ವಿವರಣೆ=Systematisation of sense-experience. ಘನಮನ=Supermind. ತಾಳಮೇಳದ ತಿಳಿವಳಿಕೆ=Sense of Harmony. ತಾಳಮೇಳಗತಿ= Law of Harmony.

ಪುಟ, 23 ಪಂಕ್ತಿ, 19-23.

"*Shiva and Kali, Brahma and Shakti, are one and not two who are separable. Force inherent in existence may be at rest or it may be in motion; but when it is at rest it exists none the less and is not abolished, diminished or in any way essentially altered*"

*Prakriti has to reveal itself as Shakti of the Purusha.*

-Sri AUROBINDO.

ಪ್ರಕೃತಿಯು ಪುರುಷನ ಶಕ್ತಿಯಂತೆ ಆವಿಷ್ಕಾರವಾಗಬೇಕು.

—ಶ್ರೀ ಅರವಿಂದರು.

# ೨೯ ವರ್ಷಗಳ ಹಿಂದೆ..............

# ಯೋಗಿ ಅರವಿಂದರೊಡನೆ ಸಂಭಾಷಣೆಗಳು

## ೧

### ವಿದ್ಯಾರ್ಥಿಗಳಿಂದ ಸಹಜವಾದ ಪ್ರಶ್ನೆಗಳು: ಶ್ರೀ ಅರವಿಂದರ ಸ್ವಾರಸ್ಯಮಯ ಉತ್ತರಗಳು

ಪುದುಚೇರಿಯಲ್ಲಿ ೧೯೨೦ನೇ ಬೇಸಿಗೆಯಲ್ಲಿ ಮದರಾಸಿನ ವಿದ್ಯಾರ್ಥಿಗಳ ತಂಡವೊಂದು ಶ್ರೀ ಅರವಿಂದ ಘೋಷರನ್ನು ಸಂದರ್ಶನ ಮಾಡಿದಾಗ ನಡೆದ ಸಂಭಾಷಣೆಯು ವಿವರವಿದು:—

ಇತ್ತೀಚಿನಂತೆ ಅಲ್ಲದೆ ಅಂದು ಶ್ರೀ ಅರವಿಂದರ ದರ್ಶನಲಾಭವು ಸುಲಭ ಸಾಧ್ಯವಾಗಿತ್ತು. ಅವರನ್ನು ನೋಡಬೇಕೆಂಬ ಬಯಕೆಯನ್ನು ವಿದ್ಯಾರ್ಥಿಗಳು ಸೂಚಿಸಿದ ಒಡನೆಯೇ ಅನುಮತಿಯು ದೊರಕಿತು.

ನಾವು ಓದುತ್ತಿದ್ದ ಮದನಪಲ್ಲಿ ಕಾಲೇಜಿನ ಪ್ರಿನ್ಸಿಪಾಲರೂ ಐರ್ಲೆಂಡ್ ದೇಶದ ಸುಪ್ರಸಿದ್ಧ ಕವಿಗಳೂ ಆದ ಡಾ|| ಕಸಿನ್ಸರವರು ಕೊಟ್ಟ ಪರಿಚಯ ಪತ್ರವೂ ಸಹ ಇದರಲ್ಲಿ ವಿಶೇಷ ಸಹಕಾರಿಯಾಯ್ತು. ಮದರಾಸಿನ ಬೇರೆ ಬೇರೆ ಕಾಲೇಜುಗಳ ಸುಮಾರು ೩೦ ಹುಡುಗರನ್ನು ಆಶ್ರಮದ ಕಟ್ಟಡದ ಸುಹಡಿಯ ಮೇಲಿನ ಅಂಗಣಕ್ಕೆ ಕರೆದೊಯ್ಯಲಾಯಿತು. ಶ್ರೀ ಅರವಿಂದರು ಒಂದು ಸೋಫಾ ಮೇಲೆ ಕುಳಿತಿದ್ದರು. ತರುಣರು ಅವರ ಮುಂದೆ ನೆಲದ ಮೇಲೆ ಕುಳಿತರು.

ಶ್ರೀ ಅರವಿಂದರು ಸುತ್ತಲೂ ನೋಡಿ ವಿದ್ಯಾರ್ಥಿಗಳು ಯಾವ ಯಾವ ಪಾಠಗಳನ್ನು ಓದುತ್ತಿರುವರೆಂದು ಕೇಳಿದರು. ಒಂದೊಂದಾಗಿ ಉತ್ತರ ಬಂದಿತು—ವಿಜ್ಞಾನ, ಗಣಿತಶಾಸ್ತ್ರ, ಇತಿಹಾಸ ಇತ್ಯಾದಿ ಇತ್ಯಾದಿ.

ಶ್ರೀ ಅರವಿಂದರು:— ಪರೀಕ್ಷೆಯ ನಂತರ ನಿಮ್ಮ ವಿಜ್ಞಾನದಿಂದ ಏನು ಮಾಡುತ್ತೀರಿ ?

ವಿದ್ಯಾರ್ಥಿಗಳು ಒಬ್ಬರ ಮುಖವನ್ನೊಬ್ಬರು ನೋಡಿದರು. ಸ್ವಲ್ಪ ಕಾಲದನಂತರ ಒಬ್ಬ ತರುಣನು ಶ್ರೀ ಅರವಿಂದರಿಗೇ ಪ್ರಶ್ನೆಯನ್ನು ಹಾಕಿ ತಾವು ಏನು ಮಾಡಬೇಕೆಂಬುದಾಗಿ ಅವರು ಬಯಸುವರೆಂದು ಕೇಳಿದನು. ಆದರೆ— ಮುಂದೆ ಕಾಣುವಂತೆ— ಶ್ರೀ ಅರವಿಂದರು ಯಾವುದೇ ಪ್ರಶ್ನೆಗಾದರೂ ತಾವಾಗಿಯೇ ನೇರವಾದ ಉತ್ತರವನ್ನು ಕೊಡುತ್ತಿರಲಿಲ್ಲ. ತಮ್ಮ ಪ್ರತಿಯೊಂದು ಪ್ರಶ್ನೆಗೂ ವಿದ್ಯಾರ್ಥಿಗಳೇ ಉತ್ತರ ಕೊಡುವಂತೆ ಮಾಡುತ್ತಿದ್ದರು. ''ಉತ್ತರವನ್ನು ಹೇಳುವ ಕೆಲಸ ನಿಮ್ಮದು. ನನ್ನದಲ್ಲ. ನಿಮ್ಮ ಪಾಠದ ವಿಷಯಗಳನ್ನು ಆರಿಸುವದರಲ್ಲಿ ನಿಮಗೆ ಒಂದು ನಿರ್ದಿಷ್ಟವಾದ ಗುರಿ ಇದ್ದಿರಬೇಕು. ಅದೇನೆಂಬುದನ್ನು ಹೇಳಲು ನೀವು ಶಕ್ತರಾಗಿರಬೇಕು.''

ಮತ್ತೆ ಸ್ವಲ್ಪ ಕಾಲ ಮೌನ. ಗುಂಪಿನ ಪೈಕಿ ಒಬ್ಬನು ಧೈರ್ಯಮಾಡಿ ಇಂತೆಂದನು: '' ಸ್ವಾಮೀ, ನಾವು ಸಂಶೋಧನೆಗಳನ್ನು ನಡೆಸುತ್ತೇವೆ. ''

ಶ್ರೀ ಅರವಿಂದರು:— '' ಓ! ನೀವೆಲ್ಲರೂ ಸಂಶೋಧನೆಗಳನ್ನು ಮಾಡುವಿರಿ. ನಿಮ್ಮ ಶೋಧನೆ ಗಳಿಂದ ನಮ್ಮ ದೇಶವು ನಿಜವಾಗಿಯೂ ಸಂಪದ್ಯುಕ್ತವಾಗುತ್ತದೆ. ''

* *

ಅನಂತರ ವಿದ್ಯಾರ್ಥಿಗಳು ಮುಂದಿನ ಪ್ರಶ್ನೆಯನ್ನು ಕೇಳಿದರು. ಕಾಂಗ್ರೆಸ್ ಮಹಾಸಭೆಯು ಆಗ ತಾನೆ ತನ್ನ ಗುರಿಯಲ್ಲಿ ಸಣ್ಣ ಮಾರ್ಪಾಟನ್ನು ಮಾಡಿದ್ದಿತ್ತು. '' ಬ್ರಿಟಿಷ್ ಸಾಮ್ರಾಜ್ಯದೊಳಗೆ ಸ್ವರಾಜ್ಯ ಸ್ಥಾಪನೆ ಮಾಡುವುದೇ ಗುರಿ '' ಎಂದು ಇದ್ದ ಧ್ಯೇಯದಲ್ಲಿ '' ಬ್ರಿಟಿಷ್ ಸಾಮ್ರಾಜ್ಯದೊಳಗೆ " ಎಂಬ ಪದಗಳನ್ನು ತೆಗೆದುಹಾಕಿತ್ತು.

ಪ್ರಶ್ನೆ:–ಒಳ್ಳೇದು ಸ್ವಾಮೀ , ಕಾಂಗ್ರೆಸ್ಸಿನ ಧ್ಯೇಯದ ಮಾರ್ಪಾಟಿನ ಬಗ್ಗೆ ತಮ್ಮ ಅಭಿಪ್ರಾಯವೇನು?

ಉತ್ತರ:— ಹೇಳಿ, ನೀವು ಹೇಳಿ. ನೀವು ಅನೇಕ ಭಾಷಣಗಳನ್ನು ಕೇಳುತ್ತಿದ್ದೀರಿ; ಪತ್ರಿಕೆ ಗಳನ್ನು ಓದುತ್ತಿದ್ದೀರಿ; ನಿಮ್ಮ ನಿಮ್ಮಲ್ಲೇ ಚರ್ಚೆಗಳನ್ನು ಸಹ ನಡೆಸುತ್ತಿದ್ದೀರಿ. ಇಷ್ಟಾದರೂ ನಿಮ್ಮ ಸ್ವಂತ ಅಭಿಪ್ರಾಯವನ್ನು ನೀವು ರೂಪಿಸಿಕೊಂಡಿಲ್ಲದಿದ್ದರೆ ನನ್ನ ಅಭಿಪ್ರಾಯವನ್ನು ನಿಮ್ಮ ಮೇಲೆ ಹೊರಿಸುವದರಿಂದ ಏನು ಪ್ರಯೋಜನ? ನಿಮ್ಮ ಅಭಿಪ್ರಾಯವನ್ನು ಹೇಳಿ.

ಒಬ್ಬ ವಿದ್ಯಾರ್ಥಿ:— ಹಳೆಯ ಧ್ಯೇಯಕ್ಕಿಂತಲೂ ಹೊಸದು ಉತ್ತಮವಾಗಿದೆ ಮತ್ತು ಹಿತಕರ ವಾಗಿದೆ.

ಶ್ರೀ ಅರವಿಂದರು:— ಹೇಗೆ?

ಉತ್ತರ:— ನಮಗೆ ಇಷ್ಟವಿರಲಿ , ಇಲ್ಲದಿರಲಿ ಹಿಂದಿನ ಧ್ಯೇಯವು ನಮ್ಮನ್ನು ಬ್ರಿಟಿಷ್ ಸಾಮ್ರಾ ಜ್ಯಕ್ಕೆ ಕಟ್ಟಿಹಾಕುತ್ತಿತ್ತು. ಆದರೆ ಇಂದಿನ ಧ್ಯೇಯದ ಪ್ರಕಾರ ನಮ್ಮ ಅಪೇಕ್ಷೆಯಂತೆ ಸಾಮ್ರಾಜ್ಯದಲ್ಲಿ ಇರಲು ಅಥವಾ ಹೊರಗೆ ಹೋಗಲು ನಮಗೆ ಅವಕಾಶವಿರುತ್ತದೆ.

ಶ್ರೀ ಅರವಿಂದರು:— ಓಹೋ! ಈ ಬದಲಾವಣೆಗಾಗಿ ಉಂಟಾದ ಕಾರಣಗಳೇನು?

ಉತ್ತರ:— ಪಂಜಾಬಿನ ಅತ್ಯಾಚಾರ ಮತ್ತು ಖಿಲಾಫತ್ತಿನ ದ್ರೋಹ (ಆ ಕಾಲದಲ್ಲಿ ಎಲ್ಲರ ಬಾಯಲ್ಲೂ ಈ ಮಾತುಗಳು ಕೇಳಿಬರುತ್ತಿದ್ದವು. ಗಾಂಧಿಜಿಯವರೇ ಆದಿಯಾಗಿ ಎಲ್ಲ ಮುಖಂಡರೂ ಇದನ್ನೇ ಹೇಳುತ್ತಿದ್ದರು. ಪತ್ರಿಕೆಗಳಲ್ಲೆಲ್ಲಾ ಈ ವಾದಗಳೇ ತುಂಬಿದ್ದವು.) ಜಲಿಯನ್‌ವಾಲಾ ಬಾಗಿನಲ್ಲಿ ನಮ್ಮ ಸೋದರರ ಮೇಲೆ ಬ್ರಿಟಿಷರು ಅನಿರ್ವಚನೀಯವಾದ ಧಾಳಿಯನ್ನು ನಡೆಸಿರುತ್ತಾರೆ. ನಮ್ಮ ದೇಶಬಾಂಧವರಾದ ಮುಸ್ಲಿಮರಿಗೆ ಕೊಟ್ಟ ವಚನವನ್ನು ಮುರಿದಿದ್ದಾರೆ.

ಶ್ರೀ ಅರವಿಂದರು:— ಬ್ರಿಟಿಷರು ಒಂದು ವೇಳೆ ಈ ಎರಡು ಅನ್ಯಾಯಗಳನ್ನು ಮಾಡಿಲ್ಲದಿದ್ದರೆ– ಖಿಲಾಫತ್ತಿನ ಬಗ್ಗೆ ದ್ರೋಹವೆಸಗದಿದ್ದರೆ, ಪಂಜಾಬಿನ ದುರಂತವನ್ನು ನಡೆಸದಿದ್ದರೆ–ಆಗ ಹಳೆಯ ಕಾಂಗ್ರೆಸ್ಸಿನ ಧ್ಯೇಯವನ್ನೇ ಉಳಿಸಿಕೊಳ್ಳಲು ನೀವು ಒಪ್ಪುತ್ತಿದ್ದಿರಾ?

ಉತ್ತರ:— ಇಲ್ಲ ಸ್ವಾಮೀ ಆಗಲೂ ಇಲ್ಲ.

ಶ್ರೀ ಅರವಿಂದರು:— ಏಕೆ ಇಲ್ಲ ?

ಉತ್ತರ:— ಬ್ರಿಟಿಷ್ ಸಾಮ್ರಾಜ್ಯದ ಗೊಡವೆಯೇ ನಮಗೆ ಬೇಕಿಲ್ಲ. ಅವರು ನಮಗೆ ಒಳ್ಳೆಯು ದನ್ನೇ ಮಾಡಲಿ, ಅಥವಾ ಕೆಡುಕನ್ನೇ ಬಯಸಲಿ, ಬ್ರಿಟಿಷ್ ಸಾಮ್ರಾಜ್ಯದ ಸಂಪರ್ಕವೇ ನಮಗೆ ಬೇಡ.

ಶ್ರೀ ಅರವಿಂದರು:— ಹಾಗಾದರೆ ಕಾಂಗ್ರೆಸ್ಸಿನ ಧ್ಯೇಯದ ಬದಲಾವಣೆಗೆ ಪಂಜಾಬಿನ ದುರಂತವೂ ಖಿಲಾಫತ್ತಿನ ದ್ರೋಹವೂ ಕಾರಣವೆಂದು ಏಕೆ ಹೇಳುವಿರಿ ?

ತಮ್ಮ ವಾದಸರಣಿಯ ಲೋಪದೋಷವನ್ನು ಕಂಡು ತರುಣರು ಬೆಪ್ಪಾದರು. ಆದರೆ ವಾಸ್ತವಿಕ ಸ್ಥಿತಿಯನ್ನು ಅರಿಯುವಂತೆ ತಮಗೆ ಉಂಟಾದ ಮಾರ್ಗದರ್ಶನಕ್ಕಾಗಿ ಪೂರ್ಣ ಮುಗ್ಧತೆಯನ್ನು ವ್ಯಕ್ತಪಡಿಸಿದರು.

ತರುವಾಯ ಮೂರನೆಯ ಪ್ರಶ್ನೆ ಬಂದಿತು : ಕೈರಾಟೆಯ ಬಗ್ಗೆ ತಮ್ಮ ಅಭಿಪ್ರಾಯವೇನು ಸ್ವಾಮೀ ?
ಶ್ರೀ ಅರವಿಂದರು:— ಹೇಳಿ, ನಿಮ್ಮ ಅಭಿಪ್ರಾಯವನ್ನು ಹೇಳಿ.

ಒಬ್ಬ ವಿದ್ಯಾರ್ಥಿ (ಎಲ್ಲರೂ ಹೇಳುತ್ತಿದ್ದ ವಾದವನ್ನೇ ಪುನರುಚ್ಚಾರಮಾಡಿ) ಇಂಗ್ಲೆಂಡಿನಿಂದ ಕೊಳ್ಳುತ್ತಿರುವ ಬಟ್ಟೆಗಾಗಿ ಪ್ರತಿವರ್ಷವೂ ನಮ್ಮ ಬಡದೇಶದ ದ್ರವ್ಯದಲ್ಲಿ ೬೦ ಕೋಟಿ ರೂಪಾಯಿ ಅಲ್ಲಿಗೆ ಹರಿದುಹೋಗುತ್ತಿದೆ. ನಿರುದ್ಯೋಗಿಗಳಾದ ಜನರಿಗೆ ಕೆಲಸವನ್ನೂ ಬಡವರಿಗೆ ಜೀವನವನ್ನೂ ಕೈರಾಟೆಯು ಕಲ್ಪಿಸಿಕೊಡುತ್ತಿದೆ.

ಶ್ರೀ ಅರವಿಂದರು:— ಸರಿ, ಬಹಳ ಒಳ್ಳೆಯದು.

* *

ತರುವಾಯ ಎಲ್ಲಕ್ಕಿಂತಲೂ ಕೌತುಕದ ಪ್ರಶ್ನೆಯು ಎದ್ದಿತು. " ತಾವು ಬಂದು ಈ ಏಕಾಂತ ಸ್ಥಾನದಲ್ಲಿ ಕುಳಿತು ಬಿಟ್ಟಿದ್ದೀರಿ. ತಾವು ಹೊರಗೆ ಯಾವಾಗ ಬರುತ್ತೀರಿ ಸ್ವಾಮೀ ?"

ಶ್ರೀ ಅರವಿಂದರು:— ನನ್ನನ್ನು ಈಗ ಅಪೇಕ್ಷಿಸುವವರಾದರೂ ಯಾರು ? ನಾನು ೧೯೦೮ ನೇ ಇಸ್ವಿಯ ಅರವಿಂದ ಘೋಷನಲ್ಲ. ೧೯೦೮ ನೇ ಇಸ್ವಿಯ ಅರವಿಂದ ಘೋಷನು ಸತ್ತು ಹೋಗಿದ್ದಾನೆ. ನಾನೀಗ ಬೇರೊಬ್ಬ ಅರವಿಂದ ಘೋಷ್. (ಸ್ವಲ್ಪ ಕಾಲಾನಂತರ) ಮಾತೆಯು ಆಜ್ಞೆ ಮಾಡಿದಾಗ ನಾನು ಬರುತ್ತೇನೆ. ( ಮತ್ತೆ ಸ್ವಲ್ಪ ಕಾಲಾನಂತರ ) ಸ್ವರಾಜ್ಯದ ಸ್ಥಾಪನೆಯ ನಂತರ ನಾನು ಬರುತ್ತೇನೆ. ( ಮುಗುಳ್ ನಗೆ )

ಇದನ್ನು ಕೇಳಿ ವಿದ್ಯಾರ್ಥಿಗಳ ಕುತೂಹಲವು ಕೆರಳಿತು. ಅವರು ಈ ರೀತಿ ಪ್ರಶ್ನೆ ಮಾಡಿದರು:- " ಸ್ವಾಮೀ , ಸ್ವರಾಜ್ಯವನ್ನು ಗಳಿಸುವದಕ್ಕಾಗಿ ನಮ್ಮ ಎಲ್ಲ ನಾಯಕರೂ ದೇಶಾಭಿಮಾನಿಗಳೂ ಕಷ್ಟಪಡು ತ್ತಿದ್ದಾರೆ. ತಾವೂ ಸಹ ಈ ಚಳುವಳಿಯ ಅಗ್ರಸ್ಥಾನದಲ್ಲಿ ಇದ್ದಿರಿ. ದೇಶದ ಸ್ವಾತಂತ್ರ್ಯವನ್ನು ಗಳಿಸಲು ತಮ್ಮ ಸೇವೆ ಮತ್ತು ಸಲಹೆಗಳು ಅತ್ಯಂತ ಅವಶ್ಯಕವಾಗಿವೆ. ಆದರೆ ಸ್ವರಾಜ್ಯದ ಅನಂತರ ಬರುವುದಾಗಿ ತಾವು ಹೇಳುತ್ತಿರುವಿರಿ."

ಶ್ರೀ ಅರವಿಂದರು:— ಹಾಗಲ್ಲ, ನನ್ನ ಪ್ರಿಯ ಬಾಲಕರೇ, ಸ್ವರಾಜ್ಯವೇ ಸಕಲ ವಿಷಯಗಳ ಅಂತ್ಯವಲ್ಲ. ಅದು ಕೇವಲ ಪ್ರಾರಂಭ ಮಾತ್ರ. ಸ್ವರಾಜ್ಯ ಸ್ಥಾಪನೆಯ ನಂತರ ಮಾಡಬೇಕಾದ ಕಾರ್ಯ ಬಹಳವಾಗಿರುತ್ತದೆ. ಸ್ವರಾಜ್ಯವು ಬಂದ ಮೇಲೆ ನಾನು ಬರುತ್ತೇನೆ..................

*  *

ಪ್ರಶ್ನೆ:— ಸ್ವಾಮೀ, ಬ್ರಾಹ್ಮಣೇತರ ಚಳುವಳಿಯ ವಿಷಯವಾಗಿ ನಿಮ್ಮ ಅಭಿಪ್ರಾಯವೇನು?

ಶ್ರೀ ಅರವಿಂದರು:— ನಾನೇ ಒಬ್ಬ ಬ್ರಾಹ್ಮಣೇತರ. ಅನೇಕ ವರ್ಷಗಳಿಂದ ನಾನು ಇಲ್ಲಿದ್ದೇನೆ. ಅದರ ಅರ್ಥವೇನೆಂಬುದೇ ನನಗೆ ಗೊತ್ತಾಗುವುದಿಲ್ಲ.

ಈ ಬಗೆಯ ಸ್ವಾರಸ್ಯವಾದ ಸಂಭಾಷಣೆಯ ಲಾಭವು ದೊರೆತುದರಿಂದ ತಮಗೆ ವಿಶೇಷ ಜ್ಞಾನೋದಯವಾಯಿತೆಂದು ವಿದ್ಯಾರ್ಥಿಗಳು ಮನಗಂಡರು. ಸನ್ಮಾನ್ಯರಾದ ಮಹರ್ಷಿಗಳ ಮುಂದೆ ಸಾಷ್ಟಾಂಗಪ್ರಣಾಮಮಾಡಿ ಅವರ ಅಪ್ಪಣೆಯನ್ನು ತೆಗೆದುಕೊಂಡರು.

## ೨

# ನಾನು ಈಶ್ವರನ ಸೇವಕ; ಜನತೆಯ ಸೇವಕನಲ್ಲ.

## ಶ್ರೀ ಅರವಿಂದರ ಜೀವನಾದರ್ಶ

ಹಲವು ವಿದ್ಯಾರ್ಥಿಗಳೊಡನೆ ನಾನು ೧೯೨೧ ನೇ ಇಸ್ವಿಯಲ್ಲಿ ಪುದುಚೇರಿಗೆ ಭೇಟಿಯಿತ್ತನಂತರ ಮತ್ತೆ ೧೯೨೨ ರಲ್ಲಿ ಅಲ್ಲಿಗೆ ತೆರಳಿ ಶ್ರೀ ಅರವಿಂದರ ದರ್ಶನವನ್ನು ಪಡೆಯಬೇಕೆಂಬ ಆಕಾಂಕ್ಷೆಯುಂಟಾಯಿತು. ಅದರಂತೆ ನನಗೆ ಭೇಟಿಯನ್ನು ದೊರಕಿಸಿಕೊಡುವಂತೆ ಬೇಡಿ ಆಶ್ರಮದ ಕಾರ್ಯದರ್ಶಿಗಳಿಗೆ ಪತ್ರ ಬರೆದೆನು. ಶ್ರೀ ಅರವಿಂದರು ತಮ್ಮ ಮೇಲೆ ವಿಧಿಸಿಕೊಂಡಿದ್ದ ಏಕಾಂತ ನಿರ್ಬಂಧದಲ್ಲಿ ಈ ಹೊತ್ತಿಗೆ ಮತ್ತಷ್ಟು ಮುಂದು ವರಿದಿದ್ದರು. ಭೇಟಿಗಳಿಗೆ ಪರಿಮಿತಿಯನ್ನು ಹಾಕಲಾಗುತ್ತಿತ್ತು. ಅವರ ಬಳಿಗೆ ಹೋಗುವವರ ಸಂಖ್ಯೆಯನ್ನು ಮಿತಗೊಳಿಸಲಾಗಿತ್ತು. ಆಶ್ರಮದೊಡನೆ ನಿಕಟ ಸಂಪರ್ಕವನ್ನಿಟ್ಟುಕೊಂಡಿದ್ದ ಸಹವಿದ್ಯಾರ್ಥಿ ಹಾಲಪ್ಪ ಎಂಬುವರ ಕೃಪೆಯಿಂದ ಶ್ರೀ ಅರವಿಂದರ ಭೇಟಿಯ ಸುಯೋಗವು ನನಗೆ ಮತ್ತೊಮ್ಮೆ ದೊರಕಿತು. ಸುಮಾರು ೧ ತಿಂಗಳ ನಂತರ ಒಂದು ದಿವಸ ಗೊತ್ತಾದ ಕಾಲಕ್ಕೆ ಬರುವಂತೆ ನನಗೆ ಅನುಮತಿ ಬಂದಿತು.

ಕ್ಲುಪ್ತವಾದ ದಿನ ನಾನು ಪುದುಚೇರಿಯನ್ನು ತಲುಪಿ ಗೊತ್ತಾದ ಕಾಲಕ್ಕೆ ಆಶ್ರಮವನ್ನು ಸೇರಿದೆನು. ದೇವಮಂದಿರಕ್ಕೆ ಹೋಗುವಂತೆ ಭಕ್ತಿ-ಶ್ರದ್ಧೆ-ಆಸಕ್ತಿಗಳಿಂದ ನಾನು ಅಲ್ಲಿಗೆ ಹೋದೆನು. ಮಹಡಿಯ ಮೇಲಿನ ಬಿಸಿಲುಮಚ್ಚಿಗೆ ನನ್ನನ್ನು ಕರೆದೊಯ್ಯಲಾಯಿತು. ಶ್ರೀ ಅರವಿಂದರು ಆಗಲೇ ಅಲ್ಲಿ ಆಸನವನ್ನು ಅಲಂಕರಿಸಿದ್ದರು. ಪ್ರವೇಶಿಸಿದೊಡನೆಯೇ ಪಕ್ಕದಲ್ಲಿದ್ದ ಕುರ್ಚಿಯ ಮೇಲೆ ಕೂರುವಂತೆ ನನಗೆ ಅಪ್ಪಣೆ ಯಾಯಿತು. ಹಿಂದಿನ ವರ್ಷದಂತಲ್ಲದೆ ಶ್ರೀ ಅರವಿಂದರ ಪ್ರಕೃತಿಯು ಸ್ಪಷ್ಟವಾಗಿ ಗಾತ್ರದಲ್ಲಿಯೂ ಚೈತನ್ಯ ದಲ್ಲಿಯೂ ವೃದ್ಧಿಯಾಗಿದ್ದುದು ಕಂಡುಬಂದಿತು. ಕುಳಿತುಕೊಳ್ಳುವಂತೆ ನನಗೆ ಅವರು ಮಾಡಿದ ಆಜ್ಞೆ ಯಲ್ಲಿಯೂ ಒಂದು ಮಿಂಚಿನಂತಹ ವೇಗವು ಗೋಚರವಾಗುತ್ತಿತ್ತು.

## ಸಮರ್ಪಣ

ತರುವಾಯ ಈ ಕೆಳಗೆ ಕಾಣಿಸಿದಂತೆ ಸಂಭಾಷಣೆಯು ಸಾಗಿತು:—

ಶ್ರೀ ಅರವಿಂದರು:— ನಿನಗೆ ಬೇಕಾದುದೇನು ?

ಉತ್ತರ:— ಸ್ವಾಮೀ, ತಮ್ಮ ಆಶೀರ್ವಾದ ಮತ್ತು ಮಾರ್ಗದರ್ಶನವನ್ನು ಪಡೆಯಲು ತಮ್ಮಲ್ಲಿಗೆ ಬಂದಿದ್ದೇನೆ.

ಶ್ರೀ ಅರವಿಂದರು:— ಜೀವನದಲ್ಲಿ ನಿನ್ನ ಗುರಿಯೇನು ?

ಉತ್ತರ:— ಮಾನವ ಜೀವನದ ಗುರಿ,–ಜನತೆಯ ಸೇವೆ.

ಶ್ರೀ ಅರವಿಂದರು:— ಜನತೆಯ ಸೇವೆ? ನಾನು ಜನತೆಯ ಸೇವಕನಲ್ಲ; ನಾನು ಈಶ್ವರನ ಸೇವಕ.

ನಾನು:— ಸ್ವಾಮೀ, ಸಕಲ ಶ್ರುತಿ– ಸ್ಮೃತಿಗಳೂ ಎಲ್ಲ ಗುರುಗಳೂ ಬೋಧಿಸಿರುವಂತೆ ಜನತಾ ಸೇವೆಯೇ ಜೀವನದ ಅತ್ಯುನ್ನತ ಆದರ್ಶ; ಜನತಾ ಸೇವೆಯೇ ಜನಾರ್ದನನ ಸೇವೆ.

ಶ್ರೀ ಅರವಿಂದರು:— ಹೌದು, ಜನತಾ ಸೇವೆಯು ಪ್ರಶಂಸನೀಯವಾದ ಒಂದು ಗುರಿಯೇ ಸರಿ; ಆದರೆ ಜನತೆಯೇ ಜನಾರ್ದನನಲ್ಲ. ಜನತೆಯು ನಶ್ವರವಾದುದು. ಇಂದು ನಾವು ನೋಡುತ್ತಿರುವ ಜನತೆಯು ಕೆಲವು ವರ್ಷಗಳ ನಂತರ ಇರುವುದಿಲ್ಲ. ಆದರೆ ಈಶ್ವರನು ನಿತ್ಯನು. ನಾನು ಜನತೆಯ ಸೇವಕನಲ್ಲ. ನಾನು ಜನಾರ್ದನನ ಸೇವಕನು.

ಜನತೆಗೂ ಜನಾರ್ದನನಿಗೂ ಇರುವ ತಾರತಮ್ಯವನ್ನು ಇಷ್ಟು ಸುಲಭವಾಗಿಯೂ ಸರಳವಾಗಿಯೂ ಅರಿತುದರಿಂದ ನನಗೆ ದೊಡ್ಡ ಜ್ಞಾನೋದಯವೇ ಉಂಟಾದಂತಾಯಿತು. ಈ ದಿವ್ಯ ಪ್ರಕಾಶದ ಅರಿವು ಇಂದೂ ನನ್ನ ಹೃದಯದಲ್ಲಿ ಅಚ್ಚಳಿಯದೆ ಬೇರೂರಿರುತ್ತದೆ.

ಶ್ರೀ ಅರವಿಂದರು:— ನಿನ್ನ ಗುರಿಯ ಸಾಧನೆಯಲ್ಲಿ ನೀನು ಅನುಸರಿಸುತ್ತಿರುವ ಮಾರ್ಗವಾದರೂ ಯಾವದು ?

ಉತ್ತರ:— ಧ್ಯಾನ, ಪ್ರಾರ್ಥನೆ, ಜಪ, ರಾಮನಾಮ, ಗೀತಾಪಠಣ ಇತ್ಯಾದಿ.

ಶ್ರೀ ಅರವಿಂದರು:— ಬಹಳ ಒಳ್ಳೆಯದು. ನಿನ್ನ ಮಾರ್ಗವನ್ನೇ ನೀನು ಮುಂದುವರಿಸಬಹುದು. (ಮುಂದುವರಿದು) ನನ್ನ ಮಾರ್ಗವು ಬೇರೆ ರೀತಿ ಇರುತ್ತದೆ. ಅದು ಬಹಳ ಕಠಿಣವೂ ಆಗಿರುತ್ತದೆ. ಅದರ ಅನುಸರಣೆಯಲ್ಲಿ ಅನೇಕರು ತಮ್ಮ ಜನ್ಮವನ್ನೇ ಬಲಿಕೊಟ್ಟಿರುತ್ತಾರೆ. ಆದರೂ ಆ ಮಾರ್ಗವನ್ನೇ ದೃಢ ನಿಶ್ಚಯದಿಂದ ಅನುಸರಿಸಬೇಕು.

ಇಲ್ಲಿಗೆ ಸಂಭಾಷಣೆಯು ಹಠಾತ್ತನೆ ಮುಗಿಯಿತು. ಒಂದು ಬಗೆಯ ನಿಶ್ಚಿಂತನ ಭಾವದಿಂದ ನಾನು ಆಶ್ರಮವನ್ನು ಬಿಟ್ಟು ಹೊರಹೊರಟೆ.

*  *

೨೮ ವರ್ಷಗಳ ನಂತರ ಮತ್ತೆ ೧೯೫೦ ರಲ್ಲಿ ಮಹರ್ಷಿಗಳ ದರ್ಶನವನ್ನು ಪಡೆಯಲು ನನಗೆ ಅವಕಾಶವು ಲಭಿಸಿತು. ಆದರೆ ಈ ಸಾರಿ ಕೇವಲ ಕ್ಷಣಮಾತ್ರದ ದೃಶ್ಯದಲ್ಲಿ ಮೌನಭಕ್ತಿಯನ್ನು ಸೂಚಿಸುವುದರಲ್ಲೇ ಸಂತೃಪ್ತಿ ಪಡೆಯಬೇಕಾಯಿತು.

**ಅಗರಂ ರಂಗಯ್ಯ**
(ಸಂಗ್ರಹಕಾರ)

# ದಿ ಮದರ್

ಮಾಯೆಯನೆ ಮೊಲೆಗೊಳಿಸಿ ಹಾಲ್ಗುಡಿಸಿ ಈ ತಾಯಿ
ಈ ತಾಯಿ ಗಾಯತ್ರಿ ಮಂತ್ರಕ್ಕೆ ಭಾಷ್ಯ ಬರೆದವಳು
ಅಶ್ವಪತಿಯ ಉಪಾಸ್ಯ ದೇವತೆಯು ಸಾವಿತ್ರಿ
ಸೂರ್ಯನಾಚೆಯ ಸೋಮಹಾಸ್ಯ ಕರೆದವಳು
ಸತ್ಯವಂತರ ಮರ್ತ್ಯ ಡಿಂಭಗಳ ಗೊಂಬೆಯಲಿ
ಶಮರಮಿತ ನವ ಬಿಂಬ ಸೃಷ್ಟಿ ಮೆರೆದವಳು
ಮಾರ್ತಾಂಡ ಮಂಡಲದ ಅಂಡವನು ಪುಟಗೊಳಿಸಿ
ಹಂಸಜಾತಿಯ ಜೀವ ತೆರೆದವಳು.

—ಅಂಬಿಕಾತನಯ ದತ್ತ

---

*It is through the Mother that all things are attained.*

—Sri AUROBINDO.

ಎಲ್ಲ ಸಿದ್ಧಿಗಳು ಮಾತೆಯ ಮೂಲಕ.

—ಶ್ರೀ ಅರವಿಂದರು

# ಪ್ರಾರ್ಥನೆ

೧

ದಿನವು ದಿನವು ನಮಿಸುತಿಹೆವು
ಪಾಲಿಸೆಮ್ಮ ಮಾತೆಯೆ,
ವರದೆ ಕಲ್ಯಾಣಿ ತಾಯಿ
ನಮ್ಮ ಜೀವಜ್ಯೋತಿಯೆ.

೨

ಭವದ ಸಂಕಟದೊಳು ಸಿಲುಕಿ
ತೊಳಲುತಿಹೆವು ಬಳಲುತಿಹೆವು
ಬಾಳಿನಿರುಳ ಕತ್ತಲೆಯೊಳು
ದಾರಿಗಾಣದಿರುವೆವು.

೩

ಜೀವವೊಂದು ಭಾವವೊಂದು
ಬಾಳಗುಡಿಯ ಪೂಜೆಯೊಂದೆ,
ದೂರ ದೂರ ನಡೆಯುತಿಹೆವು
ಗುಡಿಯ ದ್ವಾರ ಕಾಣದೆ.

೪

ಜೀವರಸವು ವಿರಸವಾಗಿ
ವಿಪ್ರಲಂಭ ಕರುಣೆಗೂಡಿ
ಬಾಳ ರೌದ್ರ ತಾಳದಿಹೆವು
ಶಾಂತವೆಮಗೆ ಕರುಣಿಸು.

೫

ನಮ್ಮ ಮನದ ಆಶೆಗಳನು
ನಮ್ಮ ಎದೆಯ ಕಾಂಕ್ಷೆಗಳನು
ಸುಮನಗಳೆನೆ ಮಾಲೆ ಸೂಡಿ
ನಿನ್ನ ಕೊರಳಿಗಿಡುವೆವು.

೬

ನನ್ನ ಎದೆಯ ಚಕ್ರವಾಕ
ಕೂಗುತಿಹುದು ಕತ್ತಲೆಯೊಳು
ಕಮಲದಲದ ಮರೆಯು ಸಾಕು
ನೀಡು ಪಂಚಪ್ರಾಣವ.

೭

ವಿಶ್ವಶಕ್ತಿ ನೀನು ತಾಯೆ
ಜಡಕೆ ಚೈತನ್ಯ ತರುವೆ
ದುರಿತ ಚಯವನೆಲ್ಲ ಕಳೆದು
ನಮಗೆ ವರವ ಕರುಣಿಸು.

X X X

೮

ಇದುವೆ ಕನಸು ಇದುವೆ ನೆನಸು
ಇದುವೆ ನಮ್ಮ ಪ್ರಾರ್ಥನೆ :
ಇದುವೆ ಪಾಡು ಇದುವೆ ಹಾಡು
ಇದುವೆ ನಮ್ಮ ಅರ್ಚನೆ !

—ಸದಾನಂದ ನಾಯಕ



*

ಓಂ! ಭಗವತೀ!!

# ಜೀವನ ಮಂದಿರ

ಶ್ರೀ ತಾಯಿಯವರು ತಮ್ಮ ಮಕ್ಕಳಿಗಾಗಿ ಹೇಳಿದ ನುಡಿಗಳು 'ಮಾತೃವಾಣಿ' ಎನಿಸುತ್ತವೆ. 'ಮಾತೃವಾಣಿ'ಯೊಳಗೆ ಬಿಡಿನುಡಿಗಳಾಗಿ ಕಂಗೊಳಿಸುವ ೧೩೫ ವಚನಗಳು 'ಅಮೃತಬಿಂದು'ವಾಗಿವೆ. ಅಷ್ಟೇ ವಚನಗಳನ್ನು ಇಟ್ಟಿಗೆಗಳಂತೆ ಉಪಯೋಗಿಸಿಕೊಂಡು ನಮ್ಮ ನಮ್ಮ ಜೀವನಮಂದಿರಗಳನ್ನು ಕಟ್ಟಿಕೊಳ್ಳಬಹುದಾಗಿದೆ. ಹಾಗೆ ನನ್ನಮಟ್ಟಿಗೆ ರಚಿಸಿಕೊಂಡ ಮಾತೃವಾಣಿಯ ಗೂಡು ನನಗಂತೂ ಹಾಳತವಾಗುವುದರಲ್ಲಿ ಸಂಶಯವಿಲ್ಲ. ಈ ರಚನೆಯು ಗೂಡುಕಟ್ಟಿಕೊಳ್ಳಬೇಕೆನ್ನುವ ನನ್ನಂಥ ಬೇರೆ ಹಕ್ಕಿಗಳಿಗೆ ಪ್ರಚೋದಿಸುವ ಕೆಲಸ ಮಾಡಿದರೂ ಕಡಿಮೆ ಆಗಲಿಲ್ಲ. ನಮಗಿದ್ದುದು ಅಗ್ಗದ ಗೂಡಾದರೂ ಅದು ನಮ್ಮ ಜೀವನಕ್ಕೆ ಮಂದಿರವೇ ಸರಿ. ಆ ಜೀವನ ಮಂದಿರವನ್ನು ಒಂದಿಷ್ಟು ನಿರೀಕ್ಷಿಸೋಣ.

## ನಮ್ಮ ಜೀವನ ಅದೆಂಥದು ?

ಜೀವವಿರುವಲ್ಲೆಲ್ಲ ಜೀವನವಿರುತ್ತದೆ. ಬದುಕಿರುವ ತಪ್ಪಿಗಾಗಿ ಜೀವನ ನಡೆಸುವವರು ಇರುವಂತೆ, ಜೀವನ ನಡೆಸುವುದಕ್ಕಾಗಿ ಬದುಕಿರುವವರೂ ಇದ್ದಾರೆ. ಬದುಕಿರುವ ವರೆಗೆ ಬದುಕುಮಾಡುವವರು ಸಾಮಾನ್ಯಜೀವಿಗಳೆನಿಸುತ್ತಾರೆ. ಜೀವನ ನಡೆಸುವದಕ್ಕಾಗಿಯೇ ಬದುಕುವ ಉದ್ದೇಶವುಳ್ಳವರು ಅಧ್ಯಾತ್ಮ ಜೀವಿಗಳೆನಿಸುತ್ತಾರೆ. ಸಾಮಾನ್ಯ ಜೀವನಕ್ಕೆ ಕರ್ತವ್ಯಪಾಲನೆಯೊಂದೇ ಅನ್ನ-ನೀರು. ಅಧ್ಯಾತ್ಮಜೀವನಕ್ಕೆ ಪರಮಾತ್ಮಪ್ರಾಪ್ತಿಯೇ ಸಾರಸರ್ವಸ್ವ. ಸುಖವು ಅದಾವ ಜೀವನಕ್ಕೂ ಉದ್ದೇಶವಾಗಲಾರದು. ಸಾಮಾನ್ಯ ಜೀವಿಯು ಸುಖವನ್ನು ಸುತ್ತಲಿನ ಬದುಕಿನಿಂದ ಬರಚಿಕೊಳ್ಳಬೇಕೆನ್ನುತ್ತಾನೆ. ಹಾಗೆ ಬರಚಿಕೊಳ್ಳುವ ಸುಖದಲ್ಲಿ ದುಃಖವೇ ಮುಕ್ಕಾಲಷ್ಟು ಉಡಿಯಲ್ಲಿ ಬರುತ್ತದೆ. ಆದರೆ ನಿರಂತರ ಸುಖದ ಸ್ರೋತವು ಅಂತರಾತ್ಮದಲ್ಲಿರುತ್ತದೆಂದು ಅಧ್ಯಾತ್ಮಜೀವಿ ಮನಗಂಡಿರುತ್ತಾನೆ. ಆದ್ದರಿಂದ ಅದನ್ನು ಕೈವಶಪಡಿಸಿಕೊಳ್ಳುವ ಎತ್ತುಗಡೆಯನ್ನೇ ಆತನು ನಡೆಸುತ್ತಾನೆ. ಈ ಎತ್ತುಗಡೆಯು ಅದೆಷ್ಟು ಸ್ವಲ್ಪವೇ ಸಾಧಿಸಿದರೂ ಅದು ಮಹತ್ತಾದ ಸುಖದ ಹಿಮಗಿರಿಯೇ ಅಹುದು. ಆದರೆ ಆನೆ ಆಡಿನ ಬೆಲೆಗೆ ಸಿಕ್ಕರೂ ಸಾಕುವವರು ರಾಜ-ಮಹಾರಾಜರೇ ಹೊರತು ಬಡಪಾಯಿಗಳು ಅಲ್ಲವೆಂಬುದು ನಿಶ್ಚಯವೇ. ಸುಖವು ನಿರಂತರವಾಗಿದ್ದರೇನು, ಅದು ಸ್ರೋತವಾಗಿ ಹರಿಯುತ್ತಿದ್ದರೇನು ! ಜೀವಿಗಳೆಲ್ಲರೂ ಅದಕ್ಕೆ ಕೈಯೊಡ್ಡಲಾರರು. ಅದಕ್ಕೆ ಕೈಯೊಡ್ಡಿ ನಿಂತವನು ಅಧ್ಯಾತ್ಮಜೀವಿ; ಕೈಯೊಡ್ಡಲಾರದವನು ಸಾಮಾನ್ಯ ಜೀವಿ. ಈ ಎರಡು ಬಗೆಗಳಲ್ಲಿ ನಾವು ಯಾವ ವರ್ಗಕ್ಕೆ ಸೇರಿದವರೆಂಬುದನ್ನು ನಿರ್ಣಯಿಸಿಕೊಳ್ಳುವುದು ಪ್ರತಿಯೊಬ್ಬನ ಕರ್ತವ್ಯವಾಗಿದೆ.

## ಸುಖದ ನಿವಾಸಸ್ಥಾನ

ನಾವು ಅದಾವ ವರ್ಗಕ್ಕೆ ಸೇರಿದವರಾಗಿದ್ದರೂ ಮುಂದುವರಿಯುವುದಕ್ಕೆ ದಾರಿ ಇದ್ದೇಇರುತ್ತದೆ. ಅಧ್ಯಾತ್ಮಜೀವಿಯಾಗಿದ್ದರೆ ಮಾರ್ಗ ಮುಂದೆ ಇದೆ. ಸಾಮಾನ್ಯ ಜೀವಿಯಾಗಿದ್ದರೆ ಕರ್ತವ್ಯಪಾಲನವು ಎಲ್ಲ

ವನ್ನೂ ಕೈಗೂಡಿಸುತ್ತದೆ. ಯಾವ ಸಾಲಿನಲ್ಲಿ ನಾವು ನಿಂತಿದ್ದರೂ ಪರಮಾತ್ಮನನ್ನುಳಿದು ಜೀವನವೊಂದು ದುಃಖದಾಯಕ ಭ್ರಮೆಯಾಗಿದೆಯೆಂಬುದನ್ನೂ ಪರಮಾತ್ಮನೊಂದಿಗೆ ಎಲ್ಲವೂ ಆನಂದವೆಂಬುದನ್ನೂ ಮರೆಯತಕ್ಕದ್ದಲ್ಲ. ಕಷ್ಟಗಳಿಂದ ಕಂಗೆಟ್ಟಾಗ ಪರಮಾತ್ಮನ ಕಡೆಗೆ ಹೊರಳುವ ಎಚ್ಚರಿಕೆಯಿರುವುದೂ ಸಾಮಾನ್ಯ ಮಾತಲ್ಲ. ಯಾಕಂದರೆ, ಪರಮಾತ್ಮನ ಕಡೆಗೆ ಹೊರಳಿದರೆ ಕಷ್ಟಗಳೆಲ್ಲ ಮಾಯವಾಗುವವು. ಅಧ್ಯಾತ್ಮ ಜೀವಿಗಳಿಗೆ ಮಾತ್ರ ಪರಮಾತ್ಮನು ಎತ್ತಿಕೊಳ್ಳಬಹುದು. ಆದರೆ ಸಾಮಾನ್ಯ ಜೀವಿಗಳ ಮೊರೆಯನ್ನು ಯಾರು ಕೇಳುವರು ? ಆದರೆ ದೈವೀಕೃಪೆಗೆ ಯಾರು ಅರ್ಹರು, ಯಾರು ಅನರ್ಹರು ? ಸುಖವು ಸಿಗದಿದ್ದರೂ ನಡೆಯುತ್ತದೆ. ಕಷ್ಟನಿವಾರಣೆಯಾಗದಿದ್ದರೆ ಸಾಗುವದಿಲ್ಲ. ಸುಖವು ಸಿಕ್ಕಾಗ ಸಿಗಲಿ–ಬಿಡಲಿ ಕಷ್ಟಪರಂಪರೆ ಮಾತ್ರ ಕೂಡಲೇ ಪರಿಹಾರವಾಗಬೇಕು. ಅದಕ್ಕೇನು ಉಪಾಯ ? ಪರಮಾತ್ಮನ ಬಾಹುಗಳಲ್ಲಿ ಆಶ್ರಯ ವನ್ನು ಪಡೆಯುವದರಿಂದ ಎಲ್ಲ ಕಷ್ಟಗಳು ತಪ್ಪುತ್ತವೆ. ಯಾಕಂದರೆ ಆ ಬಾಹುಗಳು ನಮಗೆ ಆಶ್ರಯವನ್ನೀ ಯಲು ಸರ್ವದಾ ಪ್ರೇಮದಿಂದ ಚಾಚಿದವುಗಳಾಗಿರುತ್ತವೆ. ಪರಮಾತ್ಮನ ರಕ್ಷಣೆಯಲ್ಲಿ ನಿಂತು ಕಷ್ಟ ಪರಂಪರೆಗಳನ್ನು ನಿವಾರಿಸಿಕೊಂಡರಾಯಿತೇ ? ಕಷ್ಟನಿವಾರಣೆಯೆಂದರೆ ಕತ್ತಲೆ ಹರಿದಹಾಗೆ. ಕತ್ತಲೆ ಹರಿಯುವುದೆಂದರೆ ಬೆಳಕು ಬಂದಹಾಗೆ. ಆದ್ದರಿಂದ ಕಷ್ಟನಿವಾರಣೆಯೆಂದರೆ ಸುಖವು ಬಂದಹಾಗೆ. ಆ ಪರಿಸ್ಥಿತಿಯನ್ನು ಶ್ರಮಪಟ್ಟು ಕಾಪಾಡಿಕೊಳ್ಳಬೇಕಾಗುತ್ತದೆ. ಯಾಕಂದರೆ ಈ ಜಗತ್ತಿನಲ್ಲಿ ಸುಖವೂ ಆರೋ ಗ್ಯವೂ ಈ ವರೆಗೂ ಸ್ವಾಭಾವಿಕ ಅವಸ್ಥೆಗಳಾಗಿಲ್ಲ. ಹಾಗಾದರೆ ಅವುಗಳ ಪ್ರಾಪ್ತಿಗಾಗಿ ನಾವು ಮಾಡತಕ್ಕ ಉಪಾಯವೇನು ? ಸುಖವನ್ನೂ ಆರೋಗ್ಯವನ್ನೂ ನಾವು ಇವುಗಳ ವಿರುದ್ಧ ವಸ್ತುಗಳಾದ ಅಸುಖ ಹಾಗೂ ಅನಾರೋಗ್ಯ ಇವುಗಳ ದಾಳಿಯಿಂದ ರಕ್ಷಿಸತಕ್ಕದ್ದು. ನಮ್ಮ ಸುಖವನ್ನು ಅಬಾಧಿತವಾಗಿಯೂ ಪರಿಶುದ್ಧ ವಾಗಿಯೂ ಇಟ್ಟುಕೊಳ್ಳಲೆಳಸಿದರೆ ಆದರ ಮೇಲೆ ದುರ್ವಿಚಾರಗಳ ದೃಷ್ಟಿ ಬೀಳದಿರುವಂತೆ ನಾವು ಸಾಧ್ಯ ವಿದ್ದಷ್ಟೂ ಪ್ರಯತ್ನಿಸತಕ್ಕದ್ದು. ದುರ್ವಿಚಾರಗಳ ದೃಷ್ಟಿ ತನ್ನ ಸುಖದ ಮೇಲೆ ಮಾತ್ರ ಬೀಳದಂತೆ ನೋಡಿ ಕೊಂಡರೆ ಸಾಕಾಗದು. ಅಷ್ಟು ಮಾಡಿದರೆ ತನ್ನ ಸುಖವನ್ನು ಮಾತ್ರ ಆಲೋಚಿಸಿದಂತಾಗುತ್ತದೆ. ತನ್ನ ಸುಖವನ್ನು ಕುರಿತು ಮಾತ್ರ ಆಲೋಚಿಸುವುದೆಂದರೆ ಅಸುಖಿಯಾಗುವದರ ಅತ್ಯಂತ ನಿಶ್ಚಿತ ಮಾರ್ಗವಾಗಿದೆ.

## ನಿರಂತರ ಸುಖದ ಮೂಲದಿಂದ

ಸುಖವು ಮನುಷ್ಯನಿಗೆ ಅನಿವಾರ್ಯವಾದ ವಸ್ತುವಾಗಿದೆಯೆಂದೂ, ನಿರಂತರ ಸೌಖ್ಯದ ಮೂಲ ಸ್ಥಾನವು ಅಂತರಾತ್ಮವೆಂದೂ ತಿಳಿಯಿತು. ಇನ್ನು, ನಮಗೆ ಅಂತರಾತ್ಮದಲ್ಲಿರುವ ನಿರಂತರ ಸೌಖ್ಯವೇ ಬೇಕೆಂದು ನಾವು ದೃಢನಿಶ್ಚಯವುಳ್ಳವರಾಗತಕ್ಕದ್ದು. ಎಚ್ಚರದಲ್ಲಿಯಂತೂ ಸರಿಯೇ. ನಿದ್ರೆಯಲ್ಲಿ ಕೇಳಿದರೂ ಅಂತರಾತ್ಮದಲ್ಲಿರುವ ನಿರಂತರ ಸೌಖ್ಯವೇ ನಮಗೆ ಬೇಕೆಂದು ಮಾರು ನುಡಿಯುವದಕ್ಕೆ ಅಭೀಪ್ಸೆಯೆನ್ನುವರು. ದಿವ್ಯ ವಸ್ತುಗಳನ್ನು ಆಶಿಸುವುದೆಲ್ಲವೂ ಅಭೀಪ್ಸೆಯೆನಿಸುತ್ತದೆ. ಅಭೀಪ್ಸೆಯೆಂಬುವುದು ಅಗ್ನಿಯಂತಿರುವು ದೆಂದೂ ಅದು ಹೃದಯದ ಮೌನದಲ್ಲಿ ಸ್ಥಿರವಾಗಿರುವುದೆಂದೂ ಹೇಳುತ್ತಾರೆ. ಆ ಅಗ್ನಿಯು ದಿನ ದಿನಕ್ಕೆ ಪ್ರಜ್ವಲಿಸುತ್ತ ಹೋಗಬೇಕಾದರೆ ಧ್ಯಾನವನ್ನು ಅಭ್ಯಸಿಸಬೇಕಾಗುತ್ತದೆ. ಹಾಗೂ ಪ್ರಾರ್ಥನೆಯಿಂದ ಯಾಚಿಸ ಬೇಕಾಗುತ್ತದೆ. ಧ್ಯಾನವೆಂದರೆ ದಿವಸದ ಕೆಲವೊಂದು ನಿಯಮಿತ ವೇಳೆಯಲ್ಲಿ ಒತ್ತಟ್ಟಿಗೆ ಕುಳಿತು ಆ ಅಂತರಾತ್ಮನನ್ನು ಕುರಿತು ಚಿಂತಿಸುವುದು. ಆದರೆ ನಾವು ದಿವಸದ ಇಪ್ಪತ್ತುನಾಲ್ಕು ತಾಸುಗಳಲ್ಲಿ ಬಹಳ ವೇಳೆ ಯನ್ನು ಉದ್ದಿಮೆಯಲ್ಲಿಯೂ ನಿದ್ದೆಯಲ್ಲಿಯೂ ಕಳೆಯುತ್ತೇವೆ. ಹಾಗೆ ಮಾಡುವುದು ಅನಿವಾರ್ಯವೇ ಆಗಿದೆ. ಆದ್ದರಿಂದ ಮಾಡುವ ಆ ಉದ್ದಿಮೆಯಾಗಲಿ ಗೈಯುವ ಆ ನಿದ್ರೆಯಾಗಲಿ ಧ್ಯಾನವಾಗಿ ಪರಿಣಮಿ ಸುವದಕ್ಕೂ ಉಪಾಯಗಳನ್ನು ಹೇಳಲಾಗಿದೆ. ಸಹಜವಾದ ಭಾವದಿಂದ ಮಾಡಿದ ಕಾರ್ಯವೇ ಧ್ಯಾನವೆಂದು

ಹೇಳಿರುವಂತೆ ಉತ್ತಮವಾದ ಗಾಢನಿದ್ರೆಯಲ್ಲಿಯೇ ತನ್ನ ಆಳವಾದ ಭಾಗದೊಂದಿಗೆ ಸಮರಸವಾಗಬಲ್ಲ ನೆಂದೂ ಹೇಳಿರುವರು. ಕಾರ್ಯಕ್ಕೆ ನಿಜದಾದ ಭಾವ ಆವಶ್ಯಕ. ಗಾಢ ನಿದ್ರೆಯಿಂದ ಆಳವಾದ ಭಾಗ ದೊಂದಿಗೆ ಸಮರಸವಾಗುವಿಕೆ ಅನಿವಾರ್ಯ. ನಿಜವಾದ ಭಾವವೆಂದರೇನು? ಆಳವಾದ ಭಾಗದೊಂದಿಗೆ ಸಮರಸವಾಗುವಿಕೆಯೆಂದರೇನು? ಪರಮಾತ್ಮನಿಗಾಗಿ ಕಾರ್ಯ ಮಾಡುವುದೇ ನಿಜವಾದ ಭಾವವೆಂದು ಗ್ರಹಿಸ ಲಿಕ್ಕೆ ಅಡ್ಡಿಯಿಲ್ಲ. ಇನ್ನು, ಆಳವಾದ ಭಾಗವನ್ನು ಅರಿಯುವುದಕ್ಕೆ "ಗುಡಿಯ ಅಂತರಾಳದ ಒಳಗೆ ಹೋಗು ಅಂದರೆ ನಾನು ನಿನಗೆ ಗೋಚರಿಸುವೆನು." ಎಂಬ ಮಾತಿನೊಳಗಿನ "ಅಂತರಾಳದ ಒಳಗೆ" ಎನ್ನುವು ದನ್ನು ಲಕ್ಷಿಸಬೇಕು. 'ಅಂತರಾಳದ ಒಳಗೆ ಹೊಕ್ಕರೆ ನಾನು ನಿನಗೆ ಗೋಚರಿಸುವೆನು' ಎಂದಿರುವುದರಿಂದ 'ನಾನು ನಿನಗೆ ಗೋಚರಿಸುವುದಕ್ಕೆ ಇನ್ನೊಂದು ದಾರಿ ಗಾಢನಿದ್ರೆ'ಯೆಂದೂ ಆದರಿಂದ ತನ್ನ ಆಳವಾದ ಭಾಗದೊಂದಿಗೆ ಸಮರಸವಾಗಲು ಬರುತ್ತದೆಂದೂ ತಿಳಿದಂತಾಯಿತು. ಈ ಬಗೆಯು ಕಾರ್ಯವೂ ನಿದ್ರೆಯೂ ಧ್ಯಾನದಂತೆ ಪರಿಣಮಿಸಲು ಅಲ್ಲಿ ನಮ್ಮ ಅಭೀಪ್ಸೆಯು ಪ್ರಜ್ವಲಿಸತೊಡಗುವದು. ಅದು ಸೂರ್ಯನಂತೆ ಕವಿನೆರಳಿಲ್ಲದ ತೇಜಸ್ಸನ್ನು ತಳೆಯುವದು. ಆ ಅಭೀಪ್ಸಾಸೂರ್ಯನು ಅಹಂಕಾರವೆಂಬ ಮೋಡಗಳನ್ನು ಚದರಿಸುವನು. ಅಹಂಕಾರವನ್ನು ದಾಟಿದಷ್ಟು ನಮ್ಮ ಯೋಗಪ್ರಗತಿಯೆಂಬ ಮಾತನ್ನು ಗ್ರಹಿತವೆಂದು ಇಟ್ಟು ಕೊಳ್ಳಲೇಬೇಕು. ಆದರೆ ಆ ಅಹಂಕಾರವನ್ನು ದಾಟಿರುವುದಕ್ಕೆ ಲಕ್ಷಣವೇನು? ನಮ್ಮ ಕ್ಷುದ್ರವಾದ ಅಹಂ ಕಾರದ ಸೀಮಾಬದ್ಧತೆಯಿಂದ ನಾವು ಎಷ್ಟೆಷ್ಟು ಹೆಚ್ಚಾಗಿ ಬಿಡುಗಡೆ ಹೊಂದುವೆವೋ ಅಷ್ಟು ಹೆಚ್ಚಾಗಿ ವಿಶ್ವದ ಆಶ್ಚರ್ಯಗಳು ನಮ್ಮಿದುರಿಗೆ ಪ್ರಕಟವಾಗುವವು.

## ಪ್ರತಿಭಾಪುತ್ರರು

ವಿಶ್ವದ ಆಶ್ಚರ್ಯಗಳು ನಮ್ಮಿದುರಿಗೆ ಬಂದು ನಿಲ್ಲಲು ಅದು ಉಳಿದವರ ಕಣ್ಣಿಗೆ ಕಾಣಿಸುವುದ ಕ್ಕಿಂತ ಬೇರೆಯಾಗಿಯೇ ನಮಗೆ ಗೋಚರವಾಗುತ್ತದೆ. ಹಾಗೆ ಕಂಡ ಸೃಷ್ಟಿಯನ್ನು ಕಂಡಂತೆಯೇ ಬಣ್ಣಿಸಿ ದರೆ ಅದೊಂದು ನಿತ್ಯನೂತನ ಸಾಹಿತ್ಯವಾಗಿ ಬಿಡುತ್ತದೆ. ರವಿಯರಿಯದ ಮರ್ಮಗಳನ್ನು ಕವಿ ಅರಿಯು ತ್ತಾನೆಂದು ಹೇಳುವವರ ರಹಸ್ಯವು ಇದೇ ಆಗಿದೆ. "ಒಂದಾನೊಂದು ಸೂಕ್ಷ್ಮ ಜಗತ್ತಿದೆ. ಅಲ್ಲಿ ನೀವು ಚಿತ್ರಕಲೆ, ಕಾದಂಬರಿ, ಸರ್ವಪ್ರಕಾರದ ನಾಟಕ ಇಷ್ಟೇ ಅಲ್ಲ, ಸಿನೇಮಾಕ್ಕೆ ಸಹ ಆವಶ್ಯಕವಿರುವ ಎಲ್ಲ ವಿಷಯಗಳನ್ನು ಕಾಣಬಹುದು. ಅಧಿಕಾಂಶ ಗ್ರಂಥಕಾರರು ಅಲ್ಲಿಯಿಂದಲೇ ತಮ್ಮ ಪ್ರತಿಭೆಯನ್ನು ಪಡೆ ಯುವರು." ಅಂಥ ಪ್ರತಿಭೆ ಪ್ರಕಟಗೊಳ್ಳುವ ಸಾಧನವಾದ ವ್ಯಕ್ತಿ ಪ್ರತಿಭಾ ಪುತ್ರನೇ ಅಹುದು. ಪ್ರತಿಭಾಪುತ್ರನಾದವನು ತಾನು ಕಂಡ ಕನಸನ್ನು ಆಡಿ ತೋರಿಸಬಹುದು. ಬರೆದು ಪ್ರಕಟಿಸಬಹುದು. ಗ್ರಾಹಕರಿಗೆ ವಸ್ತುವನ್ನು ಪೂರೈಸುವ ಭರದಲ್ಲಿ ತಾನು ಕಂಡ ಕನಸಿನಲ್ಲಿ ಇನ್ನೇನಾದರೂ ಬೆರೆಸುವ ಪ್ರಮಾದವನ್ನು ಬುದ್ಧಿಪೂರ್ವಕವಾಗಿ ಅಲ್ಲದಿದ್ದರೂ ಮೈ ಮರೆತು ಮಾಡುವ ಸಂಭವವಿರುತ್ತದೆ. ಪ್ರತಿಭಾಪುತ್ರನು ತಾನು ಪಡೆದ ಸಾಹಿತ್ಯಶಿಶುವನ್ನು ತನ್ನವರ ಕೈಗೆ ಅಕ್ಕರತೆಯಿಂದ ಒಪ್ಪಿಸು ವಾಗ ಅದನ್ನು ಜರದ ಅರಿವೆ-ಹೊನ್ನ ತೊಡವುಗಳಿಂದ ಸಿಂಗರಿಸುವ ಪರಿಪಾಠವು ತಗಲುತನವಲ್ಲ ದಿದ್ದರೂ ಅದರಿಂದ ಶಿಶುವಿನ ಸಹಜಸೌಂದರ್ಯವು ಮರೆಯಾಗುತ್ತದೆ; ಇಲ್ಲವೆ ಸಾಮಾನ್ಯ ಸೌಂದರ್ಯವು ಇಮ್ಮಡಿಸುತ್ತದೆ. ಸಹಜಸೌಂದರ್ಯವನ್ನು ಮರೆಯಾಗಿಸಿ ಮಾತು ಮೊಂಡು ಮಾಡುವುದೂ, ಸಾಮಾನ್ಯ ಸೌಂದರ್ಯವನ್ನು ಇಮ್ಮಡಿಸಿ ಮಾತು ಮೊನೆ ಮಾಡುವುದೂ ತಾಯ ಮಕ್ಕಳಾದವರಿಗೆ ಒಪ್ಪಲಾರದೆಂದು ತೋರುತ್ತದೆ. "ನಮ್ಮ ಬಾಯಿಂದ ಇಲ್ಲವೆ ಲೆಕ್ಕಣಿಕೆಯಿಂದ ಎಂತಹ ಸಣ್ಣ ಸುಳ್ಳನ್ನೇ ಆಗಲಿ ನಾವು ವ್ಯಕ್ತಪಡಿಸುವುದಾದರೆ ನಾವು ಸತ್ಯದ ಸಿದ್ಧದೂತರಾಗುವುದರ ಭರವಸೆ ಹೇಗೆ ಹಿಡಿಯಬೇಕು? ಸತ್ಯದ

ಸಿದ್ಧಸೇವಕನು ತೀರ ಅಲ್ಪವಾದ ಅವಾಸ್ತವವನ್ನೂ, ಅತಿಶಯೋಕ್ತಿಯನ್ನೂ, ವಿಕೃತಗೊಳಿಸಿ ಮಾತಾಡುವುದನ್ನೂ ವರ್ಜಿಸಬೇಕು." ಅವಾಸ್ತವವೂ ಅತಿಶಯವೂ ಆದ ಮಾತಾಗಲಿ, ವಿಕೃತಗೊಳಿಸಿ ಆಡಿದ ಮಾತಾಗಲಿ ಗಾಳಿಯಲ್ಲಿ ತೂರಿ ತೆರೆಯೆಬ್ಬಿಸಿ ಮರೆಯಾಗಿ ಬಿಡುವಂತೆ ತೋರಬಹುದು. ಆದರೆ ಅಂಥ ಬರವಣಿಗೆಗೆ ಆಯುಷ್ಯವು ಮಾತಿಗಿಂತ ಹೆಚ್ಚಾಗಿರುವ ಸಂಭವವಿರುತ್ತದೆ. ಸಂತೆಯೊಳಗಿನ ಸಾವಿರಗಟ್ಟಳೆ ಜನರು ಏಕಕಾಲಕ್ಕೆ ನಡೆಸಿರುವ ಮಾತಿನ ಗೊಂದಲವನ್ನು ಎತ್ತರವಾದ ಮನೆಯ ಮಾಳಿಗೆಯ ಮೇಲೆ ನಿಂತು ಕೇಳಿದರೆ ನಮ್ಮ ಕಿವಿ ಗಡಚಿಕ್ಕಿಬಿಡುತ್ತವೆ. ಜಗತ್ತಿನ ಜನರೆಲ್ಲರೂ ಮಾತನಾಡುವ ಗಲಿಬಿಲಿಯನ್ನು ಕೇಳುವುದಕ್ಕೆ ಯಾರಿಗಾದರೂ ಶಕ್ಯವಾಗುತ್ತಿದ್ದರೆ ಅವರ ಕಿವಿಗಳು ಮರಗಟ್ಟಿಹೋಗುವುದರಲ್ಲಿ ಸಂಶಯವೇ ಇಲ್ಲ. ಆದರೆ ಇವೆಲ್ಲ ಮಾತುಗಳು ವ್ಯರ್ಥವಾಗಿ ಗಳಪುವ ಮಾತಿನ ಬುಡುಬುಡಿಕೆಯೇ ಆಗಿರಲಾರವು. ಆದರೆ ಆ ಗಲಿಬಿಲಿಯಲ್ಲಿ ನಿರರ್ಥಕ ಶಬ್ದಗಳ ಗೊಂದಲವೂ ಬೆರಕೆಯಾಗಿರುತ್ತದೆ. "ಜಗತ್ತು ನಿರರ್ಥಕ ಶಬ್ದಗಳಿಂದ ಕಿವುಡುಗಟ್ಟಿ ಹೋಗಿದೆ." ಆದ್ದರಿಂದ ಪ್ರತಿಭಾ ಪುತ್ರರಾದವರು ನಿರರ್ಥಕ ಶಬ್ದಗಳನ್ನು ಆಡುವುದರಲ್ಲಿಯೂ ಬರೆಯುವುದರಲ್ಲಿಯೂ ಬಳಸಬಾರದೆಂದು ಸ್ಪಷ್ಟವಾಯಿತು.

## ಅಂತರ್ಮುಖನಾಗು

ನಿರರ್ಥಕವಾದ ಮಾತುಗಳನ್ನು ಮೂಲೆಗೊತ್ತಿ ನಿಲ್ಲುವುದು ಮೌನಕ್ಕೂ ಬಿಗಿಯಾದ ಮಾತು. ಅದೆಷ್ಟು ಕಠಿಣವೆನಿಸಿದರೂ ಮಾತನಾಡದೆ ಇರುವುದು ಒಪ್ಪೊತ್ತಿಗೆ ಸಾಧ್ಯವಾದೀತು. ಆದರೆ ನಿರರ್ಥಕ ಶಬ್ದಗಳನ್ನಾಗಲಿ ಅಸತ್ಯಸಂಗತಿಗಳನ್ನಾಗಲಿ ಬಳಸದೆ ಮಾತಾಡುವುದು ತೀರ ಕಠಿಣವಲ್ಲದೆ ಮತ್ತೇನು ? ಮಾತಾಡಿದ್ದು ಎಲ್ಲ ಕಡೆಯಲ್ಲಿ ಎಲ್ಲರಿಗೂ ಕೇಳಿಸಲೆಂದು ರೆಡಿಯೋ ಲೌಡಸ್ಪೀಕರ್ ಮೊದಲಾದವುಗಳನ್ನು ನಿರ್ಮಿಸಿದ ಮಾನವನು ಮಾತು ಕಡಿಮೆ ಮಾಡೆಂದು ಹೇಳಿದರೆ ಹೊಟ್ಟೆಬೇನೆ ಹಚ್ಚಿಕೊಳ್ಳಬಹುದಾಗಿದೆ. ಕೂಗಾಡಿ ಬೊಬ್ಬಿರಿದು ಕಂಠಶೋಷಮಾಡಿಕೊಂಡರೂ ಜನರ ಕಿವಿಗೆ ತಗುಲದಿರುವಾಗ ಮಾತು ಕಡಿಮೆ ಮಾಡಿ ಮೌನದಿಂದ ಕುಳಿತರೆ ಜಗತ್ತು ಹುಚ್ಚೆದ್ದು ಕುಣಿಯತೊಡಗೀತೆಂಬ ಭಯಾನಕ ಭವಿಷ್ಯವನ್ನು ಕಂಡು ಪ್ರಾಣ ಕಳಕೊಳ್ಳುವ ಜನರೂ ಉಂಟು. ಅಂಥವರಿಗೆ ಮೌನದ ಇಲ್ಲವೆ ಮಿತಭಾಷೆಯ ಅರ್ಥವೆಂದಾದರೂ ಆಗಬಹುದೇ ? ಆದರೆ ನಿಜವಾಗಿ ಮೌನವೇ ಕಾರ್ಯಮಾಡುತ್ತದೆಂದೂ ಮಾತು ಕಾರ್ಯಕ್ಕೆ ಪ್ರೇರಿಸುತ್ತದೆಂದೂ ಜ್ಞಾನಿಗಳು ಡಂಗುರಿಸುತ್ತಾರೆ. ಅವರು ಹಾಗೆ ಡಂಗುರಿಸುವರೆಂದರೂ ಮೌನದಿಂದಲೇ ಎಂಬುದನ್ನು ಮರೆಯಬಾರದು. ಮಾತು ಕಾರ್ಯಕ್ಕೆ ಪ್ರೇರಿಸುತ್ತಿರುವದರಿಂದ ಹೆಚ್ಚು ಮಾತು ಹೆಚ್ಚು ಪ್ರೇರಿಸುತ್ತಿರುವುದು ಸಹಜವೇ. ಅದರಂತೆ ನಿರರ್ಥಕ ಮಾತು ನಿರರ್ಥಕ ಪ್ರೇರಣೆಯನ್ನೂ, ಸುಳ್ಳು ಬೆರೆತ ಮಾತು ಸುಳ್ಳು ಪ್ರೇರಣೆಯನ್ನೂ ಹುಟ್ಟಿಸುತ್ತದೆಂದು ತಿಳಿಯುತ್ತದೆ. ಮಾತು ಹೆಚ್ಚಿದಂತೆ ಪ್ರೇರಣೆಯೂ ಹೆಚ್ಚುತ್ತದೆ. ಮಾತಿನ ಉಲುಹು ಉಡುಗಿ ಹೋಗುತ್ತದೆ. ಮಾತಿನ ಬೂಟಾಟಿಕೆ ತಲೆಮರೆಸುವಂತಾಗಬೇಕಾದರೆ ಮೌನವನ್ನು ಮೊರೆಹೊಗಬೇಕಾಗುತ್ತದೆ. ನಿರರ್ಥಕವಾದ ಶಬ್ದಗಳನ್ನು ಬಳಸದೆ ಮಾತನಾಡುವುದೂ ಮೌನವೇ ಎಂದಿಟ್ಟುಕೊಳ್ಳುವುದು ಸರಿಯೆಂದು ತೋರುತ್ತದೆ. ಅದಕ್ಕೆ ಮಾಣಿಕ್ಯದ ಮಾತೆನ್ನಬಹುದು. ಮಾಣಿಕ್ಯದ ಮಾತು ಕುಲುಮೆಯಿಂದ ತೆಗೆದ ಲೋಹದ ತುಂಡಿನಂತಿರುತ್ತದೆ. ನಮ್ಮ ಬಾಯಿಂದ ಹೊರಟ ಒಂದೊಂದು ಶಬ್ದವೂ ಮೌನದ ಕುಲುಮೆಯೊಳಗಿಂದ ಹೊರಬಿದ್ದ ಮಿಂಚಿನ ಶಲಾಕೆಯಾಗಿರುವುದುಂಟು. ಸಂತೆಯ ಶಬ್ದಗಳಿಗೆ ಕಿವಿಗೊಟ್ಟರೆ ಅವಕ್ಕೆ ಬಾಯಿತೆರೆದು ಮರುನುಡಿಯಬೇಕಾಗುತ್ತದೆ. ಸಂತೆಯ ಶಬ್ದಗಳು ಕಿವಿಸೇರದಂತೆ ಎಚ್ಚರಗೊಂಡಿರಬೇಕಾದರೆ ಅಂತರ್ಮುಖನಾಗಬೇಕು. ಅಂತರ್ಮುಖನಾದವನಿಗೆ ಅಂತರಂಗದ ಧ್ವನಿಯೊಂದೇ ಕೇಳಿಸುತ್ತದೆ. ಸಂತೆಯೊಳಗೆ ದಶಸಾವಿರ ಜನರು ಕೂಗಾಡುತ್ತಿದ್ದರೂ ವ್ಯಾಪಾರಿಗೆ ತನ್ನ ಮುಂದೆ ಕುಳಿತ ಗ್ರಾಹಕನ ಮಾತೊಂದೇ

ಕೇಳಿಸುತ್ತದೆ. ಆ ಮಾತು ಕೇಳಿಸುವುದಕ್ಕೆ ಇನ್ನಾವ ಗಲಭೆಯೂ ತಡೆಯಾಗುವದಿಲ್ಲ. ಆ ಪ್ರಕಾರ ಅಂತರ್ಮುಖನಾದವನ ಕಿವಿಗೆ ಅಂತರಂಗದರಸನ ವಾಣಿಯೊಂದೇ ಕೇಳಬರುವುದರಿಂದ ಅದು ನಿರರ್ಥಕವಲ್ಲ; ಅತಿಶಯೋಕ್ತಿಯಲ್ಲ. ಅವಾಸ್ತವವಲ್ಲ. ಅದನ್ನುಂಡು ಉಸುರುವ ನುಡಿಗೂ ಅದೇ ನೆರಳು ಬಡಿಯುತ್ತದೆ.

## ಪರಮಾತ್ಮ ಪ್ರಕಟನೆಯ ರಂಗಸ್ಥಳ

ಮೌನವಾಗಿ ಅಂತರ್ಮುಖಿಯಾದವನು ಅಂತರ್ವಾಣಿಯನ್ನಂತೂ ಕೇಳಬಲ್ಲನೆಂಬ ಮಾತಿಗೆ ನಾವೀಗ ಒಪ್ಪುತ್ತೇವೆ. ಆ ಅಂತರ್ವಾಣಿ ಯಾರದು ? ಯಾವನು ಸರ್ವಾಂತರ್ಯಾಮಿಯೋ ಅವನದು. ಸರ್ವಾಂತ-ರ್ಯಾಮಿಯು ಸಮೀಪಿಸದಿದ್ದರೆ ಅಂತರ್ವಾಣಿ ಕೇಳಿಸುವುದೆಂತು ? "ಹಗಲೂ ಇರುಳೂ ಪರಮಾತ್ಮ ಸಾನ್ನಿಧ್ಯವು ನಿರಂತರವಾಗಿರುತ್ತದೆ. ಮೌನವಾಗಿ ಅಂತರ್ಮುಖರಾಗುವುದೇ ಅದನ್ನು ಕಂಡುಕೊಳ್ಳಲು ಸಾಕಾಗಿರುವದು." ಮೌನವಾಗಿದ್ದವನಿಗೆ ದಿವ್ಯವಾಣಿ ಕೇಳಿಸುವುದೂ ಅಂತರ್ಮುಖಿಯಾದವನಿಗೆ ಸರ್ವಾಂತರ್ಯಾಮಿಯು ಗೋಚರಿಸುವುದೂ ವಾಸ್ತವಿಕ ಸಂಗತಿಗಳಾಗಿವೆ. ಮೌನವಾದ ಕೂಡಲೇ ದಿವ್ಯವಾಣಿ ಕೇಳಿಸಿಬಿಡುವುದೆಂತಲ್ಲ. ಅಂತರ್ಮುಖಿಯಾಗಬೇಕೆಂದ ಕೂಡಲೇ ಸರ್ವಾಂತರ್ಯಾಮಿಯು ಕಾಣಿಸಿಯೇ ಬಿಡುವನೆಂತಲ್ಲ. ಅದಕ್ಕೆ ಕೆಲವೊಂದು ಕಾಲ ಬೇಕು. ಆದರೆ ಬಿತ್ತಿದ ಇಂತಿಷ್ಟು ದಿವಸಕ್ಕೆ ಕಾಳು ಕೈಗೆ ಬರುವುದೆಂಬ ಲೆಕ್ಕಾಚಾರವೂ ಅಲ್ಲ. ಮೌನವಾಗಿ ಅಂತರಂಗವನ್ನು ಆಲಿಸುವ ರೂಢಿಯೊಂದು ಕಲೆಯೇ ಸರಿ. ಆ ಕಲೆ ಕೈವಶವಾಗಬೇಕಾಗುತ್ತದೆ. ಆ ಕಲೆಯು ಕೈಗೆ ಬರುವಾಗ ಜೊತೆಗೆ ಅಂತರ್ವಾಣಿಯನ್ನೂ ತರಬಲ್ಲದು. ಅದರಂತೆ ಅಂತರ್ಮುಖಿಯಾಗಲಿಕ್ಕೆ ಬಂದೊಡನೆ ಸರ್ವಾಂತರ್ಯಾಮಿಯ ದರ್ಶನವು ಕಟ್ಟಿಟ್ಟದೆ. ಮೌನವೂ ಅಂತರ್ಮುಖತೆಯೂ ಸಾಧಿಸುವುದಕ್ಕೆ ಎಷ್ಟು ಕಾಲಾವಧಿ ಬೇಕೆಂಬ ಪ್ರಶ್ನೆಗೆ ಒಂದೇ ಉತ್ತರ ದೊರೆಯಲಾರದು. ಬಹುಕಾಲ ಬೇಕೆಂದರೆ ಅದು ಸಂಪೂರ್ಣ ಸತ್ಯವಲ್ಲ, ಅದರಂತೆ ಸಂಪೂರ್ಣ ಅಸತ್ಯವೂ ಅಲ್ಲ. ಬಹು ತೀವ್ರವೇ ಸಾಧಿಸಿಕೊಳ್ಳುವ ಪ್ರಕೃತಿಯವರೂ ಇರುವದುಂಟು. ತೀವ್ರಸಾಧಿಸಿಕೊಳ್ಳುವ ಪ್ರಕೃತಿಯವರ ಲಕ್ಷಣವೇನು ? ಅವರವರ ಯೋಚನೆಗಳೇ ಅವರವರ ಅಂತರಂಗವನ್ನು ತೋರ್ಪಡಿಸುವವು. ಮೌನ, ಅಂತರ್ಮುಖತೆ ಇವು ಯಾರ ಯೋಚನೆಯ ವಿಷಯಗಳೋ ಅವರೇ ಅವನ್ನು ಪಡೆಯಲು ಅಧಿಕಾರಿಗಳು. "ನಾವು ಯಾವ ವಿಷಯಗಳನ್ನು ಕುರಿತು ಆಲೋಚಿಸುತ್ತಿರುವೆವೋ ಯಾವಾಗಲೂ ನಾವು ಅವುಗಳಿಂದಲೇ ಸುತ್ತುವರಿಯಲ್ಪಡುವೆವು." ಹಾಗೆ ಸುತ್ತುವರಿದ ಆಲೋಚನೆಗಳು ಆ ವ್ಯಕ್ತಿಯನ್ನು ತನ್ನಂತೆಯೇ ಮಾಡಿಕೊಳ್ಳುವವು. ಮನುಷ್ಯನು ಯಾವುದೊಂದು ವಸ್ತುವನ್ನು ಕುರಿತು ಆಲೋಚಿಸುತ್ತಾನೆಂದರೆ ಅವನು ಆ ವಸ್ತುವನ್ನು ಪ್ರೀತಿಸುತ್ತಾನೆಂದೇ ಅರ್ಥವಾಗುತ್ತದೆ. ಆ ಮೇಲೆ "ಯಾವನು ಯಾವುದನ್ನು ಪ್ರೀತಿಸುವನೋ ಅವನು ಅದೇ ಆಗುವನು." ಮೌನವು ಅಂತರ್-ವಾಣಿಯ ಪ್ರಕಟನೋಪಾಯವು. ಅಂತರ್ಮುಖತೆಯು ಸರ್ವಾಂತರ್ಯಾಮಿಯ ಸಂದರ್ಶನೋಪಾಯವೂ ಆಗಿರುವದರಿಂದ ವ್ಯಕ್ತಿಪ್ರಕೃತಿಯು ಪರಮಾತ್ಮ ಪ್ರಕಟನೆಯ ರಂಗಸ್ಥಳವಾದಂತಾಗಲಿಲ್ಲವೇ ? ಅಂಥ ರಂಗಸ್ಥಳವಾಗುವ ಮೊದಲು ವ್ಯಕ್ತಿಗೆ ಅಡ್ಡಯಿಸುವ ಅಪಥ್ಯವೊಂದಿದೆ. ಅದಾವುದೆಂದರೆ—ವಿರೋಧಿ ಶಕ್ತಿಗಳನ್ನು ಕುರಿತ ಆಲೋಚನೆ ಹಾಗೂ ಅವುಗಳಿಗೆ ಭಯಪಡುವುದು. ಅವು ಅಪಾಯಕಾರಕ ದುರ್ಬಲತೆಗಳು. ಅವು ಸರ್ವಥಾ ತ್ಯಾಜ್ಯವಾದವುಗಳಾಗಿವೆ. ಯಾಕಂದರೆ "ನಿರಂತರವಾಗಿ ವಿರೋಧಿ ಶಕ್ತಿಗಳನ್ನು ಕುರಿತು ಆಲೋ-ಚಿಸುತ್ತಲೂ ಅವುಗಳಿಗೆ ಭಯಪಡುತ್ತಲೂ ಇರುವುದು ಅತ್ಯಂತ ಅಪಾಯಕಾರಕ ದುರ್ಬಲತೆಯಾಗಿದೆ."

## ಸಂಬಂಧವಿಲ್ಲದ ಕಾರ್ಯ ಬೇಡ

ಮೌನದ ಹಾಗೂ ಅಂತರ್ಮುಖತೆಯ ಸವಿಗಂಡವನು ದಿನದ ಇಪ್ಪತ್ತುನಾಲ್ಕು ತಾಸೂ ಅದೇ ನಿಲವಿನಲ್ಲಿಯೇ ಇರುವುದಕ್ಕೆ ಹಂಬಲಿಸುವುದು ಸಹಜವಾಗಿದೆ. ಹಾಗೆ ಇರುವದೆಂದರೆ ಪರಮಾತ್ಮ ಸೇವೆಯಲ್ಲಿ

ತೊಡಗಿದಂತೆಯೆಂದಾಗಲಿ, ಪರಮಾತ್ಮ ಸಹವಾಸದಲ್ಲಿದ್ದಂತೆಯೆಂದಾಗಲಿ ಅವನು ಭಾವಿಸುತ್ತಾನೆ, ಪರಮಾತ್ಮನ ಸೇವೆಯ ಹೊರತು ಇನ್ನಾವ ಸೇವೆಯಲ್ಲಿಯೂ ತೊಡಗಬಾರದೆಂದು ಅವನಿಗೆ ಅನಿಸುತ್ತದೆ. ಇಡಿಯ ಜೀವನವು ಪರಮಾತ್ಮನಿಗೆ ಅರ್ಪಿಸಿದ ಒಂದು ಪ್ರಾರ್ಥನೆಯಾಗಬೇಕೆಂದು ಅವನು ಎಣಿಸುತ್ತಾನೆ. ಎಣಿಕೆ ಪರಮಾತ್ಮನದು; ದುಡಿಮೆ ಪರಮಾತ್ಮ ಸೇವೆ; ಜೀವನವೇ ಪರಮಾತ್ಮನಿಗೆ ಅರ್ಪಿತವಾದ ಪ್ರಾರ್ಥನೆ. ಇವು ಯಾವ ಪ್ರಮಾಣದಲ್ಲಿರುವವೋ ಆ ಪ್ರಮಾಣದಲ್ಲಿ ಪರಮಾತ್ಮನು ನಮ್ಮ ಹತ್ತಿರದಲ್ಲಿರುವನು. "ಕೇವಲ ಪರಮಾತ್ಮನೊಬ್ಬನನ್ನೇ ಕುರಿತು ವಿಚಾರಮಾಡಿದರೆ ಪರಮಾತ್ಮನು ನಿನ್ನ ಹತ್ತಿರದಲ್ಲಿಯೇ ಇರುವನು." ಯಾಕಂದರೆ "ನೀನು ಪರಮಾತ್ಮನಿಗೆ ಎಷ್ಟು ಅರ್ಪಿಸಿರುವಿಯೋ ಅಷ್ಟಕ್ಕಿಂತ ಹೆಚ್ಚಿನ ಬೆಲೆಯು ಪರಮಾತ್ಮನಲ್ಲಿ ನಿನಗಿಲ್ಲ." ಈ ಮಾತುಗಳಿಂದ ನಮಗೆ ಸಂಬಂಧಿಸಿದ ಕಾರ್ಯವಾವುದೆಂಬುದರ ಕಲ್ಪನೆ ಬರಬಹುದಾಗಿದೆ. ಯಾವದೊಂದು ಕೃತಿಯಾಗಲಿ ಫಲಪರಿಣಾಮವಾಗಲಿ ನಮ್ಮದಾಗಬೇಕಾದರೆ ಅದು ಪರಮಾತ್ಮನಿಗೆ ಅರ್ಪಿತವಾಗಬೇಕು. ಕೃತಿಯನ್ನೂ ಫಲಪರಿಣಾಮವನ್ನೂ ಪರಮಾತ್ಮನಿಗೆ ಅರ್ಪಿಸುವದು ಅತ್ಯಂತ ಶ್ರೇಷ್ಠವಾದ ವಿಧಾನವಾಗಿದೆ. ಇದೇ ಕರ್ಮಯೋಗದ ತಳಹದಿ. ಇದೇ ಸರಿಯಾದ ನಿಲುಮೆ. ಸರಿಯಾದ ನಿಲುಮೆಯಲ್ಲಿ ಆರಂಭವಾದ ಕಾರ್ಯವು ಅರ್ಧ ಸಫಲವಾದಂತೆಯೇ ಎಂದು ಹೇಳುತ್ತಾರೆ. ''ಸರಿಯಾದ ನಿಲುಮೆಯಿಂದ ಕಾರ್ಯವೆಸಗಿದ್ದಾದರೆ ಅದು ನಿಶ್ಚಯವಾಗಿಯೂ ನಿನ್ನನ್ನು ಹೆಚ್ಚು ಹೆಚ್ಚು ನನ್ನ ಸಮೀಪಕ್ಕೆ ಕರೆತರುವದು.'' ಕಾರ್ಯದ ಒಳ್ಳೆಯ ಆರಂಭ, ನಿಶ್ಚಿತವಾದ ಪರಮಫಲ ಇವಾದ ಮೇಲೆ ಚಿಂತೆ ಏತರದು ? ಆ ಕಾರ್ಯವು ಪರಿಣಾಮಕಾರಿಯೂ ಆಗಬೇಕಾದುದು ವಾಸ್ತವಿಕವಲ್ಲವೇ ? ಹಾಗೆ ಕಾರ್ಯವು ಹೆಚ್ಚು ಹೆಚ್ಚು ಪರಿಣಾಮಕಾರಿಯಾಗಬೇಕಾದರೆ ಕೈಕೊಳ್ಳುವ ಉಪಾಯವನ್ನೂ ಹೇಳಲಾಗಿದೆ. ಅದೇ ನಂದರೆ—''ನೀನು ಹೆಚ್ಚು ಹೆಚ್ಚು ಶಾಂತಿ ಸಮಾಧಾನಗಳಿಂದ ಅದನ್ನು ಮಾಡಿದ್ದಾದರೆ ಅದು ಹೆಚ್ಚು ಪರಿಣಾಮಕಾರಿಯಾಗುವದು.'' ಶಾಂತಿ ಸಮಾಧಾನಗಳಿಲ್ಲದ ಮನುಷ್ಯನು ತನ್ನ ಮನಸ್ಸಿನ ಚಂಚಲತೆಯೊಡನೆ ಚಲವಿಚಲನಾಗುವನು. ಯಾವುದನ್ನು ನಾಡಲಿ, ಯಾವುದನ್ನು ಬಿಡಲಿ, ಯಾವುದನ್ನು ಮಾಡಿದರೆ ಒಳ್ಳೆಯದು, ಯಾವುದನ್ನು ಬಿಟ್ಟರೆ ಒಳ್ಳೆಯದು. ನಾನು ಮಾಡಬೇಕಾದ ಕೆಲಸವು ಇದೇ ಅಹುದೋ ಅಲ್ಲವೋ ಮೊದಲಾದ ನೂರೆಂಟು ತೊಡಕುಗಳಿದ್ದು ಹಲವಾರು ಕವಲೊಡೆದ ದಾರಿಗಳ ಕೂಟಕ್ಕೆ ಬಂದು ನಿಂತ ದಾರಿಗನಂತೆ ಆತನ ಸ್ಥಿತಿಯಾಗುತ್ತದೆ. ತನ್ನದಲ್ಲದ ದಾರಿಯನ್ನು ಹಿಡಿದ ದಾರಿಗನಂತೆ ತನ್ನದಲ್ಲದ ಕಾರ್ಯದಲ್ಲಿ ಕೈಹಾಕಿ ಕಾರುಭಾರಮಾಡುವದು ಆದೆಷ್ಟೂ ಸಮಂಜಸವಾಗಲಾರದು. ತನಗೆ ಸಂಬಂಧವಿಲ್ಲದ ಕಾರ್ಯದಲ್ಲಿ ಕೈಹಾಕಿದರೆ ಪರಿಚಿತವೂ ಉಪಯುಕ್ತವೂ ಅಲ್ಲವಾದ ಕಾರಣದಿಂದ ಅವುಗಳಲ್ಲಿ ಅಡೆತಡೆಗಳು ಹೆಚ್ಚು. ಆದ್ದರಿಂದ ''ನಿನ್ನ ಕಾರ್ಯಕ್ಕೆ ಸಂಬಂಧವಿಲ್ಲದ ವಿಷಯಗಳಲ್ಲಿ ಕೈಹಾಕದಿರುವುದು ಯಾವಾಗಲೂ ಸಾಮಾನ್ಯ ನಿಯಮವಾಗಿರಬೇಕು.'' ಅಷ್ಟಾದ ಮಾತ್ರಕ್ಕೆ ತೊಂದರೆಗಳು ತಪ್ಪಿಯೇ ಬಿಡುವವೆಂದು ಅರ್ಥವಲ್ಲ. ಆಗಲೂ ತೊಂದರೆಗಳು ಏರಿಬಂದು ತಡೆಗಟ್ಟಿ ನಿಲ್ಲಬಹುದು. ಆ ತೊಂದರೆಗಳಿಗೆ ಕಾರಣವನ್ನು ಪರಿಸ್ಥಿತಿಯಲ್ಲಾಗಲಿ ಚಿಕ್ಕಪುಟ್ಟ ಘಟನೆಗಳಲ್ಲಾಗಲಿ ಹುಡುಕುವದು ತಪ್ಪು. ಅವು ನಮ್ಮ ಅಂತರಾಳದ ತಪ್ಪಾಗಿರುವ ಪ್ರಾಮಾಣಿಕ ನಿಲುಮೆಯಿಂದ ಬರುವವಂತೆ. ಆದ್ದರಿಂದ ಅವುಗಳನ್ನು ನಿವಾರಿಸಿಕೊಳ್ಳುವ ಪ್ರಯತ್ನವನ್ನು ಹೊರಮುಗ್ಗುಲಲ್ಲಿ ಮಾಡುವುದಕ್ಕಿಂತ ಒಳಮುಗ್ಗುಲಲ್ಲಿ ನಡೆಸುವುದು ಒಳ್ಳೆಯದು. ತಮ್ಮ ಕಾರ್ಯಕ್ಕೆ ಬಂದ ವಿಘ್ನಗಳನ್ನು ದೂರಗೊಳಿಸಲು ಹೆರರನ್ನು ತಿದ್ದುವ ಗೊಡವೆಗಿಂತ ತನ್ನೊಳಗೇ ಸರಿಗೊಳಿಸುವದು ಯಾವಾಗಲೂ ಉತ್ತಮ. ಸರಿಯಾದ ನಿಲುಮೆಯನ್ನು ಅಸ್ತವ್ಯಸ್ತಗೊಳಿಸುವದಕ್ಕೆ ಅಹಂಕಾರವು ಹೆಡೆಯೆತ್ತಿ ಬಂದಿರಬಹುದು. ಇಲ್ಲವೆ ಮಹತ್ವಾಕಾಂಕ್ಷೆಯೇ ತನ್ನ ವಿಕರಾಳವಾದ ಬಾಯಿ ತೆರೆದು ನಿಂತಿರಬಹುದು; ಅಥವಾ ಕಾರ್ಯದ ಬಗೆಗಿರುವ ಪೂರ್ವಗ್ರಹಿತ ಭಾವನೆಗಳು ಒಗ್ಗಾಲಿಗೊಳಿಸುವ ಪರಿಸ್ಥಿತಿಯನ್ನು ಉಂಟುಮಾಡಿರಬಹುದು. ಇವೆಲ್ಲ ಒಟ್ಟಿಗೆ ಸೇರಿದರಂತೂ ಆ ಕಾರ್ಯವು ಭಯಂಕರ ಕೋಲಾಹಲಕ್ಕೆ

ಈಡಾಗುವದು ಸಹಜವೇ ಅದೆ. ಆದರೆ ಇವುಗಳಲ್ಲಿ ಒಂದೊಂದು ಮುಂಬಂದರೂ ಹುಟ್ಟುವ ಅಪಸ್ವರವೇನು ಅಂಥಇಂಥದಲ್ಲ.

## ಸೇಡು ತೀರಿಸಿಕೊಳ್ಳುವ ಶಕ್ತಿಗಳೊಡನೆ

ಅಪಸ್ವರವು ಹುಟ್ಟಿತೆಂದರೆ ಅದರ ಕಾರಣ ಗೊತ್ತುಹಿಡಿಯುವದು ಮೊದಲ ಕೆಲಸವಷ್ಟೇ? ಅದನ್ನು ಸರಿಗೊಳಿಸುವ ಎತ್ತುಗಡೆ ತನ್ನಲ್ಲಿಯೇ ನಡೆಯಬೇಕಲ್ಲದೆ ಅನ್ಯರ ಮೇಲೆ ಆ ಎತ್ತುಗಡೆಯನ್ನು ಪ್ರಯೋಗಿಸಿ ಫಲವಿಲ್ಲ. ತೊಂದರೆಗಳು ಕಾರ್ಯಕ್ಕೆ ತಡೆಮಾಡುವದರಿಂದ ವ್ಯಕ್ತಿಗೆ ದುಃಖವು ಅನಿವಾರ್ಯವಾಗುತ್ತದೆ. ಇವಕ್ಕೆಲ್ಲ ನನ್ನ ತಪ್ಪಾಗಿರುವ ಪ್ರಾಮಾಣಿಕ ನಿಲುಮೆಯೇ ಕಾರಣವಾಗಿರುವದರಿಂದ ಅದರ ಶುದ್ಧೀಕರಣವು ನಮ್ಮೊಳಗೇ ನಡೆಯಬೇಕಲ್ಲದೆ ಅನ್ಯರಲ್ಲಿ ಅದು ನಡೆದು ಪ್ರಯೋಜನವಿಲ್ಲವೆಂದು ಅರಿತ ಮೇಲೆ, ಅನ್ಯರ ಸಲಹೆ-ಸೂಚನೆಗಳು ಸಹ ಆಗ ನನಗೆ ಅಷ್ಟೊಂದು ಹಾಳತವಾಗಲಾರವು. ಆ ಸಲಹೆ-ಸೂಚನೆಗಳನ್ನು ಸಹ ನಾವು ಒಳಗಿನಿಂದಲೇ —ನಮ್ಮೊಳಗಿನಿಂದಲೇ ಬರಮಾಡಿಕೊಳ್ಳಬೇಕಾಗುತ್ತದೆ. ಹಾಗೆ ಒಳಗೆ ನಿಂತು ಸಲಹೆ-ಸೂಚನೆಗಳನ್ನು ದಯೆಪಾಲಿಸುವವನು ಪರಮಾತ್ಮನೇ ಸರಿ. ಆದ್ದರಿಂದ "ಪರಮಾತ್ಮನೊಬ್ಬನನ್ನೇ ಮಾತ್ರ ನಿನ್ನ ಅಂತರಾತ್ಮನ ವಿಶ್ವಾಸಕ್ಕೆ ಪಾತ್ರವನ್ನಾಗಿ ಮಾಡಿಕೊಳ್ಳು." ಪರಮಾತ್ಮನೇ ನಮಗೆ ಸೂಕ್ತವಾದ ಸಲಹೆ-ಸೂಚನೆಗಳನ್ನು ದಯೆಪಾಲಿಸಬಲ್ಲನು. ಅವನೊಬ್ಬನೇ ಈ ಕಾರ್ಯಕ್ಕೆ ಸಮರ್ಥನು. ಅವನ ಸಲಹೆ-ಸೂಚನೆಗಳು ಮಾತ್ರ ವಿಶ್ವಾಸಕ್ಕೆ ಅರ್ಹವಾಗಿವೆಯೆಂಬ ಶ್ರದ್ಧೆಯು ಮೂಡಿ ಅಚಲವಾಗಿ ನಿಂತರೆ ನಮಗೆ ಬೇಕಾದ ಸಲಹೆ–ಸೂಚನೆಗಳು ಪರಮಾತ್ಮನಿಂದ ಉಗಮಿಸಿ ನಮ್ಮತ್ತ ಹರಿದುಬರುವವು. ಆಗ, ಗಾಣವಾಡಿಸುವವನು ಎಣ್ಣೆ ಬರುವ ಹೊತ್ತಿಗೆ ಕಣ್ಣುಮುಚ್ಚಿಕೊಳ್ಳದೆ ಪರಮಾತ್ಮನಿಂದ ಬಂದ ಸಲಹೆ–ಸೂಚನೆಗಳನ್ನು ಗ್ರಹಿಸಲು ಹೃದಯವನ್ನು ಸದಾ ತೆರೆದಿಡಬೇಕಾಗುವದು. ಆ ಸಲಹೆ ಸೂಚನೆಗಳು ಸುಖಕರವಾಗಿಯೂ ಇರಬಹುದು. ಒಮ್ಮೊಮ್ಮೆ ಸಂಕಟಕರವಾಗಿಯೂ ಇರಬಹುದು. ಅವು ಹೇಗಿದ್ದರೂ ಪರಮಾತ್ಮನಿತ್ತ ಪ್ರಸಾದವಾಗಿರುವದರಿಂದ ಅವುಗಳನ್ನು ಯಾವಾಗಲೂ ಆನಂದದಿಂದ ಸ್ವೀಕರಿಸಲು ಸಿದ್ಧವಾಗಿರಬೇಕಾಗುತ್ತದೆ. "ಪರಮಾತ್ಮನ ಕಡೆಗೆ ಹೊರಳು. ನಿನ್ನ ಸರ್ವ ಸಂಕಟಗಳು ಕಾಣದಂತಾಗುತ್ತವೆ." ಇಷ್ಟೇ ಅಲ್ಲ ಆ ಕುತ್ತುಗಳೇ ಮುತ್ತುಗಳಾಗುವವು. ತಡೆಯನ್ನೊಡ್ಡಬಂದ ಕುತ್ತುಗಳೇ ಅನುಕೂಲಶಕ್ತಿಗಳಾಗಿಯೂ ಪರಿಣಮಿಸಬಲ್ಲದೆಂಬುದನ್ನು ನಾವು ಮರೆಯಬಾರದು. ಆದ್ದರಿಂದ ಕುತ್ತುಗಳಿಗಾಗಿ ತಳಮಳಿಸಿ ಪ್ರಯೋಜನವೇನು? ಕುತ್ತುಗಳೇ ಮೊದಲು ಅನಿಷ್ಟವಾದವುಗಳು. ಅವುಗಳ ಕಾರಣದಿಂದ ತಲೆಯೆತ್ತಿದ್ದ ತಳಮಳವು ಬಿಟ್ಟು ಓಡಿಹೋಗುವದು.'' ಪ್ರಗತಿಗೆ ಎಳ್ಳಷ್ಟೂ ಅವಶ್ಯವಿಲ್ಲದ ತಳಮಳವನ್ನು ನಮ್ಮೊಳಗೆ ಇರಗೊಟ್ಟು ಪ್ರಯೋಜನವೇನು? ಅದನ್ನು ಓಡಿಸಿಯೇ ಬಿಡಬೇಕು. ಓಡಿಸುವ ಉಪಾಯವು ಅದಕ್ಕೆ ಅನುವುಕೊಡದಿರುವುದೇ. ಚಿತ್ತದಿಂದ ತಳಮಳವು ತಳ ಕಿತ್ತಿದ ಬಳಿಕ ಆ ಚಿತ್ತವು ಸ್ಥಿರವೂ ಉಲ್ಲಾಸಯುಕ್ತವೂ ಆಗಿರುವುದಾದರೆ ಆ ಸಮತೆಯಲ್ಲಿಯೇ ಅದ್ಭುತ ಪ್ರಗತಿಯಾಗುವದು. ಇಷ್ಟಾಗಿಯೂ ನಮ್ಮಿಂದ ಒಂದು ಏಕೆ ನೂರೊಂದು-ತಪ್ಪುಗಳು ಆಗಬಲ್ಲವೆಂದು ಹೇಳಲಿಕ್ಕೆ ಅಡ್ಡಿ ತೋರುವದಿಲ್ಲ. ಆ ತಪ್ಪು ಹೆಜ್ಜೆಯನ್ನು ಪ್ರಗತಿಯ ಸಾಧನವಾಗುವಂತೆ ಮಾರ್ಪಡಿಸಿಕೊಳ್ಳುವದು ಚಾತುರ್ಯದ ಕೆಲಸ. ಹಾಗೆ ಮಾರ್ಪಡಿಸಿಕೊಂಡ ಮೇಲೆ ಮತ್ತೊಮ್ಮೆ ಅದೇ ತಪ್ಪು ಮಾಡುತ್ತ ಇದ್ದರೆ ಮಾರ್ಪಾಡುಗೊಳಿಸುವ ಪರಿಶ್ರಮವು ನಿರರ್ಥಕವೇ ಸರಿ. ಒಮ್ಮೆ ಆಕಸ್ಮಾತ್ತಾಗಿ ಒಲ್ಲಿ ಹರಿದಾಗ ಪಾವುಡಗಳನ್ನು ಮಾಡಿಕೊಂಡೆನೆಂದು ಮತ್ತೊಂದು ಒಲ್ಲಿ ಹರಕೊಳ್ಳುವ ಪರಿಸ್ಥಿತಿಗೀಡಾಗುವುದು ಜಾಣತನವಾಗಲಾರದು. ಅಡಿಗಡಿಗೂ ಹೆಜ್ಜೆ ತಪ್ಪುವ ನನ್ನ ಪ್ರಕೃತಿ, ಕ್ಷಣಕ್ಷಣಕ್ಕೂ ಬಣ್ಣಬದಲಿಸಿ ಕಣ್ಣುಕಿಸಿದು ಹೆದರಿಸುವ ಪರಿಸ್ಥಿತಿ ಇವು ಒಂದು ಕಡೆಯಾದರೆ ಪರಮಾತ್ಮನ ಮೇಲಿಟ್ಟ

ಅಚಲವಾದ ವಿಶ್ವಾಸ ಹಾಗೂ ತಾನು ಭೂಮಿಯ ಮೇಲೆ ಸಾಧಿಸಬೇಕಾದ ಧ್ಯೇಯಸಂಪತ್ತು ಇವು ಇನ್ನೊಂದು ಕಡೆಗೆ ಇವೆರಡೂ ಗುಂಪುಗಳನ್ನು ನಿರೀಕ್ಷಿಸಿದ ಮೇಲೆ "ನಾವು ಈ ಭೂಮಿಯ ಮೇಲೆ ಸಾಧಿಸಬೇಕಾದ ಧ್ಯೇಯವನ್ನು ಲಕ್ಷಿಸಿದರೆ ಈ ಕ್ಷುಲ್ಲಕ ಬಾಹ್ಯಸಂಗತಿಗಳಿಗೆ ಎಳ್ಳಷ್ಟೂ ಮಹತ್ವವಿಲ್ಲ" ವೆಂದು ಅನಿಸದೆ ಇರಲಾರದು.

# ಹಿರಿಯ ವ್ಯಕ್ತಿತ್ವ

ಬೆಳೆಯ ಸಿರಿಯು ಮೊಳೆಯಲ್ಲಿ ಕಾಣಿಸಿಕೊಳ್ಳುವುದಂತೆ. ವ್ಯಕ್ತಿಯು ಕಿರಿಯದಾಗಿದ್ದರೂ ಅದರಲ್ಲಿ ಹಿರಿಯದಾದ ವ್ಯಕ್ತಿತ್ವವು ತುಂಬಿಕೊಂಡಿರುವುದನ್ನು ಗುರುತಿಸಬಹುದಾಗಿದೆ. "ಸರ್ವದಾ ಸತ್ಯ ಮಾತಾಡು ವುದು ಶ್ರೇಷ್ಠತೆಯ ಅತ್ಯುನ್ನತವಾದ ಬಿರುದಾಗಿರುವುದು." ಸತ್ಯ ಮಾತಾಡುವುದು ಅಳ್ಳೆದೆಯವರ ತುತ್ತಲ್ಲ. ಅದಕ್ಕೆ ಧೈರ್ಯ ಬೇಕಾಗುತ್ತದೆ. ನಿಜವಾದ ಧೈರ್ಯದಲ್ಲಿ ಅಧೀರತೆಯಾಗಲಿ ಆತುರತೆಯಾಗಲಿ ಇರುವದಿಲ್ಲ. ಮಾತು ಸತ್ಯವಾದಷ್ಟಕ್ಕೆ ಕೆಲಸ ತೀರದು. ಅದು ಪ್ರಿಯವೂ ಆಗಿರಬೇಕು. ಸತ್ಯ ನುಡಿಯಲು ಧೀರತೆ ಬೇಕಿರುವಂತೆ ಅದು ಪ್ರಿಯವಾಗುವುದಕ್ಕೆ ಅನಾತುರತೆ ಬೇಕಾಗುತ್ತದೆ. ತನ್ನ ತಪ್ಪುಗಳನ್ನು ಒಪ್ಪಿಕೊಳ್ಳುವು ದಂತೂ ಅತಿ ಶ್ರೇಷ್ಠವಾದ ಧೈರ್ಯವಾಗಿರುವದು. ಅಂಥ ಧೈರ್ಯಾಂಕುರವನ್ನು ಮರೆಯಾಗಿಸಿ ಬೆಳೆದು ನಿಂತ ಕೆಲವು ಹುಲುಗುಣಗಳಿರುತ್ತವೆ. ಹೊಟ್ಟೆಕಿಚ್ಚು ಹಾಗೂ ಅದರ ಬೆಂಗಾವಲಿನಂತಿರುವ ಸುಳ್ಳುನಿಂದೆ ಇವು ತಂಬಾಕದಲ್ಲಿ ಬಂಬಾಕು ಬೆಳೆದಂತೆ ವ್ಯಕ್ತಿಯ ಹಿರಿಮೆಯನ್ನು ಕುಗ್ಗಿಸುವದಕ್ಕೆ ನಡುಕಟ್ಟಿರುತ್ತವೆ. ಅವು ದುರ್ಬಲತೆ ಹಾಗೂ ಕ್ಷುದ್ರತೆಯ ಫಲಗಳಾಗಿರುತ್ತವೆ. ಆದರೆ ಅವುಗಳನ್ನು ಹೋಗಲಾಡಿಸುವ ಬಗೆ ಹೇಗೆ? ನಮ್ಮನ್ನು ಅಳಿಸುವ ಅಂತಶ್ಶತ್ರುಗಳೆಂದು ತಿಳಿದು ಅವುಗಳ ಮೇಲೆ ಸಿಟ್ಟಿಗೆದ್ದು ಹೊರಹಾಕ ನಿಲ್ಲು ವದು ಹುಚ್ಚು ಕುಣಿತವೇ ಆಗುವದಲ್ಲದೆ ಅದರಿಂದ ಅವುಗಳ ನಾಶವಾಗುವದಂತೂ ಒತ್ತಟ್ಟಿಗಿರಲಿ, ತಿರುಗಿ ಕೇಳಿದರೆ ಅವುಗಳ ಬೆಳುವಣಿಗೆಗೇ ಅತಿಶಯವಾದ ಸಹಾಯವಾಗಬಲ್ಲದೆಂದು ತೋರುತ್ತದೆ. ಆದರೆ ಅವು ಗಳ ನಿವಾರಣೆಯ ಮಾರ್ಗವೇನು? ''ಅವುಗಳ ಬಗೆಗೆ ಸಂಪೂರ್ಣ ಉದಾಸೀನರಾಗಿ ನಮ್ಮ ಅವಿಚಲವಾದ ನಿಶ್ಚಿತತೆಯ ಆನಂದದಲ್ಲಿ ನಾವು ಇರಬೇಕು." ಹೊಟ್ಟೆಕಿಚ್ಚು ಹಾಗೂ ಸುಳ್ಳು ನಿಂದೆ ಇವುಗಳಿಂದ ದೂರಾ ಗುವದೆಂದರೆ ದುರ್ಬಲತೆಯಿಂದಲೂ ಕ್ಷುದ್ರತೆಯಿಂದಲೂ ದೂರಾದಂತೆಯೇ. ಕ್ಷುದ್ರತೆ–ದುರ್ಬಲತೆಗಳಿಂದ ದೂರಾದರೆ ಸಾಲದು. ವಿಶಾಲತೆ–ಸಬಲತೆಗಳಿಗೆ ಸಮೀಪಿಸಲೂ ಬೇಕಾಗುತ್ತದೆ. ಕ್ಷುದ್ರತೆ–ದುರ್ಬಲತೆ ಗಳಿಂದ ದೂರಾಗಲು ಹೊಟ್ಟೆಕಿಚ್ಚು–ನಿಂದೆಗಳನ್ನು ಓಡಿಸುವ ಉಪಾಯವಿರುವಂತೆ, ವಿಶಾಲತೆ—ಸಬಲತೆ ಇವುಗಳನ್ನು ಸಮೀಪಿಸಲು ರೋಷ ಹಾಗೂ ಅವಮಾನಗಳನ್ನು ಮೀರಿನಿಲ್ಲುವ ಉಪಾಯವೂ ಇರುತ್ತದೆ. ''ರೋಷ ಹಾಗೂ ಅವಮಾನಗಳನ್ನು ಮೀರಿ ನಿಂತ ವ್ಯಕ್ತಿಯು ನಿಜವಾಗಿ ದೊಡ್ಡವನಾಗುತ್ತಾನೆ.'' ಸತ್ಯ, ಧೈರ್ಯ ಇವುಗಳ ಬೆಳುವಣಿಗೆಯು ನಿರಾತಂಕವಾಗಲು ಅದು ಹೊಟ್ಟೆಕಿಚ್ಚು, ನಿಂದೆ ಈ ಕಸಗಳನ್ನು ಕಿತ್ತುಹಾಕಿತು. ವ್ಯಕ್ತಿಯ ಬೆಳವಣಿಗೆಗೆ ಅಡ್ಡಬಂದ ರೋಷ-ಅವಮಾನಗಳನ್ನು ಅತ್ತ ನೂಕಿತು. ವ್ಯಕ್ತಿಯ ಬೆಳವಣಿಗೆಯೊಂದಿಗೆ ಅಲ್ಲಿ ಕೃತಜ್ಞತಾಶಕ್ತಿಯೊಂದು ಪಲ್ಲವಿಸಿ ಫಲಿಸುವದರಲ್ಲಿರುತ್ತದೆ. ಆ ಶಕ್ತಿಯು ವ್ಯಕ್ತಿಯ ನೆಲೆಯನ್ನಳೆಯುವ ಅಳತೆಗೋಲು. ಆದ್ದರಿಂದಲೇ '' ಯಾವುದೇ ವ್ಯಕ್ತಿಯ ಶ್ರೇಷ್ಠತೆಯನ್ನು ಅವನ ಕೃತಜ್ಞತಾಶಕ್ತಿಯ ಮೇಲಿಂದ ಅಳೆಯಲಾಗುವದು.'' ಕೃತಜ್ಞತೆಯು ಶ್ರೇಷ್ಠತೆಯ ಲಕ್ಷಣವಾದರೆ, ಶ್ರೇಷ್ಠ ವ್ಯಕ್ತಿಯು ಇಳೆಬೆಳೆ ದಾನವಿತ್ತ ದೇವನಿಗೆ ಕೃತಜ್ಞನಾಗಿರುವನಲ್ಲದೆ, ಇಳೆಬೆಳೆ ಹೊತ್ತ ಸೃಷ್ಟಿಗೂ, ಇಳೆಬೆಳೆಗೆ ತನ್ನಂತೆ ಕೈಯೊಡ್ಡಿದ ಪ್ರಾಣಿಕೋಟಿಗೂ ಕೃತಜ್ಞನಾಗಿರುವನು. ಅವನು ಸರ್ವಕ್ಕೂ ವಿನಯಶೀಲನಾಗಿರುವನಲ್ಲದೆ, ಸರ್ವೇಶನೊಡನೆ ಪ್ರೇಮಶಾಲಿಯೂ ಆಗಿರುವನು. ಯಾರನ್ನು

ಪ್ರೀತಿಸಿದರೂ ಅದು ಪರಮಾತ್ಮ ಪ್ರೇಮವೇ ಆಗಿರುತ್ತದೆ. ಉಳಿದೆಲ್ಲ ಪ್ರೇಮಗಳನ್ನು ಬಿಟ್ಟುಬಿಟ್ಟಾಗಲೇ ದೈವೀ ಪ್ರೇಮದ ಅರಿವು ನಮಗಾಗುವದು. ಉಳಿದೆಲ್ಲ ಪ್ರೇಮಗಳನ್ನು ಬಿಟ್ಟುಬಿಡುವ ಕಾರಣವೇನು? ಯಾಕಂದರೆ "ಮಾನವ ಪ್ರೀತಿಯು ಹಿಂದೆ ಯಾವಾಗಲೂ ಒಂದು ಕಹಿ ರುಚಿ ಇರುವದು. ಆದರೆ ಪರಮಾತ್ಮ ಪ್ರೇಮವು ಎಂದಿಗೂ ನಿರಾಶಗೊಳಿಸದು." ಆದ್ದರಿಂದ ಪರಮಾತ್ಮ ಪ್ರೇಮವನ್ನು ಪಡೆದವ ನಿಗೆ ಮಾನವ ಪ್ರೀತಿಯ ಪಾಡೇನು? ಹಾಗಾದರೆ ಆ ಪರಮಾತ್ಮ ಪ್ರೇಮವನ್ನು ಪಡೆಯುವದಕ್ಕೂ ಅದನ್ನು ಕಾಪಾಡಿಕೊಳ್ಳುವುದಕ್ಕೂ ಉಪಾಯಗಳಿರಬಹುದಲ್ಲವೇ? "ಪ್ರಸನ್ನ ಚಿತ್ತದ ಆಳವಾದ ಶಾಂತಿ ಯಲ್ಲಿ ಶುದ್ಧವೂ ಸತತವೂ ಆದ ಐಕ್ಯತೆಯ ಭಾವದಲ್ಲಿ ಅದು ಪೂರ್ಣವಾಗಿ ಅರಳುವದು." ಇದು ದಿವ್ಯ ಪ್ರೇಮವನ್ನು ಪಡೆಯುವ ಉಪಾಯವಾಯಿತು. ಇನ್ನು ಅದನ್ನು ಕಾಪಾಡಿಕೊಳ್ಳುವ ಬಗೆಯೇನಂದರೆ— "ಚೈತ್ಯ ಕೇಂದ್ರದ ಚೈತನ್ಯದಲ್ಲಿಯೇ ಜೀವಿಸು. ಅಂದರೆ ನಿನ್ನ ಸಂಕಲ್ಪವು ದಿವ್ಯಸಂಕಲ್ಪವನ್ನೇ ಸ್ಫುಟ ಗೊಳಿಸುವದಲ್ಲದೆ ನಿನ್ನ ಪರಿವರ್ತಿತ ಇರುವಿಕೆಯು ದೈವೀ ಪ್ರೇಮವನ್ನು ಸ್ವೀಕರಿಸುವುದಕ್ಕೂ ಪ್ರಕಟಿಸುವ ದಕ್ಕೂ ಸಮರ್ಥವಾಗುವದು."

## ನಮ್ಮ ಸ್ಥಾನ

ಜೀವನ ನಾಟಕದಲ್ಲಿ ಬರುವ ಪಾತ್ರಗಳೆಲ್ಲವೂ ಒಂದೊಂದು ಉದ್ದೇಶವನ್ನು ಪೋಷಿಸುವದಕ್ಕಾ ಗಿಯೇ ಬರಬೇಕಷ್ಟೇ? ಅಂಥ ಯಾವ ಉದ್ದೇಶಪೋಷಣೆಯು ನಮ್ಮ ವ್ಯಕ್ತಿತ್ವದಿಂದ ಸಾಧಿಸಬೇಕಾಗಿದೆ ಯೆಂಬುದನ್ನು ಕಂಡುಕೊಳ್ಳುವದು ಮೊದಲಿನ ಕರ್ತವ್ಯವಾಗಿದೆ. ತನ್ನ ಸ್ಥಾನವನ್ನು ನಿರ್ಧರಿಸಿಕೊಂಡ ಬಳಿಕ ಅದಕ್ಕೆ ತನ್ನನ್ನು ಸಂಪೂರ್ಣ ಧಾರೆಯೆರೆಯಬೇಕು. "ಪೃಥ್ವಿಯ ರಾಗಿಣಿಯಲ್ಲಿ ತಾನು ಕೇವಲ ಒಂದು ಸ್ವರವನ್ನು ಮಾತ್ರ ನುಡಿಸುತ್ತಿದ್ದೇನೆಂಬದನ್ನು ಮರೆಯದಿರಬೇಕು. ಆದರೂ ಸಮಗ್ರ ಸ್ವರಮೇಳ ನಕ್ಕೆ ನಮ್ಮ ಸ್ವರವೂ ಅನಿವಾರ್ಯವಾದದ್ದಾಗಿರುವದು. ಈ ಸ್ವರವು ಎಷ್ಟು ಸರಿಯಾಗಿ ನುಡಿಯುವು ದೆಂಬುದರ ಮೇಲೆಯೆ ಅದರ ಬೆಲೆಯು ಅವಲಂಬಿಸಿರುವದು." ಹೀಗೆ ತನ್ನ ಸ್ಥಾನವನ್ನು ಕಂಡುಕೊಳ್ಳು ವದೂ ತನ್ನ ಕರ್ತವ್ಯವನ್ನು ಅರಿತುಕೊಳ್ಳುವದೂ ಮುಗಿದ ಬಳಿಕ ಆ ವ್ಯಕ್ತಿ ಪರಮಾತ್ಮನ ಕಡೆಗೆ ಹೊರಳಿ ನಿಂತು ತನ್ನದೆಲ್ಲವನ್ನೂ ತೆರವುಗೊಳಿಸಿಕೊಳ್ಳಬೇಕಾಗುವದು. ಯಾಕಂದರೆ "ನೂತನವಾಗಿ ತುಂಬಲ್ಪಡುವ ದಕ್ಕಾಗಿ ಪಾತ್ರೆಯು ಕೆಲಕಾಲ ತೆರವಾಗಿರತಕ್ಕದ್ದು." ತೆರವಾಗಿ ನಿಂತ ಹೃದಯ ಬುದ್ಧಿಗಳು ಬರಿದೋ ಬರಿದು ಎಂದೆನಿಸಿದರೂ ಅವುಗಳಲ್ಲಿ ಯೋಗ್ಯವಾದ ಸತ್ವವನ್ನು ತುಂಬುವ ಕೆಲಸವನ್ನು ನಿಯತಿಯು ಕೈಕೊಳ್ಳುವಳು. ನಾವೆಲ್ಲರೂ ಒಬ್ಬ ತಾಯಿಯ ಮಕ್ಕಳೇ ಅಹುದು. ಅವಳ ಪ್ರೇಮವು ಎಲ್ಲರ ಮೇಲೆ ಸಮಾನವಾಗಿ ಪಸರಿಸಿರುವುದೂ ನಿಜವು. ಆದರೆ ಆ ತಾಯಿಯು ಅವರವರ ಪ್ರಕೃತಿ ಹಾಗೂ ಸ್ವೀಕಾರ ಶಕ್ತಿಗೆ ಅನುಸರಿಸಿ ಅವರವರಿಗೆ ಕೊಡುವುದನ್ನು ಕೊಡಮಾಡುವಳು. ಪ್ರತಿಯೊಬ್ಬರಿಗೆ ಅವನ ಅಥವಾ ಅವಳ ಗ್ರಹಣಶಕ್ತಿಗನುಸರಿಸಿ ವಿಷಯಗಳನ್ನು ಹೇಳಲಾಗುವದು." ಅವರವರ ರೀತಿಗೆ ಒಗ್ಗುವಂತೆ ಜ್ಞಾನ ದಾನ ಮಾಡುವದೂ, ಅವರವರ ರೋಗಕ್ಕೆ ತಕ್ಕಂತೆ ಔಷಧ ಕೊಡುವದೂ, ಒಂದೇ. ಒಬ್ಬ ರೋಗಿಗೆ ಕೊಟ್ಟ ಔಷಧವಾಗಲಿ ಅವನಿಗೆ ಹೇಳಿದ ಪಥ್ಯವಾಗಲಿ ಬೇರೊಬ್ಬ ರೋಗಿಗೆ ಎಷ್ಟೂ ಉಪಯೋಗಕ್ಕೆ ಬೀಳ ಲಾರದೆಂಬುದಕ್ಕೆ ಯಾರೂ ಪ್ರತಿ ಮಾತನಾಡಲಾರರು. ಅದರಂತೆ ಒಬ್ಬನಿಗೆ ಹೇಳಿದ ಜ್ಞಾನವೂ ಇನ್ನೊಬ್ಬ ನಿಗೆ ಕೆಲಸಕ್ಕೆ ಬಾರದ ವಸ್ತುವೇ ಸೈ. ತನಗೆ ಉಪಯೋಗವಾಗದ ಔಷಧವೂ ಜ್ಞಾನವೂ ಒಂದೇ. ಅವು ಗಳಿಂದ ಪ್ರಯೋಜನವಾಗುವದಕ್ಕಿಂತ ಅಪಾಯವಾಗುವ ಸಂಭವವೇ ಹೆಚ್ಚಿಗಿರುತ್ತದೆ. ಆದ್ದರಿಂದ ಅವರವರ ಪ್ರಕೃತಿಗೆ ಅನುಕೂಲಿಸುವ ಜ್ಞಾನವನ್ನು ಅವರವರ ಗ್ರಹಣಶಕ್ತಿಗೆ ತಕ್ಕಂತೆ ಸ್ವೀಕರಿಸಿ ಗಸ್ಪುಗಡದಾಗಿರು ವುದೇ ಕರ್ತವ್ಯವಾಗಿದೆ. "ಒಬ್ಬರಿಗೆ ಕೊಟ್ಟ ಜ್ಞಾನವು ಇನ್ನೊಬ್ಬರಿಗೆ ಪ್ರಯೋಜನಕರವೂ ಹಿತಕರವೂ

ಆಗದೆ ಹೋಗಬಹುದೆಂಬುದು ಸಹ ಕಂಡು ಬರುತ್ತದೆ. ಆದುದರಿಂದಲೇ ಗುರುವು ಒಬ್ಬರಿಗೆಂದು ಹೇಳಿದ ವೈಯಕ್ತಿಕ ಉಪದೇಶವನ್ನು ಬೇರೆಯವರಿಗೆ ಪ್ರಕಟಮಾಡಬಾರದೆಂಬ ಮಾತಿನ ಕಾರಣವು ಇದೇ ಆಗಿದೆ." ನಮ್ಮ ನಮ್ಮ ಪ್ರಕೃತಿಗೆ ಹಾಳತವಾಗುವ ವಿಷಯವನ್ನೇ ಪರಮಾತ್ಮನು ದಾನಮಾಡುವುದರಿಂದ ಅದನ್ನು ಯಾವಾಗಲೂ ಆನಂದದಿಂದ ಸ್ವೀಕರಿಸಬೇಕಾಗುತ್ತದೆ. ಆ ಕೊಡುಗೆಯಿಂದ ಮಂಗಲವಾದಾಗ ಸಹ ಆ ಕೃತಜ್ಞತೆಯನ್ನು ಬಾಯಿಬಿಚ್ಚಿ ಘಂಟಾಘೋಷವಾಗಿ ಹೇಳುವುದೂ ಬೇಡ. ಅದು ಸಹ ಸರಿಯಾದ ದಾರಿ ಅಲ್ಲ. "ಪರಮಾತ್ಮನಿಗೆ ಕೃತಜ್ಞತೆಯನ್ನು ತೋರಿಸುವದಕ್ಕೆ ಶಾಂತವಾಗಿ ಸುಖದಿಂದಿರುವದಕ್ಕಿಂತ ಬೇರೆ ಶ್ರೇಷ್ಠ ಮಾರ್ಗವೇ ಇಲ್ಲ." ಪರಮಾತ್ಮನಿಗೆ ಕೃತಜ್ಞತೆಯನ್ನು ತೋರಿಸುವ ಭರದಲ್ಲಿ ಪರಮಾತ್ಮನಿಗೆ ತಾನು ಇಷ್ಟೊಂದು ಒಲುಮೆಯವನಾಗಿದ್ದೇನೆಂಬುದನ್ನು ಬಿತ್ತರಿಸುವ ಹುಚ್ಚುತನವನ್ನೂ ಮಾಡಬಹುದಾಗಿದೆ. ಆ ದಿವ್ಯ ಒಲುಮೆಯನ್ನು ಉಳಿಸಿಕೊಳ್ಳುವದಕ್ಕೆ ಮೌನವಾಗಿ ಕೃತಜ್ಞತೆಯನ್ನು ಅರ್ಪಿಸುವದೇ ಮೇಲಾದ ಉಪಾಯವೆನ್ನುವದು ಸುಳ್ಳಲ್ಲ.

## ಧ್ಯೇಯದ ಬೆಲೆ

ಜೀವನದಲ್ಲಿ ನಮ್ಮಸ್ಥಾನವನ್ನು ನಾವು ಕಂಡುಕೊಂಡು ಸೃಷ್ಟಿಯ ಒಂದಂಗವಾಗಿ ಅದರ ಬೆಳವಣಿಗೆ-ವಿಕಾಸಗಳೊಂದಿಗೆ ಬೆಳೆಯುತ್ತ ಹೋಗಲು ಒಪ್ಪಿದವನು ಧ್ಯೇಯದ ಬೆಲೆಯನ್ನು ಅರಿತಂತೆಯೇ ಸರಿ. ಸ್ವಸ್ಥಾನದಲ್ಲಿ ನೆಲೆಯಾಗಿ ನಿಂತುಕೊಂಡವನು ನಿಂತಲ್ಲಿಯಿಂದಲೇ ಬೆಳೆದು ಬರಬೇಕಾದರೆ ಅವನಿಗೆ ಪರಮಾತ್ಮನ ಮೇಲಿನ ನಂಬುಗೆಯು ಅವಶ್ಯವಾಗಿದೆ. ಆ ನಂಬುಗೆಯು ಶಾಸ್ತ್ರವೋದಿದಾಗ ಕೇಳಿದಾಗ ಒಮ್ಮೆ ಥಾಳಿಸಬಹುದು. ಅದು ಸತ್ಪುರುಷರ ಸಹವಾಸ ಪಡೆದಾಗ ಇನ್ನೊಮ್ಮೆ ಮಿಂಚಬಹುದು. ಮತ್ತೊಮ್ಮೆ ಪುಣ್ಯಸ್ಥಳಕ್ಕೆ ಹೋದಾಗ ಅದು ಮಿಸುಕಬಹುದು. ಮಗುದೊಮ್ಮೆ ದೈವದ ಕೂಡ ಚಾಗುಭಲೆಯೆನ್ನುವಂತೆ ಆವೇಶಿಸಬಹುದು. ಆದರೆ ಇವಾವವೂ ಪ್ರಗತಿಯ ಲಕ್ಷಣವೆನ್ನಿಸಿಕೊಳ್ಳಲಾರವು. "ಪರಮಾತ್ಮನ ಮೇಲಿನ ನಮ್ಮ ನಂಬುಗೆಯು ಹೊರಗಿನ ಪರಿಸ್ಥಿತಿಯ ಮೇಲೆ ಅವಲಂಬಿಸತಕ್ಕದ್ದಲ್ಲ." ತಾನೊಬ್ಬನೆ ಇದ್ದಾಗ, ತನ್ನಷ್ಟಕ್ಕೆ ತಾನೇ ಇದ್ದಾಗ, ಸಂಕಟದಲ್ಲಿ ವೆಂಕಟರಮಣವೆನ್ನುವ ಪ್ರಸಂಗ ಬಿಟ್ಟು ಹಾಯಾಗಿ ಸುಖದಲ್ಲಿಯೇ ಮುಳುಗಿದಾಗ ಪರಮಾತ್ಮನು ಬೇಕಾಗುವಂತೆ, ಕುತ್ತುಗಳ ಬಾಯಿಗೆ ಶಿಲುಕಿ ಕಕ್ಕಸಪಡುತ್ತಿರುವಾಗಲೂ, ಅನಾರೋಗ್ಯ–ನಿರ್ಧನತೆ–ಅಪಮಾನಾದಿಗಳ ನಿಷ್ಠುರತೆಯಲ್ಲಿ ಕಂಗಾಲಾಗಿರುವಾಗಲೂ ಪರಮಾತ್ಮನ ಮೇಲಿನ ನಂಬುಗೆಯು ನಂದಾದೀಪವಾದರೆ ಆ ನಂಬುಗೆಗೆ ನೆಲೆಯಿದೆ. ಅದೇ ನಮ್ಮ ಧ್ಯೇಯದ ಬೆಲೆಯನ್ನು ಬಿಚ್ಚಿ ತೋರಿಸುವ ಬೆಳಕು. ಪರಮಾತ್ಮನ ಮೇಲಿನ ನಂಬುಗೆಗೆ ಇಂಬುಗೊಟ್ಟು ತನ್ನ ನೆಲೆಯಲ್ಲಿ ನಿಂತುಕೊಂಡವನು, ಕಲಮಿ ಮಾಡಿದ ರೆಂಬೆಯು ದೊಡ್ಡಮರವನ್ನು ಹೊಂದುಕೊಂಡು ಚಿಗಿತು ಬರುವಂತೆ ತಾನು ಪ್ರಗತಿ ಹೊಂದುವುದನ್ನು ಕಾಣುವನಲ್ಲದೆ ಹೆರರಿಗೆ ತೋರಿಸಿಯೂ ಕೊಡುವನು. ಪರಮಾತ್ಮನು ಸೌಂದರ್ಯದ ಮುಖಾಂತರವಾಗಿ ಅವನ ಭೌತಿಕದಲ್ಲಿ ಪ್ರಕಟಗೊಳ್ಳುವನು. ಬುದ್ಧಿಯಲ್ಲಿ ಜ್ಞಾನದ ಮುಖಾಂತರವಾಗಿ, ಪ್ರಾಣದಲ್ಲಿ ಶಕ್ತಿಯ ಮುಖಾಂತರವಾಗಿ ಹಾಗೂ ಹೃತ್‌ಪುರುಷನಲ್ಲಿ ಪ್ರೇಮದ ಮುಖಾಂತರವಾಗಿ ಪ್ರಕಟಗೊಳ್ಳುವನು. ಆದರೆ ಇನ್ನೂ ಹೀಗಾಗಲಿಲ್ಲವೆಂದು ಆತುರಬೇಡ. "ತಾಳ್ಮೆಯಿಂದಿರುವವನು ಯಾವಾಗಲೂ ಸಿದ್ಧಿಗೆ ತಲುಪುವನು." ತಾಳ್ಮೆಯಿಂದಿರುವುದೂ ಕಲಿಯದೆ ಬರಲಾರದು. ತಾಳ್ಮೆಯಿಂದಿರುವವನು ದಾರಿ ಕಾಯಲು ಕಲಿತಂತೆ. ದಾರಿಕಾಯುವ ರಹಸ್ಯ ತಿಳಿದವನು ಅರ್ಥಸಿದ್ಧಿಯನ್ನು ಪಡೆದಂತೆಯೇ. "ಮಾರ್ಗಪ್ರತೀಕ್ಷಿಸುವದನ್ನು ಅರಿಯುವುದೆಂದರೆ ಕಾಲಪುರುಷನನ್ನು ನಿಮ್ಮ ಪಕ್ಷಕ್ಕೆ ಇಟ್ಟುಕೊಂಡ ಹಾಗೆ"

# ಪ್ರಗತಿಯ ಮಾರ್ಗದಲ್ಲಿ

ನಮ್ಮ ಪ್ರಕೃತಿಯಲ್ಲಿ ಪರಮಾತ್ಮ ಪ್ರಕಟನೆಯಾಗುತ್ತಿರುವುದು ನಮ್ಮ ಪ್ರಗತಿಯ ಲಕ್ಷಣವಾಗಿರುವಂತೆ ಕುತ್ತುಗಳು, ಅಡೆತಡೆಗಳು ಪ್ರಿಯವಸ್ತುಗಳ ಘಾಸಿ ಇವು ನಮ್ಮ ಮೇಲೆ ಆಡಂಬರುವುದೂ ಪ್ರಗತಿಯ ಲಕ್ಷಣವೇ ಅನ್ನಬೇಕು. ಅದು ಪರಮಾತ್ಮನ ಅದೃಶ್ಯಶತ್ರುಗಳೇ ಕೊಟ್ಟ ಪ್ರಮಾಣ ಪತ್ರ. ಸೌಂದರ್ಯಾದಿಗಳು ಪ್ರಕೃತಿಯಲ್ಲಿ ಪ್ರಕಟವಾಗುವದು ಪರಮಾತ್ಮನಿತ್ತ ಪ್ರಮಾಣಪತ್ರವೆಂದರೆ, ಅದಕ್ಕಿಂತಲೂ ಮಿಗಿಲಾದದ್ದು ಅದೃಶ್ಯಶತ್ರುಗಳೇ ಕೊಟ್ಟ ಪ್ರಮಾಣಪತ್ರ. "ಯಾವಾಗ ಒಂದಿಷ್ಟು ನಮ್ಮ ಸುನಿಶ್ಚಿತವಾದ ಆಧ್ಯಾತ್ಮಿಕ ಪ್ರಗತಿಯಾಗುವದೋ ಆವಾಗ ಪರಮಾತ್ಮನ ಅದೃಶ್ಯಶತ್ರುಗಳು ಸೇಡು ತೀರಿಸಿಕೊಳ್ಳಲು ಯಾವಾಗಲೂ ಹೆಣಗುತ್ತವೆ.'' ಆ ಅದೃಶ್ಯಶತ್ರುಗಳಿಗೆ ನಮ್ಮೊಳಗಿನವೇ ಆದ ಕೆಲವು ಶಕ್ತಿಗಳು ಆಶ್ರಯ ಕೊಡುವ ಪರಿಸ್ಥಿತಿಯಿರುವಲ್ಲಿಯಂತೂ ಅವುಗಳ ಏರಾಟಕ್ಕೆ ಇತಿಮಿತಿಯಿರಲಾರದು. ಆಗ ವ್ಯಕ್ತಿಯು ಸಂಪೂರ್ಣ ಎಚ್ಚರಿಕೆಯಲ್ಲಿ ಸಂತು ವೈರಿಯ ಕಡೆಗೆ ನೋಡಿ ತಿರಸ್ಕಾರದ ಮುಗುಳು ನಕ್ಕರೆ ಸಾಕು. ಅದು ನಿಂತ ನಿಂತಲ್ಲಿಯೇ ಕೈಕಾಲುಕಳಕೊಳ್ಳುವದು. ಅದಕ್ಕಿಂತ ತೀಕ್ಷ್ಣತರವಾದ ಉಪಾಯವು ಇನ್ನೊಂದು ಇರಲಾರದು. ''ಯಾವನೊಬ್ಬ ವೈರಿಯನ್ನು ನೋಡಿ ಮುಗುಳುನಗೆ ಬೀರುವುದೆಂದರೆ ಆತನನ್ನು ನಿಶ್ಶಸ್ತ್ರಗೊಳಿಸಿದಂತೆಯೇ'' ಅಂತರಾತ್ಮನನ್ನು ಗಾಸಿಗೊಳಿಸಲಿಕ್ಕೆ ಹೊಂಚಿನಿಂತ ಆ ಅದೃಶ್ಯಶತ್ರುಗಳು ಶಸ್ತ್ರಹೀನರಾದಂತಾಗಲು ನಮ್ಮ ದೇಹವನ್ನು ಘಾತಿಸಲು ಪ್ರಯತ್ನಿಸುವರಂತೆ. ಆಗ "ನಿನ್ನ ದೇಹದಲ್ಲಿ ಹೆಚ್ಚಾದ ಶಾಂತಿ–ಸಮಾಧಾನಗಳನ್ನು ನೆಲೆಗೊಳಿಸು. ಅದರಿಂದ ಅನಾರೋಗ್ಯದ ಅಭಿಯೋಗಗಳನ್ನು ಎದುರಿಸುವ ಸಾಮರ್ಥ್ಯವು ನಿನಗೆ ಬರುವದು'' ಅಚಲವಾದ ವಿಶ್ವಾಸದ ಮೂಲಕ ಪರಮಾತ್ಮನ ಕೃಪೆಯು ನಮ್ಮ ಜೊತೆಗೇ ಇರುವುದರಿಂದ ಕೊನೆಯಲ್ಲಿ ಅವು ಸೋತೇಹೋಗುವವಂತೆ. ಅದೃಶ್ಯಶತ್ರುಗಳು ಸಹ ಅದೃಶ್ಯವಾಗಿ ಬಿಟ್ಟಬಳಿಕ ಪರಮಾತ್ಮನ ಬಾಹುಗಳಲ್ಲಿ ಸುರಕ್ಷಿತರಾಗಿದ್ದ ನಮಗೆ ಬೇರೊಂದು ಪ್ರಗತಿಯಾದರೂ ಏತಕ್ಕೆ ಬೇಕಾಗುವದು.

# ತಾಯಿಗೆ ತಕ್ಕ ಮಗು

ಜಗಜ್ಜನನಿಯಾದ ಮಹಾತಾಯಿಗೆ ತಕ್ಕ ಮಗುವಿನಂತೆ ನಮ್ಮ ವರ್ತನವು ಮಾರ್ಪಟ್ಟು ಬರುತ್ತಿರುವಂತೆ ನೋಡಿಕೊಳ್ಳಬೇಕಾಗಿದೆ. ಅದಕ್ಕೆ ಒಂದೇ ಒಂದಾದ ಉಪಾಯವೆಂದರೆ ನಾವು ಕೇವಲ ಪರಮಾತ್ಮನ ಕೃಪೆಯನ್ನು ಅವಲಂಬಿಸಿರುವುದನ್ನು ಕಲಿಯಬೇಕಾಗುತ್ತದೆ. ಸಕಲ ಸಂದರ್ಭಗಳಲ್ಲಿ ಆ ಕೃಪೆಯ ಸಹಾಯ ಬೇಡುವುದನ್ನೂ ಕಲಿಯಬೇಕಾಗುತ್ತದೆ. ಅದು ರೂಢಿಯಾಗಿ ಬಿಟ್ಟರೆ ಆ ಕೃಪೆಯು ನಮ್ಮನ್ನು ನಡಿಸಿಕೊಂಡು ಹೋಗಲು ನಡುಕಟ್ಟಿ ನಿಲ್ಲುತ್ತದೆ. ಆಗ ಅದು ನಿರಂತರವಾಗಿ ಪವಾಡಗಳನ್ನು ಎಸಗುವುದನ್ನು ಕಾಣಬಲ್ಲೆವು. ಆ ಪವಾಡಗಳ ಆಶ್ಚರ್ಯವನ್ನೂ ಸಂಖ್ಯೆಯನ್ನೂ ಎಣಿಸುವುದಕ್ಕೆ ಪರಮಾತ್ಮನ ಕೃಪೆಯನ್ನು ಲೆಕ್ಕಿಸಬೇಕಾಗಿರುವಂತೆ, ಆ ಕೃಪೆಯನ್ನು ಲೆಕ್ಕಿಸುವುದಕ್ಕೆ ನಮ್ಮ ವಿಶ್ವಾಸವನ್ನು ಪ್ರಮಾಣಿಸಿ ನೋಡಬೇಕಾಗುತ್ತದೆ. ಆ ವಿಶ್ವಾಸವು ದಿನದಿನಕ್ಕೆ ಪರಿಶುದ್ಧವಾಗುತ್ತ ಸಾಗಬೇಕಾದರೆ ನಮ್ಮಲ್ಲಿಯ ಡಾಂಭಿಕತೆಯನ್ನು ದೂರಗೊಳಿಸುವುದು ಮರೆಯದ ಮಾತಾಗಿದೆ. ಅದರಂತೆ ಭೌತಿಕ ಪ್ರಜ್ಞೆಯನ್ನು ದಾಟಿದ ಮೇಲೆ ಸಹ ಆತ್ಮಿಕ ಪ್ರಜ್ಞೆಯಲ್ಲಿ ಅತಿರೇಕವಾಗಿ ನಮ್ಮನ್ನು ಸಂಧಿಸುವ ಅಹಂಕಾರದ ಪ್ರವಾಹವನ್ನು ಮತ್ತೊಮ್ಮೆ ದಾಟಬೇಕಾಗುವುದು. ಅದಕ್ಕೆ ಹೃದಯದ ಮೌನದಲ್ಲಿ ಸ್ಥಿರವಾಗಿರುವ ಅಭೀಪ್ಸಾಗ್ನಿಯು ಪ್ರಜ್ವಲಿಸುವಂತೆ ಮಾಡಿದರೆ ಆ ತೇಜಸ್ವಿಯಾದ ಅಭೀಪ್ಸೆಯು ಅದೆಂಥ ಅಹಂಕಾರವನ್ನಾದರೂ ಚದುರಿಸಬಲ್ಲದೆಂಬ ಮಾತನ್ನು ನೆನಪಿನಲ್ಲಿಡತಕ್ಕದ್ದು. ಆದರೆ ಅಭೀಪ್ಸಾಗ್ನಿಯು ಪ್ರಜ್ವಲಿಸುವುದಕ್ಕೆ

ಮಾಡಬೇಕಾದ ಉಪಾಯವೆಂದರೆ–ನಿಯಮಿತವಾದ ಶಿಕ್ಷಣದಿಂದಲೂ ಅಭ್ಯಾಸದಿಂದಲೂ ಬೆಳೆದುಬಂದ ಏಕಾಗ್ರತೆ ಹಾಗೂ ಸಂಕಲ್ಪಶಕ್ತಿ ಇವುಗಳಿಂದ ನಮ್ಮ ಅಭೀಪ್ಸೆಯನ್ನು ಧ್ಯಾನಿಸುವುದು; ಪ್ರಾರ್ಥಿಸುವುದು. ಯಾವ ಪ್ರಾರ್ಥನೆಯಾದರೂ ಫಲಿಸಿ ಬರುವುದಕ್ಕೆ ತಾಳ್ಮೆಯೂ ಧೈರ್ಯವೂ ಪ್ರಾರ್ಥನೆಗೆ ಬೆಂಬಲವಾಗಿ ನಿಲ್ಲಬೇಕಾಗುತ್ತದೆ. ಇದೇ ನೇರವಾದ ಹಾಗೂ ನಿಶ್ಚಿತ ಫಲದಾಯಿಯಾದ ಉಪಾಯವಾಗಿದೆ. ಇದನ್ನುಳಿದು ಹೊರಮಗ್ಗುಲಲ್ಲಿ ನಡೆಯುವ ಇನ್ನಾವ ಖಟಾಟೋಪಗಳಲ್ಲಿಯೂ ಆಸಕ್ತಿಯನ್ನು ತೋರಿಸುತ್ತಿರಬಾರದು. "ಆಧ್ಯಾತ್ಮಿಕ ವಿಷಯಗಳನ್ನು ಕುರಿತ ಭಾಷಣಗಳನ್ನು ಸಹ ಕೇಳದಿರುವುದೇ ಯಾವಾಗಲೂ ಒಳ್ಳೆಯದು. ಪ್ರತಿ ಒಬ್ಬನೂ ತನ್ನ ಮಾರ್ಗವನ್ನೇ ಅನುಸರಿಸಬೇಕು. ಅದಕ್ಕೆ ಇನ್ನಾರ ಸಂಬಂಧವೂ ಇರಲಾರದು." ಇಂಥಲ್ಲಿ "ಪರಮಾತ್ಮನೊಬ್ಬನನ್ನೇ ಮಾತ್ರ ನಿನ್ನ ಅಂತರಾತ್ಮನ ವಿಶ್ವಾಸಕ್ಕೆ ಪಾತ್ರನನ್ನಾಗಿ ಮಾಡಿಕೊಳ್ಳು." ಎಂಬ ವಿಚಾರವೇ ದೃಢಪಡುತ್ತದೆ.

## ದಿವ್ಯ ಕೃಪೆಗಿರುವ ಶಕ್ತಿ

ನಮ್ಮ ಪ್ರಕೃತಿಯಿಂದು ಅದೆಂಥ ನಿಮ್ನತರದ್ದೇ ಆಗಿರಲಿ, ನಮ್ಮ ಕರ್ಮವು ಅದೆಂಥ ಬೆಟ್ಟವಾಗಿಯೇ ನಿಂತಿರಲಿ, ನಮ್ಮ ಕಲ್ಯಾಣದ ಕಾಲವು ಅದೆಷ್ಟೇ ದೂರದಲ್ಲಿರಲಿ–ಇವೆಲ್ಲವುಗಳನ್ನೂ ಮೀರುವ ಶಕ್ತಿ ದಿವ್ಯ ಕೃಪೆಗಿದೆ. ಆ ಕೃಪೆಯ ಪ್ರಸಾದದಿಂದ ಕೆಲವೊಂದು ಸಮಯದಲ್ಲಿಯೇ ನಮ್ಮ ನಿಮ್ನ ಪ್ರಕೃತಿಯು ಉಚ್ಚ ಪ್ರಕೃತಿಯಾಗಿ ಮಾರ್ಪಾಡಾಗಬಹುದು. ನಮ್ಮ ಕರ್ಮಾಚಲವು ನಿಮಿಷದಲ್ಲಿ ಕರಗಿ ನೆಲಸಮವಾಗಬಹುದು. ನಮ್ಮ ಕಲ್ಯಾಣದ ತಿಥಿಯು ಇದೇ ಗಳಿಗೆಗೆಂದು ನಿರ್ಣಯವಾಗಬಹುದು. ಈ ಸಾಮರ್ಥ್ಯವು ದಿವ್ಯ ಕೃಪೆಯೊಂದಕ್ಕೆ ಮಾತ್ರ ಅದೆಯಂತೆ. ಅದು ವಿಶ್ವವ್ಯಾಪಕ ನ್ಯಾಯಕ್ಕೆ ಸಹ ಅಡ್ಡಬಂದು ಅದನ್ನು ಬದಲಿಸಬಲ್ಲದು. ಆ ದಿವ್ಯಕೃಪೆಯು ನಮ್ಮದಾಗುವುದೆಂತು? ಆ ದಿವ್ಯಕೃಪೆಯನ್ನು ಪೃಥ್ವಿಯ ಮೇಲೆ ಪ್ರಕಟಗೊಳಿಸುವ ಮಹಾಕಾರ್ಯವು ಅವತಾರಿಗಳಿಗೆ ಮಾತ್ರ ಸಾಧ್ಯವಾದುದರಿಂದ ಶ್ರೀ ಮಹಾತಾಯಿಯವರೂ ಶ್ರೀ ಭಗವಾನರೂ ಆ ದಿವ್ಯಕೃಪೆಯನ್ನು ನಮ್ಮ ಸಮೀಪದ ವರೆಗೆ ತಂದು ಬಿಟ್ಟಿದ್ದಾರೆ. ಅದು ನಮ್ಮಿಂದ, ನಮ್ಮಲ್ಲಿ ತನ್ನ ಕೆಲಸವನ್ನು ಸಾಗಿಸುವುದಕ್ಕೆ ಅನುವಾಗಬೇಕಾದರೆ ನಾವು ಆ ದಿವ್ಯಕೃಪೆಯ ಯಂತ್ರವಾಗಲು ಬೇಕು. ಕ್ಷುದ್ರವಾದ ಅಹಂಕಾರದ ತೆರೆಗಳೇಳದ ಶಾಂತ ಸಮುದ್ರದಂಥ ಪ್ರಕೃತಿಯುಳ್ಳವರಾದರೆ ಅಂಥ ಯಂತ್ರವು ನಾವು ಆದಂತೆಯೇ ಸರಿ.

–ಸಿಂಪಿ ಲಿಂಗಣ್ಣ

---

To give oneself is the Secret of Sadhana, not to demand and acquire. The more one gives oneself, the more the power to receive will grow.

–Sri AUROBINDO

ಸಾಧನದ ರಹಸ್ಯವೆಂದರೆ ತನ್ನನ್ನು ತಾನು ಅರ್ಪಿಸಿಕೊಳ್ಳುವುದು; ಬೇಡುವುದಲ್ಲ, ಸಂಪಾದನೆ ಮಾಡುವುದಲ್ಲ. ಹೆಚ್ಚು ಹೆಚ್ಚು ಅರ್ಪಿಸಿಕೊಂಡಂತೆ ಪಡೆಯುವ ಶಕ್ತಿಯೂ ಆ ಪ್ರಮಾಣದಲ್ಲಿ ಬೆಳೆಯುವದು.

—ಶ್ರೀ ಅರವಿಂದರು

# ನಿಮ್ಮ ನೆನಹು

ಎನಗೆ ನಿಮ್ಮ ನೆನಹು ಅಳಿಸದಂತೆ ಸದಾ ಮೂಡಲಿ
ಹಗಲುಃ ರಾತ್ರಿ ನಿದ್ರೆ-ಕನಸು ಜಾಗೃತಿಯಲಿ ಆಡಲಿ ||

ನಾನು ಪಡೆವ ವಸ್ತು ನೀನದೆಂಬ ತಾರೆ ಮಿರುಗಲಿ
ಎತ್ತ ನಡೆದರತ್ತಲೊಲಿದು ಗುರಿಯ ದೆಶೆಗೆ ಹೊರಳಲಿ ||

ಹೆಜ್ಜೆ ತಪ್ಪಿ ನಡೆಯುವಲ್ಲಿ ಒಡನೆ ಮುಳ್ಳು ಚುಚ್ಚಲಿ
ನೋಟ ತಪ್ಪಿ ನೋಡುವಲ್ಲಿ ಧೂಳು ಕಣ್ಣೊಳೆರಚಲಿ ||

ಸುತ್ತುವರಿದು ದಾರಿತಪ್ಪದಂತೆ ನೀವೆ ಹಿಡಿಯಿರಿ
ಇಟ್ಟ ಹೆಜ್ಜೆ ವ್ಯರ್ಥವಾಗದಂತೆ ನೀವೆ ತಡೆಯಿರಿ ||

ದಿನದ ಕಾರ್ಯ-ಕಜ್ಜಗಳಲಿ ನಿಮಗೆ ಸೇವೆ ಸಲ್ಲಲಿ
ಮನದ ಕುಣಿತ-ಗುಣಿತಗಳಲಿ ನಿಮ್ಮ ತಾಳ ನಿಲ್ಲಲಿ ||

ಇಂಥ ನಿಲವು ಮೂಡಿ ನಿಲಲು ನಿಮ್ಮ ಯುಕ್ತಿಯೆತ್ತಿರಿ
ಎಂಥ ಬಲುಹು ಬಿಗಿದರದಕೆ ಸಿದ್ಧ ಮುದ್ರೆಯೊತ್ತಿರಿ ||

" ಬೇಕು ನೀವೆ ಬೇಕು " ಎನುವ ಮಂತ್ರವೊಂದೆ ಮಿಡಿಯಲಿ
ಏಕೆ ಅನ್ಯವಿನ್ನು ಎನುವ ತಂತ್ರವೊಂದೆ ಹಿಡಿಯಲಿ ||

ನೀವು ಸಿಗುವುದೆಂದೆ ಇರಲಿ, ಪಡೆವ ನೆಸಹು ನುಡಿಯಲಿ
ನೀವು ಸಿಗುವ ವರೆಗೆ ಜನ್ಮ ಜನ್ಮಗಳಲಿ ದುಡಿಯಲಿ ||

ನಿಮ್ಮ ಪಡೆವ ಬೆಲೆಯಲೊಂದು ಕಾಸು ಬೇರೆಯೊಡವೆಗೆ
ಒಮ್ಮೆ ಕೂಡ ಎಪ್ಪು ವ್ಯರ್ಥವಾಗದಿರಲಿ ಎಣಿಕೆಗೆ ||

ಬಿಟ್ಟ ಉಸಿರು ಕಂಡ ನೋಟ ಉಂಡ ಅಗಳು ಅಲ್ಲದೆ
ನುಡಿದ ಮಾತು ನೆನೆದ ಎಣಿಕೆ ಬೆಲೆಗೆ ಸಲ್ಲಲಾರದೆ ?

—ಸಿಂಪಿ ಲಿಂಗಣ್ಣ

# ಶ್ರೀ ಅರವಿಂದರ ಭಾಷಾಂತರಿತ ಕವನಗಳು

## ೧. ಉರಿಗಾಳಿ

## (Flame-Wind)

ಆಗೊ ಬಂಗಾರದ ಮೂಡಲದಿಂದ ಬೀಸಿತು ಉರಿಗಾಳಿ
ಏಳ್ಮಡಿ ಮಧ್ಯಾನ್ಹದ ಉಸಿರಿಂದ ನನ್ನಾತ್ಮಕೆ ದಾಳಿ.
ಯಕ್ಷರ ಪಕ್ಷವ ತಾಳಿ ಓಡುವೀ ಪಶು ನಾಗಾಲಾಗಿ
ಹೊತ್ತಿದೆ ಮಾನಸ, ಹೊತ್ತಿದೆ ದೇಹ, ಎದೆ ಮೂರ್ಛಿತವಾಗಿ

ಮಧ್ಯಾನ್ಹದ ಬಲಶಕ್ತಿಯು ತಂದೆ ಉರಿಯೋ ನಿರ್ಬಾಧಾ
ಎಲ್ಲಿದೆ ಬೆಳಗಿನ ತಲ್ಲೀನತೆ ಸಂಜೆಯ ಝುಳುಝುಳು ನಾದಾ
ಎಲ್ಲಿದೆ ಬೆಳುದಿಂಗಳ ತಿಳಿನೀಲಿಯ ಲೋಕಾತೀತ ಸುರೆ
ಏತಕೆ ಈ ಮೈ-ಮನದ ಪ್ರಫುಲ್ಲತೆ ಹೃದಯವೆ ನರಳುತಿರೆ ?

ಪ್ರಾಣದ ರಕ್ತಜ್ವಾಲೆಯು ಮತ್ತೀ ಮನಸಿನ ಬಂಗಾರ
ಸ್ವರ್ಗವು ಝುಗಝುಗ ಈ ಭೂ ಧಗಧಗ ಇದೆ ದೀಪ್ತಾಂಗಾರ
ಹೃದಯದ ಬಿಳಿದೋ ಆ ಗುಲಾಬಿಯೋ ಆಗಿರೆ ನಿಃಸತ್ತ್ವ
ಹೋಗೆಲೆ ಉರಿಯೇ ಮೌನದೊಳಿರುವೆ ಬರಲಿ ಪ್ರೇಮತತ್ತ್ವ.

* Collected Poems and Plays Vol ii, Page 364.

## ೨. ಸಮಾಪತ್ತಿ

## (Transformation)

ನನ್ನ ಉಸಿರು ಹರಿದಾಡುತಿಹುದು ಇಗೊ ಸೂಕ್ಷ್ಮ ಛಂದದಲ್ಲಿ;
ನನ್ನ ಅವಯುವದಿ ಬೆಳೆಯುತಿಹುದು ಭಗವಂತ ಶಕ್ತಿವಲ್ಲಿ :
ಆನಂತ್ಯವನ್ನು ನಾ ಕುಡಿದೆ ಎತ್ತಿಯಾ ಅಸುರ-ಸುರಾ-ಪಾತ್ರೆ
ಕಾಲಲೀಲೆಯದು ನನ್ನ ನಾಟಕವು ನನ್ನ ಸ್ವಪ್ನಯಾತ್ರೆ
ಈಗ ನನ್ನ ಜೀವಾಣುಗಣವು ಪ್ರಪ್ರಮೋದಾಗ್ನಿ ರಚಿತ
ರೋಮ ಹರ್ಷಕನುಕೂಲ ನಾಡಿ ನರಜಾಲ ಸೂಕ್ಷ್ಮಖಚಿತ
ಪುಲಕ ಪಾರದರ್ಶಿತ್ವ ಹರ್ಷವಾಹಿನಿಯೆ ಸ್ಫೂರ್ತಿಗಾಗಿ
ಆ ಅಗಮ್ಯದಾ ಪರಾಶಕ್ತಿಯಾ ಪ್ರಕೃತಿ ಪೂರ್ತಿಗಾಗಿ

ದೇಹದಾಸ ನಾನಲ್ಲವೆಂದಿಗೂ ಇನಿಸು ಇನ್ನು ಮೇಲೆ
ಪ್ರಕೃತಿ ಜೀತದಾಳಾಗಿ ದುಡಿಯೆ ನಾ ಬಿಟ್ಟೆ ಜಡದ ಶಾಲೆ
ಗಂಡು ಮೀರಿ ನಾ ನಿಂತೆ ಇನ್ನು ಇಂದ್ರಿಯದ ಇಂದ್ರಜಾಲ
ದ್ರಷ್ಟಾರ ದೃಷ್ಟಿ ಕ್ಷಿತಿಜವನು ಹರಿದು ಮಿತಿಮೀರಿದೊಲು ವಿಶಾಲ
ನನ್ನ ದೇಹ ಸುಖಭರಿತ ದೇವನಾ ಪ್ರಾಣಪೂರ್ಣಯಂತ್ರ
ಬೃಹದ್ಭಾನುವಿನ ಅಮರಜ್ಯೋತಿ ಚೇತನವು ಆತ್ಮತಂತ್ರ.

* Collected Poems and Plays Vol. ii. Page 297.

# ೩. ಸಮಾಧಿ

## ( Trance ) *

ರಜತ ರಶ್ಮಿ ಪ್ರಸ್ಫುರಿತ ಕಿರಣೆ ಯಾರಿವಳು ತಾರಕೆಯು ದಿಗಂಬರೇ
ದೃಷ್ಟಿ ಕ್ಷಿತಿಜದಲಿ ತೇಲಿ ಬಹಳು ಗುಡಿಗಟ್ಟಿಗೊಂಡ ಸೋಮಾನಸರೆ
ತಿಳಿ ನೀಲಿಯ ಬಾನಂಚಿನ ಕರೆಗೆ ಪ್ರಭಂಜನವೇ ಅಡಿಕಿಲವಾಗೆ
ಇಗೊ ಜಡಜಲಧಿಯು ಪಸರವ ಮುಸುಕಿದೆ ಶಮ ಮೂರ್ಛೆಯ ಹಾಗೆ

ಮನವೋ ಅಸ್ಮಿತೆಯನು ಮುಟ್ಟಿತ್ತಸ್ಪಂದ ಸಮಾಧಿಯಲಿ
ಹೃದಯ ಮೌನದಲಿ ಗುಪ್ತವಾಗಿ ಸಾನಂದ ಗರ್ಭವಾಗಿ
ವಿವಿಧೇಂದ್ರಿಯ ಪ್ರಸ್ಫುರಣ ನಾಟ್ಯದಾವರಣ ಹರಿದು ಹೋಗಿ
ಮೂಕ ವ್ಯೈಯೊಳಾವುದೊ ಒಲೆ ಹೊತ್ತಿತು ಝುಗ್ಗನೆ ಪ್ರಭೆಯಾಗಿ

ಸರ್ಗಸುಸಜ್ಜೇ ಓ ತಾರಗೆಯೇ ನಿರ್ಮಲೆ, ಸ್ವಚ್ಛಂದೇ
ಅಜ್ಞಾತಾನಂದಾಬ್ಧಿಯೊಳೆದ್ದಾ ಪರಿವೇಷಿತ ಚಂದ್ರೇ
ಪುರೋಭಾವಿಯಾದಾತ್ಮ ಪರಿಣತಿಯದಿದೊ ಝುಂಝೋಚ್ಛ್ವಾಸ
ಏಕಮೇವ ಅನಂತ ಸಾಗರದ ಆತ್ಮಲೀನವಾಸ.

* Collected Poems and Plays Vol. ii, Page 280.

## ೪. ಕಿಂಚಿತ್ ಶೇಷ

## ( The Little More ) [1]

ಇನ್ನೊಂದೆ ದಿನವು, ಹೋದೀತದೀಗ ಅರೆಸತ್ತ ಕಾರ್ಯ ಮುಗಿದು
ಹೌದೊಂದೆ ದಿನಕೆ ಅರಳೀತು ಮೊಗ್ಗೆ ಹುಟ್ಟೀತು ಪಕಳೆ ಬಗೆದು
ಇನ್ನಿಷ್ಟೆ ಹಾದಿ ದಾಟಿದರೆ ಬಂತು ಹೊಸ ಜಗದ ಗುರಿಯು ಪೂರ್ತಿ
ತೀಡಿದರೆ ಒಮ್ಮೆ ಮೂಡೀತು ನೋಡು ಭಗವತಿಯ ಪೂರ್ಣ ಮೂರ್ತಿ.

ಗುಡ್ಡಬೆಟ್ಟುಗಳ ಮೆಟ್ಟಿ ಮೀರಿ ಕೊನೆವರೆಗೆ ಬಂದೆನಿಂದು
ಆಗೊ ನೋಡು ಅಲ್ಲಿ ಹುಬ್ಬನ್ನು ಚಾಚಿ ಇದಿರಿಸುವದೇನೊ ಒಂದು
ಬ್ರಹ್ಮಾಂಡ ಬಂಡೆ ಇದ ಮೆಟ್ಟಿದವರು ಆಗಿಲ್ಲವೀಗು ಸ್ವಾಮಿ
ಇನ್ನೊಂದೆ ಹೆಜ್ಜೆ ಆ ಮುಂದೆ ಬಾನು ಬೆಳಕೆಲ್ಲ ದೇವಭೂಮಿ.

## ೫. ಪ್ರಯಾಣದ ಕೊನೆ

## ( Journey's End ) *

ದಿನವು ಮುಳುಗಿತು ಬೆಳೆದು ಚಾಚುತ ಇರಳು ಸಂಜೆಯ ಲಯದಲಿ
ಉದ್ದೊ ಉದ್ದಿನ ಹಾದಿ ಮುಗಿದಿದೆ ಸ್ವಲ್ಪ ಉಳಿದಿದೆ ಮಾರ್ಗವು
ಇನ್ನು ಒಣ ಒಣ ರಣದ ಭಣಭಣ, ಇನ್ನು ಮೌನಾಶ್ರಯದಲಿ
ಬಂತು ಕತ್ತಲು ಗೋಡೆ, ನಡೆ ನಡೆ, ಅದರ ಹಿಂದೆಡೆ ಸ್ವರ್ಗವು.

---

1 Poems Past and Present, Page 17
* Collected Poems and Plays Vol. ii, Page 366

## ೬. ಅಜ್ಞಾನ-ಮಗ್ನಾತ್ಮ

## (Soul in the Ignorance) [1]

ನಿದ್ದೆಯಲ್ಲಿ ಬಿದ್ದೇಕೆ ಆತ್ಮವೇ ಏಳು ಆಳದಿಂದ
ಏಳು ಏಳು ಜಗದಗ್ನಿಲಿಂಗವೇ ದೇವಕಿರಣದಂದ
ಎತ್ತು ನಿನ್ನ ಮನ ಎತ್ತು ಹೃದಯಧನ ಏರು ಯಶದ ತೆಂಗು
ತಿಮಿರ–ಗರ್ಭದರ್ಭಕನೆ ಸೂರ್ಯನೇ 'ತತ್ತ್ವಮಸಿ'ಯ ಸುಂಗು
ಏಕ ವಿಶ್ವ, ಸರ್ವಾತ್ಮಸೃಷ್ಟಿಯೇ ಏಳು ಯೋಗದಿಂದ
ಜಡಪ್ರಕೃತಿಯಲಿ ಏಕೆ ತಿರುಗುತಿಹೆ ಮೂಕಚಕ್ರದಂದ
ದೇವಜನಿತ ನೀನೆನಿಸಿ ಏಳು ತಿಳಿ ನೀನು ಮರಣರಹಿತ
ಕಾಲ ಮೀರಿ ನೀ ಮರಳು ನಿನಗಹುದು ಅಮರ-ಪಟ್ಟ ವಿಹಿತ.

## ೭. ಮಹಾಲಕ್ಷ್ಮಿ

## (Mahalakshmi) *

ಕಮಲವನ ಸಂಚಾರಿಣಿಯೆ ಮಹಾಲಕ್ಷ್ಮಿ ಬೇಕೇ ಆಸನ
ಅರುಣಚರಣೇ ಮಾಡು ನನ್ನೀ ಹೃದಯವನೆ ಸಿಂಹಾಸನ
ವಿಶ್ವಸುಂದರಿ ನಿಖಿಲಜಗದಾನಂದಕರಿ ಹೇ ಯೋಗಿನೀ
ವಿರಸ ಹೃದಯತ್ಯಾಗಿ ನೀರಸ ಭಕ್ತಿ ಬಂಧನ ಭೋಗಿನೀ
ಪಾಪದೂರೇ ಮಾಡು ನನ್ನನು ನಿನ್ನನುಗ್ರಹದಾಗರಾ
ಮಧುರ ಕೌಶಲ ಮಾಯೆಯಲಿ ಮಾಡೆನ್ನ ಪ್ರೇಮದ ಸಾಗರಾ.

---

1 Collected Poems and Plays Vol. ii, Page 367

* Collected Poems and Plays Vol. ii, Page 311

# ೮. ಪ್ರಾಣಾಂಗನೆ

## (Life) *

ಆನಂದ ತನುಜೆ, ಅನುಭೂತಿಯನುಜೆ, ಅದ್ಭುತಸವಾಡದಂತೆ
ಓ ಜಾತಿವಂತೆ ನನ್ನಿದಿರು ಧ್ಯಾನದಲಿ ಮಗ್ನಳಾಗಿ ನಿಂತೆ
ದಿಗ್ದಂತಿದಂತ ಚಾಚಿರುವನಂತದಾಚೆಯಲಿ ನಿನ್ನ ಚೂಚು
ಏನು ಹಾರಿಕೆಯು ದೌಡು ಇಡುವೆ ಆ ಚಿರಂತನದ ಕೂಚು.

ಗಗನ ಶಿಖರಕೇರುತ್ತ ನಡೆದೆ ಹೇ ಗಗನ ದೇಹ ಪಡೆದೆ
ಖೇದ ಮೋದಗಳನೆರಡು ತೋಳಿನಲಿ ತೂಗಿ ತೂಗಿ ಹಿಡಿದೆ
ಇಗೊ ಇತ್ತ ಮೃತ್ಯು ಅಗೊ ಅತ್ತ ಅಮೃತ ಎರಡಕ್ಕು ನಡುವೆ ಇರುವೆ
ನೋವು ಸಾವುಗಳ ಕವಳ ಮಾಡ ಹಿಗ್ಗಿಗ್ಗಿ ಬಾಯಿದೆರೆವೆ.

ಘನನಿಬಿಡವಾಗಿ ಆಲಿಂಗಿಸೆನ್ನ ತುಸು ಕೂಡ ತೆರವು ಬೇಡ
ಬಾನಗಲ ನಿನ್ನ ಎದೆ ಹರವುಗೊಳಿಸಿ ಹೃದಯವನೆ ತುತ್ತುಮಾಡ
ಓ ಭೀಮಕಾಯ ನಿರ್ವಾಯ ಮುಖವೆ ಹಿಂಜರಿವುದೇಕೆ ಇನ್ನು ?
ಮೂರ್ಛೆಮುಸುಕು ತೆರೆದೆರಗಿ ಬಾರ ಕ್ರೀಡೆಯಲಿ ಇದುವೆ ಚೆನ್ನು.

ತೊಟ್ಟು ಕೂಡ ಬಿಡದಂತೆ ಸವರಿ ಹಿಗ್ಗನ್ನು ಹುಡುಕಿ ಕುಡಿವೆ
ಕಚ್ಚು ಚುಚ್ಚು ಎದೆ ಹೊಚ್ಚು ಬಿಚ್ಚು ಮೆಚ್ಚಿದ್ದ ಮಾಡಿ ಬಿಡುವೆ
ನರಸಿಂಹನಂತೆ ಬಸಿರನ್ನೆ ಹೊಕ್ಕು ಕರುಳಗಳ ಮಾಲೆ ಸೂಡಿ
ಮಧುಮಾಸ ಮತ್ತ ಮಧುಕರನ ಹಾಗೆ ರಸ ಸರಸ ವಿರಸಮಾಡಿ.

ಏನು ತಾನು ಮಾಡಿದರು ನಾನು ದಾನವನ ಹಾಗೆ ಹೀರಿ
ಅಭಿಮಾನಿ ದೈವ ಬರುವೊಲು ಸದ್ದೈವ ಆನಂದ ಮೇರೆ ಮೀರಿ
ಮಾನವನ ವೈರಿಯೆ ಯಾತಕ್ಕು ಸೈಯೆ, ನಾನಿರುವೆ ಪ್ರೇಮದಂತೆ
ಶಿವ-ರತಿಯ ತಕ್ಕೆಯಲಿ ನಲಿವ ಉಲಿವ ಚಿರಬಾಲ ಕಾಮನಂತೆ.

ನಾ ಬೇಡಲೇನು ನೀ ಕೊಡುವದೇನು ವ್ಯಾಪಾರ ಸಾಕು ಬಲ್ಲೆ
ಆ ದೈವದತ್ತ ಈ ನೊಗದ ಮುತ್ತ ಸುತ್ತುತ್ತಲಿರುವೆ ಇಲ್ಲೆ
ಅರಸಾದರೇನು ಆಳಾದರೇನು ಆನಂದ ಭೋಗದಲ್ಲಿ
ಬಾಳಾದರೇನು ಹಾಳಾದರೇನು ಈ ಪೂರ್ಣಯೋಗದಲ್ಲಿ.

ಅಧಃಪಾತದಲಿ ನೆರೆದು ಬರುವೆ ಗಂಗಾವತಾರದಂತೆ
ಜೀರ್ಣವಸ್ತ್ರದಲಿ ಮಿಂಚಿ ತೆರೆವೆ ಸುರ ಸುಮನ ಹಾರದಂತೆ
ಮೂರ್ತ ಮೃತ್ಯುಮುಖರಂಗದಲ್ಲಿ ನರ್ತಿಸುವೆ ಅಮರನಂತೆ
ತೊತ್ತುಳಿದರೂನು ಥಥ್ಥಳಿಸಿ ಹೊಳೆವೆ ಸಂಜೀವ ಭ್ರಮರನಂತೆ.

—**ದ. ರಾ. ಬೇಂದ್ರೆ** ( ಅನುವಾದಕರು )

* Poems Past and Present, Page 15

# ಈಶೋಪನಿಷತ್ತು (ಭಾಗ ೨)

## ಈ ಉಪನಿಷತ್ತಿನ ಯೋಜನೆ

ಉಪನಿಷತ್ತುಗಳೆಲ್ಲ ಉದ್ದೀಪನೆಯ ವಾಹಕಗಳು, ಬೋಧನೆಯ ಸಾಧನಗಳಲ್ಲ. ವೈದಿಕಋಷಿಗಳ ವಿಚಾರಗಳನ್ನು ಮುಂಚಿತವಾಗಿ ಅರಿತುಕೊಂಡು ಅವುಗಳಿಗೆ ಆಧಾರವಾದ ಸತ್ಯಗಳನ್ನು ಸ್ವಂತ ಅನುಭವದಲ್ಲಿ ಕೆಲಮಟ್ಟಿಗೆ ಕಂಡಿರುವ ಸಾಧಕರಿಗಾಗಿ ಅವು ಹುಟ್ಟಿದವು. ಅಂತೇ ಅವು ತಮ್ಮ ಶೈಲಿಯಲ್ಲಿ, ಅಭಿವ್ಯಕ್ತವಾದ ವಿಚಾರ ಸಂಕ್ರಮಣಗಳನ್ನೂ ಸೂಚ್ಯ ಇಲ್ಲವೆ ಗೌಣವಾದ ಕಲ್ಪನೆಗಳ ಬೆಳವಣಿಗೆಯನ್ನೂ ಬಿಟ್ಟುಕೊಡುತ್ತವೆ. ಈಶೋಪನಿಷತ್ತಿನಲ್ಲಿಯ ಪ್ರತಿಯೊಂದು ಶ್ಲೋಕವು ಅನೇಕ ವಿಚಾರಗಳನ್ನು ಅವಲಂಬಿಸಿರುತ್ತದೆ. ಅವು ಆದರಲ್ಲಿ ಸೂಚಿತವಾಗಿರುತ್ತವೆ, ಆದರೆ ಎಲ್ಲಿಯೂ ಸ್ಪಷ್ಟವಾಗಿ ನಿರೂಪಿತವಾಗಿರುವದಿಲ್ಲ. ಆದರಲ್ಲಿಯ ಸಿದ್ಧಾಂತಗಳಿಗೆ ಪುಷ್ಟಿಯನ್ನು ಕೊಡುವ ಯುಕ್ತಿವಾದವು ಶಬ್ದಗಳಿಂದ ಸೂಚಿತವಾಗುತ್ತದೆ, ಆದರೆ ಬುದ್ಧಿಗೆ ಸುವ್ಯಕ್ತವಾಗುವಂತೆ ತಿಳಿಸಲಾಗುವದಿಲ್ಲ. ಅದರ ಓದುಗನು ಇಲ್ಲವೆ ಕೇಳುಗನು ಅದರ ವಿಚಾರಗಳನ್ನು ತರ್ಕಬುದ್ಧಿಯ ನಿರ್ಣಯಕ್ಕೆ ಒಪ್ಪಿಸದೆ, ತನ್ನ ಒಳತಿಳಿವುಗಳನ್ನು ಗಟ್ಟಿಮಾಡಿಕೊಳ್ಳುತ್ತ, ತನ್ನ ಅನುಭವದಿಂದ ಒರೆಗೆ ಹಚ್ಚುತ್ತ, ಬೆಳಕಿನಿಂದ ಬೆಳಕಿನೆಡೆಗೆ ಸಾಗಬೇಕೆಂದು ಉಪನಿಷತ್ಕಾರರ ಗ್ರಹಿಕೆಯಿತ್ತು. ಹೊಸ ಕಾಲದ ಮನಸ್ಸಿಗೆ ಈ ಪದ್ಧತಿ ಅಕ್ರಮ ಹಾಗೂ ಅಪ್ರಯೋಜಕವಾಗಿ ತೋರುತ್ತದೆ. ಅದಕ್ಕಾಗಿ ಉಪನಿಷತ್ತಿನ ವಿಚಾರಗಳನ್ನು ಇಡಿಯಾಗಿ ಮಂಡಿಸುವುದು ಅವಶ್ಯವಾಗಿದೆ. ಹೀಗೆ ಮಾಡುವಾಗ ಆದರಲ್ಲಿಯ ಸೂಚನೆಗಳನ್ನು ಒತ್ತಿಹೇಳಬೇಕು, ಅವಶ್ಯವಾಗಿದ್ದ ಸಂಕ್ರಮಣಗಳನ್ನು ಪೂರೈಸಬೇಕು, ಅಡಗಿದ, ಆದರೆ ಯಾವಾಗಲೂ ಒಳಗಿರುವ, ಯುಕ್ತಿವಾದವನ್ನು ನಿಚ್ಚಳಗೊಳಿಸಬೇಕು.

ಈ ಉಪನಿಷತ್ತಿನ ಕೇಂದ್ರವಿಚಾರವೆಂದರೆ ಮೂಲಭೂತವಾದ ವಿರೋಧಗಳ ಹೊಂದಿಸುವಿಕೆ ಮತ್ತು ಸಾಮರಸ್ಯ ಸಾಧನೆ. ಈ ವಿಚಾರಗಳನ್ನು ಒಂದರಮೇಲೊಂದಾದ ನಾಲ್ಕು ವಿಚಾರ-ಚಲನಗಳಲ್ಲಿ ಕ್ರಮದಿಂದ ಬಿತ್ತರಿಸಲಾಗಿದೆ.

## ಮೊದಲನೆಯ ಚಲನ

ಮೊದಲನೆಯ ಚಲನದಲ್ಲಿ, ವಿಶ್ವಗತಿಯನ್ನು ಮತ್ತು ಚಲನದ ರೂಪಗಳನ್ನು ತನ್ನ ನಿವಾಸವಾಗಿ ಮಾಡಿಕೊಂಡು ಆಳುತ್ತಿರುವ ಏಕಮೇವ ಸ್ಥಿರ ಚೈತನ್ಯದ ಕಲ್ಪನೆಯಿಂದ ಒಂದು ತಳಹದಿಯನ್ನು ಹಾಕಲಾಗುತ್ತದೆ. (ಪದ್ಯ ೧, ಪಂಕ್ತಿ ೧)

ಮನುಷ್ಯನ ದಿವ್ಯ ಜೀವನದ ನಿಯಮವು ಈ ಕಲ್ಪನೆಯ ಮೇಲೆ ನಿಂತಿದೆ, ಕಾಮನೆಯನ್ನು ಹೊರತುಪಡಿಸಿ ಸರ್ವಸ್ವವನ್ನು ತ್ಯಾಗಮಾಡಿ ಎಲ್ಲದರ ಭೋಗವನ್ನು ಪಡೆಯುವುದು ಈ ಕಲ್ಪನೆಯ ಮಥಿತಾರ್ಥ. (ಪದ್ಯ ೧, ಪಂಕ್ತಿ ೨)

ಆ ಮೇಲೆ ಕರ್ಮಗಳ ಮತ್ತು ಭೌತಿಕ ಜೀವನದ ಸಮರ್ಥನೆ ಬರುತ್ತದೆ. ಈ ಸಮರ್ಥನೆಗೆ ಕಾರಣವೆಂದರೆ ವಿವಿಧವಾದ ಚಲನದ ಮಧ್ಯದಲ್ಲಿ, ಈಶನೊಡನೆ ಒಂದಾಗಿ ಕರ್ಮನಿರತನಾಗುವ ಆತ್ಮನ ಸಂಪೂರ್ಣ ಸ್ವಾತಂತ್ರ್ಯ. (ಪದ್ಯ ೨)

ಕೊನೆಗೆ, ವಿವಿಧತೆಯಲ್ಲಿ ಆಗುವ ಏಕತ್ವದ ಯೋಗ್ಯ ಆವಿಷ್ಕಾರದಲ್ಲಿ ಅಜ್ಞಾನದಿಂದ ಹಸ್ತಕ್ಷೇಪ ಮಾಡುವುದರ ಪರಿಣಾಮವೆಂದರೆ ಮೃತ್ಯುವಿನ ಅನಂತರದ ಅಂಧಂತಮಸ್ಸಿನ ಅವಸ್ಥೆಗಳಲ್ಲಿ ನಿವರ್ತನ (Involution) ಹೊಂದಿದಂತೆ ಎಂದು ಸಾರಲಾಗಿದೆ.

## ಎರಡನೆಯ ಚಲನ

ಎರಡನೆಯ ಚಲನದಲ್ಲಿ ಮೊದಲನೆಯ ಪದ್ಯದ ವಿಚಾರಗಳನ್ನು ಮತ್ತೆ ಎತ್ತಿ ವಿಸ್ತರಿಸಲಾಗಿದೆ. ಏಕಮೇವ ಆದ ಈಶನೂ ವಿವಿಧ ಚಲನವೂ ಒಂದೇ ಬ್ರಹ್ಮನೆಂದು ತೋರಿಸಲಾಗಿದೆ. ಆದರೆ ಏಕತೆ ಮತ್ತು ಸ್ಥಿರತೆ ಇವೆರಡೂ ಈ ಬ್ರಹ್ಮನ ವಿಷಯವಾದ ಮಿಗಿಲಾದ ಸತ್ಯ. ಇವನೇ ಎಲ್ಲವನ್ನು ಒಳಗೊಂಡಿದ್ದು ಅಂತರ್ಯಾಮಿಯಾಗಿದ್ದಾನೆ. (ಪದ್ಯ ೪, ೫)

ಏಕತೆಯ ಅನುಭವದಲ್ಲಿ ಜೀವನ-ನಿಯಮದ ತಳಹದಿಯಿದೆ, ಪೂರ್ತತೆಯಿದೆ. ಈ ಅನುಭವ ದಿಂದ ಮನುಷ್ಯನು ವಿಶ್ವರೂಪ ಮತ್ತು ವಿಶ್ವಾತೀತ ಆತ್ಮನಲ್ಲಿ ಒಂದಾಗುತ್ತಾನೆ; ಆದರೆ ದುಃಖ-ಮಾಯೆ ಗಳಿಂದಲೂ ಅದರ ಎಲ್ಲ ಆಗುವಿಕೆಗಳಿಂದಲೂ ಸಂಪೂರ್ಣ ಮುಕ್ತನಾಗುತ್ತಾನೆ. ( ಪದ್ಯ ೬, ೭ )

## ಮೂರನೆಯ ಚಲನ

ಮೂರನೆಯ ಚಲನದಲ್ಲಿ ಜೀವನ ಮತ್ತು ಕರ್ಮ ( ೨ನೆಯ ಪದ್ಯದ ವಿಷಯ ) ಇದರ ಸಮರ್ಥನೆ ಯನ್ನು ಮತ್ತೆ ಎತ್ತಲಾಗಿದೆ. ಹಾಗೂ ಅವುಗಳ ದಿವ್ಯಸಿದ್ಧಿಯ ಸೂಚನೆಯನ್ನು ಮಾಡಲಾಗಿದೆ.

ಈ ಗತಿಪರ ವಿಶ್ವದಲ್ಲಿ ಮತ್ತು ಏಕಾತ್ಮದ ಆಗುವಿಕೆಗಳಲ್ಲಿ ಈಶನ ಆತ್ಮಾವಿಷ್ಕಾರದ ಅಂಶಗಳೆಂತು ಎಂಬುದನ್ನು ನಿರೂಪಿಸಲಾಗಿದೆ. ಎಲ್ಲ ಇರುವಿಕೆಗಳ ಒಳಗಿನ ಧರ್ಮವು ( Inner Law ) ಆತನ ಮೂಲ ಕಲ್ಪನೆ ಮತ್ತು ನಿರ್ಧಾರದಿಂದ ಎಂದು ಸಾರಲಾಗಿದೆ. ( ಪದ್ಯ ೮ )

ವಿದ್ಯೆ–ಅವಿದ್ಯೆ, ಸಂಭೂತಿ–ವಿನಾಶ, ಇವು ಪ್ರಗತಿಪರವಾದ ಆತ್ಮಸಾಕ್ಷಾತ್ಕಾರಕ್ಕೆ ಅನ್ಯೋನ್ಯ ವಾಗಿ ಎಷ್ಟು ಉಪಯುಕ್ತ ಎಂಬುದರಿಂದ ಒಂದಕ್ಕೊಂದನ್ನು ಹೊಂದಿಸಲಾಗಿದೆ. ಮರ್ತ್ಯತ್ವದ ಅವಸ್ಥೆ ಯಿಂದ ಅಮೃತತ್ವದ ಅವಸ್ಥೆಗೆ ಸಾಗುವುದೇ ಆ ಸಾಕ್ಷಾತ್ಕಾರ. ( ಪದ್ಯ ೯, ೧೪ )

# ನಾಲ್ಕನೆಯ ಚಲನ

ನಾಲ್ಕನೆಯ ಚಲನವು ಲೋಕಗಳ ಕಲ್ಪನೆಗೆ ಮರಳಿ ಬರುತ್ತದೆ. ಸೂರ್ಯ, ಅಗ್ನಿ ಈ ರೂಪಕಗಳ ಮೂಲಕ ಪರಾತ್ಪರ ಸತ್ಯ ಮತ್ತು ಅಮೃತತ್ವ ( ಪದ್ಯ ೧೫, ೧೬ ), ಈ ಲೋಕದಲ್ಲಿಯ ಚಟುವಟಿಕೆಗಳು ( ಪದ್ಯ ೧೭ ), ಮೃತ್ಯುವಿನ ತರುವಾಯದ ಅವಸ್ಥೆ ( ಪದ್ಯ ೧೮ ) ಇವನ್ನು ಸೂಚಿಸಲಾಗಿದೆ.

ಮೊದಲನೆಯ ಚಲನ

## ಅಂತರ್ಯಾಮಿಯಾದ ಈಶ, ಜೀವನ ಮತ್ತು ಕರ್ಮ

### ವಿಶ್ವಜೀವನದ ತಳಹದಿ

(ಪದ್ಯ ೧–೩) *

ದೇವರು ಮತ್ತು ಜಗತ್ತು, ಆತ್ಮ ಮತ್ತು ರೂಪಧಾರಿಯಾದ ಪ್ರಕೃತಿ ಇವುಗಳನ್ನು ಪ್ರಸ್ತಾಪಿಸಿ ಇವುಗಳ ಸಂಬಂಧವನ್ನು ನಿಶ್ಚಯಿಸಲಾಗಿದೆ.

**ವಿಶ್ವ**

ಜಗತ್ತೆಲ್ಲವೂ ತನ್ನಲ್ಲಿಯೆ ಆತ್ಮನ ಚಲನವಾಗಿದೆ, ತನ್ನೆಲ್ಲ ರಚನೆಗಳಲ್ಲಿಯೂ ದೃಶ್ಯರೂಪಗಳಲ್ಲಿಯೂ ವಿಕಾರಕ್ಷಮವೂ ಕ್ಷಣಿಕವೂ ಆಗಿದೆ. ಅದರ ನಿತ್ಯತೆಯೆಲ್ಲ ಪುನರಾವೃತ್ತಿಯ ನಿತ್ಯತೆ. ಅದರ ಸ್ಥಿರತೆಯೆಲ್ಲ ಕೆಲವು ಮೇಲೆ ಕಾಣುವ ಸಂಬಂಧ ನಿಶ್ಚಿತಿ ಮತ್ತು ವರ್ಗೀಕರಣಗಳಿಂದ ಉಂಟಾದ ಆಭಾಸ ಮಾತ್ರ.

ವಿಶ್ವದಲ್ಲಿಯ ಪ್ರತ್ಯೇಕ ವಸ್ತುವೆಂದರೆ ನಿಜವಾಗಿ ತಾನೇ ಇಡೀ ವಿಶ್ವವಾಗಿದ್ದು ಅದರ ಯಾವೊಂದು ಮುಖವನ್ನು ಇಲ್ಲವೆ ಅದರ ಚಲನದ ಬಾಹ್ಯರೂಪವನ್ನು ತೋರಿಸುವಂಥದಾಗಿರುತ್ತದೆ. ಪಿಂಡವು ಬ್ರಹ್ಮಾಂಡದಲ್ಲಿ, ಅಣುವು ಮಹತ್ತಿನಲ್ಲಿ ಒಂದಾಗಿರುತ್ತದೆ.

ಆದರೂ ಚಲನದ ಮೂಲತತ್ತ್ವ ಮತ್ತು ಪರಿಣಾಮ ಎಂಬ ಸಂಬಂಧದಲ್ಲಿ ಅಣುಮಹತ್ತುಗಳು ಆಧಾರ-ಆಧೇಯವಾಗಿವೆ, ಜಗತ್ತಿನೊಳಗಿನ ಜಗತ್ತು–ಚಲನದೊಳಗಿನ ಚಲನವಾಗಿವೆ. ಆದ್ದರಿಂದ ವ್ಯಕ್ತಿ ವಿಶ್ವದ ಸ್ವಭಾವದಲ್ಲಿ ಭಾಗಿಯಾಗಿ, ತನ್ನ ಚಲನವಲನದ ಮೂಲವೆಂದು ವಿಶ್ವಕ್ಕೆ ಮೊರೆಹೊಗುತ್ತಾನೆ, ಅಂದರೆ ವಿಶ್ವದ ನಿಯಮಗಳಿಗೆ ಒಳಪಟ್ಟು ವಿಶ್ವಪ್ರಕೃತಿಯ ಒಂದು ಭಾಗವಾಗಿರುತ್ತಾನೆ.

* ೧ ಇದೆಲ್ಲವೂ ಈಶ್ವರನ ಆವಾಸಕ್ಕಾಗಿ ಇದೆ, ವಿಶ್ವಗತಿಯಲ್ಲಿ ವ್ಯಕ್ತಿಯ ಸಮಷ್ಟಿಚಲನ ಎಂಬುದೆಲ್ಲವೂ. ಅದರಿಂದ ತ್ಯಕ್ತವಾದುದನ್ನು ನೀನು ಭುಂಜಿಸು, ಯಾರ ಸೊತ್ತಿಗಾಗಿಯೂ ಹಂಬಲಿಸಬೇಡ.

೨ ದಿಟವಾಗಿ ಈ ಲೋಕದಲ್ಲಿ ಕರ್ಮಗಳನ್ನು ಮಾಡುತ್ತಲೇ ನೂರು ವರ್ಷ ಬಾಳಲು ಬಯಸಬೇಕು. ಹೀಗೆ ನಿನ್ನಲ್ಲಿ ಇರುವುದು, ಇದರಿಂದ ಬೇರೆಯಾಗಿ ಅಲ್ಲ. ಕರ್ಮವು ಮನುಷ್ಯನಿಗೆ ಲೇಪಿಸುವುದಿಲ್ಲ.

೩ ತಮ್ಮ ಆತ್ಮಗಳನ್ನು ಕೊಂದುಕೊಳ್ಳುವವರೆಲ್ಲ ಇಲ್ಲಿಂದ ಹೊರಟ ಮೇಲೆ ಸೂರ್ಯರಹಿತವಾದ ಹಾಗೂ ಗಾಢವಾದ ಅಂಧಕಾರದಿಂದ ಮುಚ್ಚಿದ ಲೋಕಗಳನ್ನು ಹೊಂದುತ್ತಾರೆ.

**ಆತ್ಮ**

ಆತ್ಮನು ವಿಶ್ವದ ಗತಿಯು ಈಶನು, ಅವನೊಬ್ಬನೇ ಇರುವನು—ಅವಿಕಾರಿ, ಸ್ವತಂತ್ರ, ಸ್ಥಿರ ಹಾಗೂ ನಿತ್ಯನಾಗಿ.

ಆತ್ಮನ ಆವಾಸಕ್ಕಾಗಿ ತನ್ನೆಲ್ಲ ರಚಿತ ವಸ್ತುಗಳೊಡನೆ ಚಲನವೆಂಬುದು ನಿರ್ಮಿತವಾಗಿದೆ. ಈ ಆತ್ಮನು ಒಬ್ಬನೇ ಆಗಿದ್ದು ತನ್ನ ಅರಮನೆಗಳ ತರತರದಲ್ಲಿ ಅನೇಕವಾಗಿ ಇರುತ್ತಾನೆ.

ಅದೇ ಈಶನು ಇಡಿ ಮತ್ತು ಬಿಡಿಯಲ್ಲಿ, ಸಮಗ್ರವಿಶ್ವ ಮತ್ತು ವಿಶ್ವದಲ್ಲಿಯ ಪ್ರತಿಯೊಂದು ಪ್ರಾಣಿ, ಶಕ್ತಿ ಮತ್ತು ವಸ್ತುವಿನಲ್ಲಿ ಇರುತ್ತಾನೆ.

ಅವನು ಒಬ್ಬನೇ ಆಗಿದ್ದು ಒಡೆಯುಬಾರದಾತನಾದ್ದರಿಂದ, ಎಲ್ಲದರಲ್ಲಿಯು ಆತ್ಮ ಒಂದೇ ಆಗಿದೆ. ಅವುಗಳ ಅನೇಕತೆ ಅವನ ವಿಶ್ವಪ್ರಜ್ಞೆಯ ಲೀಲೆಯಾಗಿದೆ.

ಆದ್ದರಿಂದ ಪ್ರತಿಯೊಂದು ಮನುಷ್ಯಪ್ರಾಣಿ ತನ್ನ ಮೂಲಸ್ವರೂಪದಲ್ಲಿ ಸ್ವತಂತ್ರ, ನಿತ್ಯ, ಅವಿಕಾರಿಯಾದ ಪ್ರಕೃತಿಯ ಪ್ರಭುವಾಗಿ ಉಳಿದೆಲ್ಲರೊಡನೆ ಒಂದಾಗಿರುತ್ತಾನೆ.

**ಸಂಕ್ರಮಣಶೀಲವಾದ ವಿಚಾರ**

ಅವಿದ್ಯೆ : ಆವಾಸದ ಉದ್ದೇಶವೆಂದರೆ ಭೋಗ ಮತ್ತು ಸ್ವಾಮ್ಯ; ವಿಶ್ವದಲ್ಲಿ ಆತ್ಮನ ಉದ್ದೇಶ ವಾದರೂ ವಿಶ್ವದ ಸ್ವಾಮ್ಯ ಮತ್ತು ಭೋಗವೇ ಆಗಿದೆ. ಹೀಗಿದ್ದರೂ ಮೂಲಸ್ವರೂಪದಲ್ಲಿ ಏಕ, ದಿವ್ಯ ಮತ್ತು ಸ್ವತಂತ್ರನಾದ ಮನುಷ್ಯನು ಮರ್ಯಾದಿತ, ಇತರರಿಂದ ಭಿನ್ನ, ಪ್ರಕೃತಿಗೆ ಅಧೀನ – ಅದರ ನಿರ್ಮಾಣ, ಲೀಲೆಗಳಿಗೆ ಸಹ – ಮರಣ, ದುಃಖ, ಅಜ್ಞಾನಗಳಿಗೆ ಜೀತದಾಳಾಗಿ ತೋರುತ್ತಾನೆ.

ತನ್ನ ಈ ಜಗತ್ತನ್ನು ಸ್ವಾಮ್ಯದಿಂದ ತನ್ನದಾಗಿ ಮಾಡಿಕೊಂಡು ಭೋಗಿಸಬೇಕೆಂದು ಆತ್ಮನ ಉದ್ದೇಶವಿದ್ದರೂ ಅವನಿಗುಂಟಾದ ಮಿತಿಮರ್ಯಾದೆಯಿಂದ ಅವನು ಭೋಗಿಸಲು ಅಸಮರ್ಥನಾಗುತ್ತಾನೆ. ಈ ವಿರುದ್ಧಪರಿಣಾಮವು ಅವಿದ್ಯೆಯಿಂದ ಉಂಟಾಗುತ್ತದೆ. ಅವಿದ್ಯೆಯೆಂದರೆ ಏಕತ್ವದ ಅಜ್ಞಾನ : ಮತ್ತು ಅಜ್ಞಾನದ ಗ್ರಂಥಿಯೆಂದರೆ ಅಹಂಭಾವ.

**ಅಹಂ**

ಅಹಂ ಇವರ ಕಾರಣವಿದು : ಆತ್ಮನು ಅನೇಕತೆ ಮತ್ತು ಸಾಪೇಕ್ಷತೆಯ ಅರಿವಿನಲ್ಲಿಯೂ ಏಕತೆ ಮತ್ತು ತಾದಾತ್ಮ್ಯದ ಅರಿವಿನಲ್ಲಿಯೂ ಒಂದೇ ಹೊತ್ತಿಗೆ ತನ್ನ ವಿದ್ಯೆ-ಅವಿದ್ಯೆಗಳ ಜೋಡುಬಲದಿಂದ ಇರುವನಾದ್ದರಿಂದ ಅಜ್ಞಾನದಿಂದ ಬದ್ಧನಾಗಿರುವದಿಲ್ಲ, ಆದರೂ ಮನೋಮಯದ ಹಿಂದೆ ಮರೆಯಾಗಿ ನಿಲ್ಲುವ ಜ್ಞಾನವನ್ನು ಕಾಣಲಿಕ್ಕಾದರೂ ಬಹಿಷ್ಕರಿಸಿ ಮನೋಭೂಮಿಕೆಯ ಮೇಲೆ ಚಲನದಲ್ಲಿಯ ವಸ್ತುವಿನೊಡನೆ ತಲ್ಲೀನನಾಗುವಂತೆ ಅವನು ಒಂದಾಗಬಲ್ಲನು. ಹೀಗಾಗಿ ಪ್ರಕೃತಿಯಲ್ಲಿ ಮನಸ್ಸಿನ ಚಲನವು ವಸ್ತುವನ್ನೇ ಸತ್ಯವೆಂದೂ ಅಂತರ್ಯಾಮಿಯಾದ ಆತ್ಮನನ್ನು ವಸ್ತುವಿನ ದೃಶ್ಯರೂಪಗಳಿಂದ ನಿಶ್ಚಿತವೂ ಮರ್ಯಾದಿತವೂ ಎಂದೂ ಬಗೆಯುಬಲ್ಲುದಾಗುತ್ತದೆ. ವಸ್ತುವನ್ನು ಅದು ವಿಶ್ವದ ಅಭಿವ್ಯಕ್ತಿಯ ಒಂದು ಸಂಮುಖವೆಂದು

ಬಗೆಯದೆ ಉಳಿದೆಲ್ಲದರಿಂದ ಬೇರೆಯಾಗಿ ವಿಶ್ವದಿಂದ ಸಿಡಿದು ನಿಂತ ಪ್ರತ್ಯೇಕ ಅಸ್ತಿತ್ವವೆಂದು ಬಗೆಯುತ್ತದೆ. ಅಂತರ್ಯಾಮಿ ಆತ್ಮನನ್ನೂ ಅದು ಹಾಗೆ ತಿಳಿಯುತ್ತದೆ. ಎಲ್ಲ ಸತ್ಯತೆಗಳನ್ನು ಸುಳ್ಳುಗೊಳಿಸುವ ಅಜ್ಞಾನದ ಭ್ರಮೆಯೆಂದರೆ ಇದೇ. ಈ ಭ್ರಮೆಗೆ ಅಹಂಕಾರವೆನ್ನುತ್ತಾರೆ. ಇದು ಪ್ರತಿಯೊಂದು ಸತ್ತೆ ತಾನೊಂದು ಸ್ವತಂತ್ರ ವ್ಯಕ್ತಿತ್ವವೆಂದು ಬಗೆಯುವಂತೆ ಮಾಡುವ ಪ್ರತ್ಯೇಕತೆಯುಳ್ಳ ಅಹಂಭಾವವೇ ಆಗಿದೆ.

ಈ ಪ್ರತ್ಯೇಕತೆಯ ಪರಿಣಾಮವೆಂದರೆ ವಿಶ್ವದೊಡನೆ ಐಕ್ಯವನ್ನೂ ಸಾಮರಸ್ಯವನ್ನೂ ಹೊಂದಲು ವ್ಯಕ್ತಿ ಅಸಮರ್ಥನಾಗುತ್ತಾನೆ, ತತ್ಪರಿಣಾಮವಾಗಿ ವಿಶ್ವವನ್ನು ತನ್ನದಾಗಿ ಮಾಡಿಕೊಂಡು ಭೋಗಿಸಲೂ ಅಸಮರ್ಥನಾಗುತ್ತಾನೆ. ಆದರೆ ಅಸ್ಪಷ್ಟವಾಗಿ ತಾನೇ ಈಶನೆಂದು ತಿಳಿದ ಅಹಂ-ತೆಯಲ್ಲಿ ಸ್ವಾಮ್ಯ ಮತ್ತು ಭೋಗದ ಅಪೇಕ್ಷೆ ಪ್ರಬಲ ಪ್ರೇರಣೆಯಾಗಿರುತ್ತದೆ. ಇಷ್ಟೇ, ತನ್ನ ಸಾಪೇಕ್ಷತೆ ಹಾಕಿದ ಮರ್ಯಾದೆಗಳ ಮೂಲಕ, ಅದು ತನ್ನ ನಿಜವಾದ ಅಸ್ತಿತ್ವವನ್ನು ಅರಿಯಲಾರದು. ಇದರ ಪರಿಣಾಮವಾಗಿ ವ್ಯಕ್ತಿ ಬೇರೆಯವರ ಕೂಡ ಹಾಗೂ ತನ್ನೊಳಗೆ ವಿರಸ ಹೊಂದುತ್ತಾನೆ. ಮಾನಸಿಕ, ಶಾರೀರಕ ವ್ಯಥೆಯಾಗುತ್ತದೆ. ದೌರ್ಬಲ್ಯದ, ಅಸಮರ್ಥತೆಯ ಭಾವ ಹೆಚ್ಚುತ್ತದೆ. ಅರಿವು ಮಸಮಸಕಾಯಿತೆಂದು ತೋರುತ್ತದೆ. ಆತ್ಮಸಿದ್ಧಿಯತ್ತ ಆಶೆ–ಆವೇಶಗಳನ್ನು ತೋರುವಲ್ಲಿ ಚೈತನ್ಯದ ಎಳೆದಾಟವಾಗುತ್ತದೆ. ನಿರ್ವಿಣ್ಣವಾದ ಇಲ್ಲವೆ ನಿರಾಶೆ ಹೊಂದಿದ ಚೈತನ್ಯವು ಮರಣ ಇಲ್ಲವೆ ವಿಘಟನದ ಕಡೆಗೆ ಹೊರಬೀಳುತ್ತದೆ. ಕಾಮನೆ ಎಂಬುದು ದಾಸ್ಯದ ಬಿರುದು. ಅದರ ಜೊತೆಗೆ ವಿಸಂವಾದ–ವ್ಯಥೆಗಳೆಂಬ ಪರಿವಾರ ತಪ್ಪಿದ್ದಲ್ಲ. ಯಾವುದು ಸ್ವತಂತ್ರ, ಏಕ ಮತ್ತು ಈಶವಾದದ್ದೋ ಅದು ಕಾಮಿಸುವದಿಲ್ಲ, ಆದರೆ ಸ್ವತಂತ್ರವಾಗಿ ತನ್ನೊಳಗೆ ಧರಿಸುತ್ತದೆ, ಸ್ವಾಮ್ಯವನ್ನು ಪಡೆಯುತ್ತದೆ, ಭೋಗಿಸುತ್ತದೆ.

## ದಿವ್ಯ ಜೀವನದ ನಿಯಮ

ವಿಶ್ವದ ಮತ್ತು ಅದರಲ್ಲಿದ್ದ ಸಕಲ ವಸ್ತುಗಳ ಭೋಗವೇ ಬದುಕಿನ ಗುರಿ. ಆದರೆ ಕಾಮನೆಯಲ್ಲಿ ಎಲ್ಲದರ ತ್ಯಾಗವು ಸ್ವತಂತ್ರವಾದ ಭೋಗಕ್ಕೆ ಹಾಕಿದ ಶರತ್ತಾಗಿದೆ. ಅಪೇಕ್ಷಿತವಾದ ತ್ಯಾಗವೆಂದರೆ ಸ್ವಾರ್ಥ ತ್ಯಾಗದ ನೈತಿಕ ನಿರ್ಬಂಧವಾಗಲಿ ಶಾರೀರಕ ನಿರಾಕರಣವಾಗಲಿ ಅಲ್ಲ, ಆದರೆ ವಸ್ತು ರೂಪಗಳ ಸಲುವಾಗಿ ಇರುವ ಹಂಬಲಿಕೆಯಿಂದ ಆತ್ಮದ ಸಂಪೂರ್ಣ ಮುಕ್ತತೆ.

ಈ ಮುಕ್ತತೆಯ ಲಕ್ಷಣಗಳೆಂದರೆ ಅಹಂಕಾರದಿಂದ ವಿಮೋಚನೆ ಹಾಗೂ ಅದರ ಪರಿಣಾಮವಾಗಿ ವೈಯಕ್ತಿಕ ಕಾಮನೆಯಿಂದ ಬಿಡುಗಡೆ. ಪ್ರತ್ಯಕ್ಷವಾಗಿ, ವಿಶ್ವದಲ್ಲಿಯ ಯಾವದೇ ಪದಾರ್ಥವು ಆವಶ್ಯಕವಾದ ಸ್ವಾಮ್ಯದ ವಸ್ತುವೆಂದೂ ಇನ್ನೊಬ್ಬರಿಂದ ಪಡೆದದ್ದು – ತನ್ನಿಂದ ಅಲ್ಲವೆಂದೂ ಹೃದಯಕ್ಕೆ ಇಲ್ಲವೆ ಇಂದ್ರಿಯಗಳಿಗೆ ಲೋಭವಿಷಯವೆಂದೂ ತಿಳಿಯದಿರಬೇಕೆಂಬುದೇ ಈ ತ್ಯಾಗದ ಅರ್ಥ. ಈ ಮನೋವೃತ್ತಿಗೆ ಏಕತೆಯ ಅನುಭವವೇ ಆಧಾರ. ಈ ಮೊದಲೆ ಹೇಳಿದಂತೆ ಎಲ್ಲ ಆತ್ಮಗಳು ಸ್ವಾಮಿಯಾದ ಒಬ್ಬ ಆತ್ಮ, ಈಶ ಆಗಿವೆ. ಪ್ರತಿಯೊಂದು ವಸ್ತುವಿನಲ್ಲಿ ಈಶನು ಪ್ರತ್ಯೇಕವಾಗಿ ಎನ್ನುವಂತೆ ವಾಸಿಸುತ್ತಿದ್ದರೂ ಆ ಆತ್ಮನಲ್ಲಿಯೇ ಎಲ್ಲ ವಸ್ತುಗಳು ಇರುತ್ತವೆ, ಅದರ ಹೊರಗಲ್ಲ.

ಆದ್ದರಿಂದ ಅಹಂತೆಯನ್ನು ಮೀರಿ ಆ ಏಕಾತ್ಮನನ್ನು ಅನುಭವಿಸುವದರಿಂದ, ನಾವು ಒಂದೇ ಆದ ವಿಶ್ವಪ್ರಜ್ಞೆಯಲ್ಲಿ ಇಡೀ ವಿಶ್ವವನ್ನೇ ನಮ್ಮದಾಗಿ ಮಾಡಿಕೊಳ್ಳುತ್ತೇವೆ, ಎಂದ ಮೇಲೆ ಭೌತಿಕವಾಗಿ ಅದನ್ನು ಪಡೆಯುವ ಆಗತ್ಯವೇ ಉಂಟಾಗುವದಿಲ್ಲ.

ಈಶನೊಡನೆ ಆದ ಒಂದುತನದಿಂದ ಎಲ್ಲ ವಸ್ತುಗಳಲ್ಲಿಯ ಅನಂತವೂ ಮುಕ್ತವೂ ಆದ ಆನಂದ ವನ್ನು ಹೊಂದುವುದು ಸಾಧ್ಯವಾಗುತ್ತದೆ, ಅಂತೇ ಕಾಮಿಸುವುದರ ಆಗತ್ಯ ನಮಗೆ ಉಳಿಯುವುದಿಲ್ಲ.

ಎಲ್ಲ ಸತ್ತೆಗಳೊಡನೆ ಒಂದಾಗಿ ಅವುಗಳ ಭೋಗದಲ್ಲಿ, ನಮ್ಮ ಭೋಗದಲ್ಲಿ, ವಿಶ್ವಾತ್ಮನ ಭೋಗ ದಲ್ಲಿ ವಿಶ್ವವಿಶಾಲವಾದ ಆತ್ಮಾಭಿವ್ಯಕ್ತಿಯ ಆನಂದವನ್ನು ನಾವು ಪಡೆಯುತ್ತೇವೆ. ಈ ಅತೀತವೂ ವಿಶ್ವ ವ್ಯಾಪಕವೂ ಆದ ಆನಂದದಿಂದಲೇ ಮನುಷ್ಯನು ತನ್ನ ಆತ್ಮದಲ್ಲಿ ಮುಕ್ತನಾಗಬಲ್ಲನು, ಮುಕ್ತನಾಗಿಯೂ ಈ ಗತಿಪರವಾದ ವಿಶ್ವದಲ್ಲಿ ಈಶನ ಸಮಸ್ತ ಕಾರ್ಯಪ್ರಪಂಚದಲ್ಲಿ ಬೆರೆತು ಇರಬಲ್ಲನು.

**ಕರ್ಮಗಳ ಸಮರ್ಥನೆ**

ಈ ಮುಕ್ತತೆ ಅಕರ್ಮವನ್ನು ಅವಲಂಬಿಸಿರುವುದಿಲ್ಲ. ಚಲನದಲ್ಲಿ ಭಾಗವಹಿಸದೆ ಕೇವಲ ಸಾಕ್ಷಿ ಯಾದ, ಕ್ರಿಯಾನಿರತವಲ್ಲದ ಆತ್ಮನ ಭೋಗವೆಂದರ ಈ ಸ್ವಾಮ್ಯವಲ್ಲ. ಇದಕ್ಕೆ ಪ್ರತಿಯಾಗಿ, ಈ ಭೌತಿಕಪ್ರಪಂಚದಲ್ಲಿ ಕರ್ಮಗಳನ್ನು ಮಾಡುತ್ತಿರುವುದು ಮತ್ತು ಭೌತಿಕಜೀವನದ ಸಮಯವನ್ನು ಸಂಪೂರ್ಣ ವಾಗಿ ಸ್ವೀಕರಿಸುವುದು ಅದರ ಪೂರ್ಣತೆಯ ಭಾಗವಾಗಿರುತ್ತವೆ. ಕರ್ಮನಿರತ ಬ್ರಹ್ಮನು ಜಗತ್ತಿನಲ್ಲಿ ಕರ್ಮಗಳಿಂದಲೇ ತನ್ನ ಸಾಫಲ್ಯಹೊಂದುತ್ತಾನೆ. ಕರ್ಮದಿಂದ ಆತ್ಮಸಾಫಲ್ಯವನ್ನು ಹೊಂದಲಿಕ್ಕೆಂದೇ ಮನುಷ್ಯನು ದೇಹಧಾರಣಮಾಡಿರುತ್ತಾನೆ. ಅವನು ಅನ್ಯಥಾ ವರ್ತಿಸಲಾರನು. ಯಾಕಂದರೆ ಅವನ ನಿಷ್ಕ್ರಿಯತೆ ಸಹ ವಿಶ್ವಚಲನದಲ್ಲಿ ಪರಿಣಾಮಗಳನ್ನು ಉಂಟುಮಾಡುತ್ತದೆ. ಈ ಶರೀರ ಇಲ್ಲವೆ ಬೇರೆ ಯಾವುದೇ ಶರೀರದಲ್ಲಿದ್ದು, ಕರ್ಮದಿಂದ ವಿಮುಖವಾಗುವುದು ಇಲ್ಲವೆ ಭೌತಿಕ ಜೀವನದಿಂದ ತಪ್ಪಿಸಿ ಕೊಳ್ಳುವುದು ಎರಡೂ ವ್ಯರ್ಥ. ಇದು ತನ್ನಷ್ಟಕ್ಕೆ ಮುಕ್ತಿಯ ಸಾಧನವೆಂಬ ಕಲ್ಪನೆ ಬ್ರಹ್ಮನಲ್ಲಿ ಆತ್ಮನು ಪ್ರತ್ಯೇಕ ವಸ್ತುವೆಂದು ತಿಳಿಯುವ ಅಜ್ಞಾನದ ಒಂದು ಅಂಶವೇ ಆಗಿದೆ.

ಕರ್ಮದಿಂದ ತಪ್ಪಿಸಿಕೊಳ್ಳುವ ಕಾರಣವೆಂದರೆ ಸ್ವಾತಂತ್ರ್ಯಕ್ಕೂ ಅದಕ್ಕೂ ಹೊಂದಿಕೆಯಿಲ್ಲ ಎಂಬ ವಿಚಾರದಿಂದ. ಕರ್ಮವನ್ನು ಮಾಡುವಾಗ ಮನುಷ್ಯನು ಕರ್ಮದ ಹಿಂದಿನ ಕಾಮನೆಯಲ್ಲಿ, ಕರ್ಮಕ್ಕೆ ಪ್ರೇರಕವಾದ ಪ್ರಾಣಶಕ್ತಿಯ ಸ್ವಾಧೀನತೆಯಲ್ಲಿ ಮತ್ತು ಕರ್ಮಫಲಗಳಲ್ಲಿ ತಪ್ಪದೆ ತೊಡಕಿಕೊಳ್ಳುವನೆಂದು ಗ್ರಹಿಸುವುದುಂಟು. ಇವೆಲ್ಲ ತೋರಿಕೆಗೆ ನಿಜ, ವಸ್ತುತಃ ನಿಜವಲ್ಲ. ಕಾಮನೆ ಇದು ಭಾವನಾಶೀಲವಾದ ಮನಸ್ಸಿನ ರೀತಿ ಮಾತ್ರ. ಅದು ತನ್ನ ಅಜ್ಞಾನದಿಂದ ತಾನು ಬಯಸಿದ ವಿಷಯದಲ್ಲಿ ಸಂತೋಷವನ್ನು ಹುಡುಕುತ್ತವೆ, ಆ ವಿಷಯದಲ್ಲಿ ಅಭಿವ್ಯಕ್ತನಾದ ಬ್ರಹ್ಮನಲ್ಲಿ ಸಂತೋಷ ಹುಡುಕುವದಿಲ್ಲ. ಆ ಅಜ್ಞಾನ ವನ್ನು ನಾಶಗೊಳಿಸಿದರೆ ಕಾಮನೆಯಲ್ಲಿ ತೊಡಕಿಕೊಳ್ಳದೆ ಕರ್ಮಗಳನ್ನು ಯಾರೂ ಮಾಡಬಹುದು.

ಪ್ರೇರಕವಾದ ಪ್ರಾಣಶಕ್ತಿ ಈಶನಿಗೆ ಪರಾಧೀನವಾಗಿರುತ್ತದೆ. ಈಶನು ಸಂಪೂರ್ಣಸ್ವಾತಂತ್ರ್ಯ ದಿಂದ ಅದರಲ್ಲಿ ಅಭಿವ್ಯಕ್ತನಾಗುತ್ತಾನೆ. ಪ್ರಕೃತಿಯ ಹಿಂದೆ ಹೋಗಿ ಪ್ರಕೃತಿಯ ಈಶನನ್ನು ಪಡೆದು ವೈಯಕ್ತಿಕ ಸಂಕಲ್ಪವನ್ನು ವಿಶ್ವಸಂಕಲ್ಪದಲ್ಲಿ ವಿಲೀನಗೊಳಿಸಿದರೆ ದಿವ್ಯ ಸ್ವಾತಂತ್ರ್ಯದಿಂದ ಯಾರೂ ಕರ್ಮ ದಲ್ಲಿ ತೊಡಗಬಹುದು. ನಮ್ಮ ಕರ್ಮಗಳು ಈಶನಿಗೆ ಅರ್ಪಿತವಾದ ಮೇಲೆ ಅವನ ಸ್ವಾತಂತ್ರ್ಯದಲ್ಲಿ ನಮ್ಮ ಹೊಣೆಗಾರಿಕೆಯೆಲ್ಲ ನಿಂತುಬಿಡುತ್ತದೆ.

ಕರ್ಮಚಕ್ರವು ಪ್ರಕೃತಿಯ ಚಲನವನ್ನು ಮಾತ್ರ ಬಂಧಿಸುತ್ತದೆ, ಆತ್ಮವನ್ನಲ್ಲ. ಆತ್ಮವು ತನ್ನ ತಾನರಿತು ತನ್ನ ಕರ್ಮದ ಫಲದಿಂದ ತಾನು ಬದ್ಧನಾಗುವುದಿಲ್ಲ, ಅಲ್ಲದೆ ಬದ್ಧವೆಂದು ತೋರುವುದನ್ನೂ ನಿಲ್ಲಿಸುತ್ತದೆ.

ಆದ್ದರಿಂದ ಸ್ವಾತಂತ್ರ್ಯದ ದಾರಿ ನಿಷ್ಕ್ರಿಯೆಯಲ್ಲ, ಚಲನದಲ್ಲಿ ಒಂದಾಗುವುದನ್ನು ಬಿಟ್ಟು ವಸ್ತುಗಳ ಆತ್ಮಸ್ವರೂಪನಾದ ಈಶನೊಡನೆ ನಮ್ಮ ನಿಜವಾದ ಒಂದುತನವನ್ನು ಮರಳಿ ಪಡೆಯುವದರಲ್ಲಿ ಆ ದಾರಿಯಿದೆ.

**ಇತರ ಲೋಕಗಳು**

ಭೌತಿಕ ಜೀವನದಿಂದ ಪರಾವೃತ್ತನಾಗುವುದೆಂದರೆ ಚಲನದಿಂದ ಕಣ್ಮರೆಯಾದಂತಲ್ಲ, ಆದರೆ ಭೌತಿಕ ವಿಶ್ವಕ್ಕಿಂತ ಬೇರೆಯಾದ ಪ್ರಜ್ಞೆಯ ಸಾಮಾನ್ಯ ಅವಸ್ಥೆಯಲ್ಲಿ ಸಂಕ್ರಮಿಸಿದಂತೆ ಎಂದು ತಿಳಿಯಬೇಕು.

ಈ ಅವಸ್ಥೆಗಳು ಅಸ್ಪಷ್ಟವಾಗಿರಬಹುದು, ಪ್ರಕಾಶಿತವಾಗಿರಬಹುದು, ಕತ್ತಲೆಯಿಂದ ಕೂಡಿ 'ಅಸೂರ್ಯ' ಆಗಿರಬಹುದು.

ಅಜ್ಞಾನದ ಸ್ಥೂಲರೂಪಗಳಲ್ಲಿರುವ ಹಟತೊಡುವುದರಿಂದಲೂ ಆತ್ಮಸಿದ್ಧಿಗಾಗಿ ತನ್ನನ್ನು ವಿಪರೀತ ಬುದ್ಧಿಯಿಂದ ಬಲಾತ್ಕರಿಸುವದರಿಂದಲೂ ಚಲನದಲ್ಲಿ ಆಗುವ ಅದರ ಪರಿಣತಿಯನ್ನು ತಪ್ಪುಬಗೆಯಲ್ಲಿ ವಿಘಟಿಸುವುದರಿಂದಲೂ ಮನುಷ್ಯನು ಅಂಧಂತಮಸ್ಸಿನ ಅವಸ್ಥೆಗಳಲ್ಲಿ ಪ್ರವೇಶಮಾಡುತ್ತಾನೆ; ಪ್ರಕಾಶ, ಮುಕ್ತಿ, ಆನಂದದ ಲೋಕಗಳಲ್ಲಿ ಮಾತ್ರ ಅಲ್ಲ.

( ಈ ಲೇಖನದ ೧ನೆಯ ಭಾಗವು ಕಳೆದ ವರ್ಷದ 'ಸಮರ್ಪಣ' ದಲ್ಲಿ ಅಚ್ಚಾಗಿದೆ. )

—ರಂ. ಶ್ರೀ. ಮುಗಳಿ

---

ಈ ಲೇಖನದಲ್ಲಿಯ ಕೆಲವು ಕನ್ನಡ ಶಬ್ದಗಳ ಆಂಗ್ಲ ರೂಪಗಳು :

ಏಕಮೇವ ಸ್ಥಿರ ಚೈತನ್ಯ = One and stable Spirit
ಏಕತೆ ಮತ್ತು ಸ್ಥಿರತೆ = Unity and Stability
ಸತ್ತೆ = Being. ಚಲನ = Movement
ಆಗುವಿಕೆ = Becoming
ವಿಶ್ವರೂಪ ಮತ್ತು ವಿಶ್ವಾತೀತ ಆತ್ಮ = Cosmic and Transcendental Self
ರೂಪಧಾರಿಯಾದ ಪ್ರಕೃತಿ = Formative Nature
ವಿಶ್ವ = Cosmos
ಪುನರಾವೃತ್ತಿಯ ನಿತ್ಯತೆ=Eternity of recurrence
ಆತ್ಮ = Spirit

ಅಣು, ಮಹತ್ತು = Microcosm, Macrocosm
ಸಂಕ್ರಮಣಶೀಲವಾದ ವಿಚಾರ = Transition of Thought
ಅಹಂ-ತೆ = The Ego ( The impulse of )
ವಿಘಟನ = Disintegration
ವಿಶ್ವಪ್ರಜ್ಞೆ = Cosmic Consciousness
ಕ್ರಿಯಾನಿರತವಲ್ಲದ ಆತ್ಮ = Inactive Soul
ಕರ್ಮನಿರತ ಬ್ರಹ್ಮ = Active Brahman
ವಿಶ್ವಸಂಕಲ್ಪ = Cosmic Will
ಕಾಮನೆ = Desire

# ಆತ್ಮ ಸಂಯಮನ

( ಭಗವದ್ಗೀತೆ ಹಾಗೂ ಶ್ರೀ ಅರವಿಂದರ ಗ್ರಂಥಗಳಿಂದ ) *

"ಸಂಯಮವಿಲ್ಲದವನಿಗೆ ಯೋಗವು ಪ್ರಾಪ್ತವಾಗುವದಿಲ್ಲವೆಂದು ನನ್ನ ಸ್ಪಷ್ಟಾಭಿಪ್ರಾಯವಿರುತ್ತದೆ.'' ಎಂದು ಭಗವದ್ಗೀತೆಯಲ್ಲಿ ಶ್ರೀಕೃಷ್ಣಪರಮಾತ್ಮನು ಸಾರಿದ್ದಾನೆ. ("ಅಸಂಯತಾತ್ಮನಾ ಯೋಗೋ ದುಷ್ಪ್ರಾಪ ಇತಿ ಮೇ ಮತಿಃ'') ಭಗವದ್ಗೀತಾ, ೬-೩೬.

ಶ್ರೀ ಅರವಿಂದರು ತಮ್ಮ "ಯೋಗದ ತಳಹದಿ" ( Bases of Yoga ) ಎಂಬ ಗ್ರಂಥದಲ್ಲಿ—''ಸಾಧಕನು ತನ್ನ ದೇಹಪ್ರಾಣಗಳಲ್ಲಿ ಕಾಮಪ್ರವೃತ್ತಿಯು ಪ್ರವೇಶಿಸದಂತೆ ಸಂಪೂರ್ಣವಾಗಿ ಅದರಿಂದ ಹಿಂದಕ್ಕೆ ಸರಿದುಕೊಳ್ಳಲಿಕ್ಕೆ ಬೇಕು." ಎಂದು ದೃಢತರವಾಗಿ ನಿಯಮವನ್ನು ವಿಧಿಸಿದ್ದಾರೆ: ( The Sadhaka has to turn away entirely from the invasion of the vital and the physical by the sex-impulse ) ೫ನೆಯ ಆವೃತ್ತಿ , ಪುಟ ೯೨.

ಇಡಿ ಭಗವದ್ಗೀತೆಯಲ್ಲಿ ಅನೇಕ ಕಡೆಯಲ್ಲಿ ಪ್ರಸಂಗಾನುಸಾರವಾಗಿ ಬೇರೆ ಬೇರೆ ಪ್ರಕಾರದಿಂದ ಈ ಸಂಯಮನವನ್ನು ಕುರಿತು ಪ್ರದಿಪಾದಿಸಲಾಗಿದೆ.

ಹಾಗೆಯೆ ಶ್ರೀ ಅರವಿಂದರ "ಯೋಗದ ತಳಹದಿ" ಎಂಬ ಇಡಿ ಗ್ರಂಥವು ಮುಖ್ಯವಾಗಿ ಇದೇ ವಿಷಯವನ್ನು ಪ್ರತಿಪಾದಿಸುತ್ತದೆ.

ಭಗವದ್ಗೀತೆಯ ೨ನೆಯ ಅಧ್ಯಾಯದಲ್ಲಿ ಇಂದ್ರಿಯನಿಗ್ರಹವನ್ನೂ, ೬ನೆಯ ಅಧ್ಯಾಯದಲ್ಲಿ ಮನೋನಿಗ್ರಹವನ್ನೂ, ೧೭ನೆಯ ಅಧ್ಯಾಯದಲ್ಲಿ ಭಾವಶುದ್ಧಿಯನ್ನೂ, ೧೪ನೆಯ ಅಧ್ಯಾಯದಲ್ಲಿ ಸಾಕ್ಷೀಭಾವವನ್ನೂ ಸವಿಸ್ತಾರವಾಗಿ ಪ್ರತಿಪಾದಿಸಲಾಗಿದೆ.

ಇದರಂತೆ "ಯೋಗದ ತಳಹದಿ"ಯಲ್ಲಿ ೧ನೆಯ ಅಧ್ಯಾಯದೊಳಗೆ ಮನದ ಚಾಂಚಲ್ಯಾದಿಗಳ ತ್ಯಾಗ, ೪ನೆಯ ಅಧ್ಯಾಯದಲ್ಲಿ ಪ್ರಾಣದ ವಾಸನೆ—ಆಹಾರದ ಅಭ್ಯಾಸೆ—ಕಾಮೇಚ್ಛೆ ಮೊದಲಾದವುಗಳ ತ್ಯಾಗ, ೫ನೆಯ ಅಧ್ಯಾಯದಲ್ಲಿ ದೈಹಿಕ ಪ್ರಜ್ಞೆಯ ಮೂಢತನ—ಅವಚೇತನದ ಪುನರಾಕ್ರಮಣ—ನಿದ್ರೆ ಕನಸುಗಳೊಳಗಿನ ಗೊಂದಲಗೇಡಿತನ—ಬೇನೆಗಳ ರೂಪದಿಂದ ದೋಷಗಳ ಪ್ರಕಟನೆ ಇತ್ಯಾದಿ ವಿಷಯಗಳ ನಿರಾಕರಣ—ಮೊದಲಾದವುಗಳನ್ನು ಶ್ರೀ ಅರವಿಂದರು ಅತ್ಯಂತ ಸವಿಸ್ತರವಾಗಿ ವಿವರಿಸಿದ್ದಾರೆ.

* ಶಿವಶರಣರ ನೂರೊಂದು ಸ್ಥಲಗಳ ಗ್ರಂಥಗಳಲ್ಲಿ "ತಾಮಸನಿರಸನಸ್ಥಲ'' ಮೊದಲಾದ ಭಾಗಗಳಲ್ಲಿ ಇದೇ ವಿಷಯವು ಇದೇ ಅರ್ಥದಲ್ಲಿ ಹೇಳಲ್ಪಟ್ಟಿದೆ. ವಾಚಕರು ಮೂಲಗ್ರಂಥಗಳಲ್ಲಿ ಅದನ್ನು ನೋಡಿಕೊಳ್ಳಬಹುದು.

ಗೀತೆಯ ೨ನೆಯ ಅಧ್ಯಾಯದಲ್ಲಿ "ಸ್ಥಿತಪ್ರಜ್ಞ" ನ ಲಕ್ಷಣಗಳನ್ನು ಹೇಳುವ ವಿಭಾಗದಲ್ಲಿ ಇಂದ್ರಿಯನಿಗ್ರಹದ ವಿಷಯವು ಹೀಗೆ ಹೇಳಲ್ಪಟ್ಟಿದೆ:—

"ಆಮೆಯು ತನ್ನ ಎಲ್ಲ ಅವಯವಗಳನ್ನು ಹಿಂದಕ್ಕೆ ಸೆಳೆದುಕೊಳ್ಳುವಂತೆ ಯಾವನು ತನ್ನ ಇಂದ್ರಿಯಗಳನ್ನು ವಿಷಯಗಳಿಂದ ಹಿಂದಕ್ಕೆ ಸೆಳೆದುಕೊಳ್ಳುವನೋ ಅವನೇ ಸ್ಥಿತಪ್ರಜ್ಞನು. ಇಂದ್ರಿಯ ಗಳನ್ನು ಉಪವಾಸ ಕೆಡಹುವದರಿಂದ ವಿಷಯಗಳು ಓಡಿ ಹೋಗುವವಾದರೂ ಅವುಗಳ ಸೂಕ್ಷ್ಮ ಅಭಿ ರುಚಿಯು ಅಂದರೆ ಆಶೆಯು ಸಂಪೂರ್ಣವಾಗಿ ಅಡಗುವದಿಲ್ಲ. ಪರಮಾತ್ಮನನ್ನು ಕಂಡಾಗ ಆ ಸೂಕ್ಷ್ಮ ಅಭಿ ರುಚಿಯು ಸಹ ದೂರಾಗುತ್ತದೆ. ಜ್ಞಾನಿಯಾದವನು ಹೀಗೆ ಪ್ರಯತ್ನಪಡುತ್ತಿದ್ದರೂ ಉದ್ದಾಮ ಇಂದ್ರಿಯ ಗಳು ಮನವನ್ನು ಬಲವಾಗಿ ವಿಷಯಗಳ ಕಡೆಗೆ ಸೆಳೆದೊಯ್ಯುತ್ತವೆ. ಯೋಗಿಯಾದವನು ಅವೆಲ್ಲವು ಗಳನ್ನು ಸಂಯಮನಗೊಳಿಸಿ ನನ್ನೊಬ್ಬನಲ್ಲಿಯೇ (ಪರಮಾತ್ಮನಲ್ಲಿಯೇ) ಮನವನ್ನಿರಿಸಬೇಕು. ಯಾವಾತ ನಿಗೆ ತನ್ನ ಇಂದ್ರಿಯಗಳು ವಶವಾಗಿರುವವೋ ಅವನೇ ಸ್ಥಿತಪ್ರಜ್ಞನು. …………ಇಂದ್ರಿಯಗಳು ಹರಿದತ್ತ ಯಾವನ ಮನವು ಹಿಂಬಾಲಿಸುವದೋ ಅವನ ಮನವನ್ನು, ಆ ಇಂದ್ರಿಯಗಳು, ನೌಕೆಯನ್ನು ಗಾಳಿಯು ಓಡಿಸಿಕೊಂಡು ಹೋಗುವಂತೆ, ಸೆಳೆದುಕೊಂಡು ಹೋಗುತ್ತವೆ. ಆದ್ದರಿಂದ ವಿಷಯಗಳಿಂದ ಯಾವನ ಇಂದ್ರಿಯಗಳು ಸಂಪೂರ್ಣವಾಗಿ ನಿಗ್ರಹಿಸಲ್ಪಟ್ಟಿರುವವೋ ಆತನೇ ಸ್ಥಿತಪ್ರಜ್ಞನು. ……………ಎಲ್ಲೆಡೆ ಗಳಿಂದಲೂ (ನೀರು) ತುಂಬಿ ಬರುತ್ತಿದ್ದರೂ ಗಂಭೀರವಾದ ಸಮುದ್ರವು ಎಳ್ಳಷ್ಟು ಏರಿಳಿತಗಳಿಲ್ಲದೆ ಇರುವ ಹಾಗೆ, ಯಾವಾತನಲ್ಲಿ ಎಲ್ಲ ವಿಷಯಗಳು ಬಂದು ನುಗ್ಗುತ್ತಿದ್ದರೂ (ಹಿಗ್ಗು ಕುಗ್ಗುಗಳಿಲ್ಲದೆ) ಅವಿಚಲ ಚಿತ್ತನಾಗಿರುವನೋ ಅವನಿಗೇ ಮಹಾಶಾಂತಿಯು ಲಭಿಸುವದು, ಇನ್ನಿತರರಿಗಲ್ಲ."

ಭಗವದ್ಗೀತೆಯ ೬ನೇ ಅಧ್ಯಾಯದಲ್ಲಿ "ಯೋಗ" ವನ್ನು ಕುರಿತು ಹೇಳುವಾಗ ಮನದ ಚಾಂಚಲ್ಯ ವನ್ನು ನಿಯಮನಗೊಳಿಸುವ ವಿಷಯವು ಹೀಗೆ ವಿವರಿಸಲ್ಪಟ್ಟಿದೆ:—

"ಧೈರ್ಯಯುಕ್ತವಾದ ಬುದ್ಧಿಯ ಬಲದಿಂದ ಮನವನ್ನು ಮೆಲ್ಲ ಮೆಲ್ಲನೆ ವಿಷಯಗಳಿಂದ ಹಿಂದಿ ರುಗಿಸಬೇಕು. ಮತ್ತು ಅದನ್ನು ಆತ್ಮನಲ್ಲಿಯೇ ನಿಲ್ಲಿಸಿ, (ಆತ್ಮನ ಹೊರತು) ಇನ್ನೇನನ್ನೂ ಚಿಂತಿಸಬಾರದು. ಚಂಚಲವೂ, ಅಸ್ಥಿರವೂ ಆದ ಮನವು ಯಾವ ಯಾವ ಕಡೆಗೆ ಹರಿಯುವದೋ ಅಲ್ಲಲ್ಲಿಯಿಂದ ಆ ಮನ ವನ್ನು ನಿಯಮನಗೊಳಿಸಿ ಆತ್ಮನ ವಶದಲ್ಲಿಯೇ ಇರಿಸಬೇಕು." ಎಂದು ಶ್ರೀ ಕೃಷ್ಣಪರಮಾತ್ಮನು ಹೇಳಿ ದ್ದಕ್ಕೆ ಅರ್ಜುನನು ಪುನಃ ಹೀಗೆ ಪ್ರಶ್ನೆ ಮಾಡುತ್ತಾನೆ:—

"ಹೇ ಪರಮಾತ್ಮನೇ, ಮನವು ಬಹಳೇ ಚಂಚಲವಾದದ್ದು. ಅದರ ಮದವು ಅತಿಶಯವಾಗಿ ಬಲ ವಾದದ್ದು. ಇಂಥ ಆ ಮನವನ್ನು ನಿಗ್ರಹಿಸುವುದೆಂದರೆ ಗಾಳಿಯನ್ನು ತಡೆದು ನಿಲ್ಲಿಸುವ ಪ್ರಯತ್ನದಂತೆ ಅಶಕ್ಯವಾದದ್ದಾಗಿದೆ." ಎಂದೆನ್ನಲು ಇದಕ್ಕೆ ಶ್ರೀ ಕೃಷ್ಣಪರಮಾತ್ಮನು ಹೀಗೆ ಹೇಳುತ್ತಾನೆ:—

"ಮಹಾಬಲಶಾಲಿಯಾದ ಅರ್ಜುನನೇ, ಮನವೆಂಬುದು (ನೀನು ಹೇಳುವಂತೆ) ನಿಗ್ರಹಿಸಲ ಸಾಧ್ಯವಾದದ್ದೂ ಚಂಚಲವೂ ಆಗಿದೆಯೆಂಬುದೇನೋ ನಿಜವೇ. ಆದರೂ ಸಾಧನೆಯಿಂದಲೂ ವಿಷಯವೈರಾಗ್ಯ ದಿಂದಲೂ ಅದನ್ನು ಕಟ್ಟಿ ಹಾಕಲಿಕ್ಕೆ ಶಕ್ಯವಿರುತ್ತದೆ. ಸಂಯಮನವಿಲ್ಲದವನಿಗೆ ಯೋಗವು ಪ್ರಾಪ್ತವಾಗು ವದಿಲ್ಲವೆಂದು ನನ್ನ ಸ್ಪಷ್ಟಾಭಿಪ್ರಾಯವುಂಟು. ಆದರೆ ಮನವನ್ನು ವಶಪಡಿಸಿಕೊಂಡು ಉಪಾಯದಿಂದ ಪ್ರಯತ್ನಿಸುತ್ತಿದ್ದರೆ ಅಂಥವನಿಗೆ ಯೋಗವು ಶಕ್ಯವಿರುತ್ತದೆ."

ಮನದ ವ್ಯಷ್ಟಿಗತ ಅವಿವೇಕವನ್ನು ನಿಗ್ರಹಿಸುವ ಬಗೆಯನ್ನು ಈ ಪ್ರಕಾರವಾಗಿ ವಿವರಿಸಿದ ಮೇಲೆ ಮುಂದೆ ಭಗವದ್ಗೀತೆಯ ೧೨ನೆಯ ಅಧ್ಯಾಯದಲ್ಲಿ ಸಮಷ್ಟಿಯೊಡನೆ (ಸರ್ವಜನರೊಡನೆ) ಅದು ನಡೆಯಿಸುವ ದೌರಾತ್ಮ್ಯವನ್ನು ಹೇಗೆ ನಿಯಮನಗೊಳಿಸಬೇಕೆಂಬ ವಿಷಯವು ಹೀಗೆ ಹೇಳಲ್ಪಟ್ಟಿದೆ:—

"ಸರ್ವ ಪ್ರಾಣಿಗಳೊಡನೆ ದ್ವೇಷವಿಲ್ಲದವನಾಗಿರಬೇಕು. ಹಾಗೂ (ಸರ್ವಪ್ರಾಣಿಗಳಿಗೆ, ವ್ಯಕ್ತಿಗಳಿಗೆ) ಮಿತ್ರನಾಗಿ ಕರುಣೆಯುಳ್ಳವನಾಗಿರಬೇಕು........... ಜನರಿಗೆ ತನ್ನಿಂದ ಉದ್ವಿಗ್ನತೆಯಾಗಬಾರದು ಹಾಗೂ ಜನರ ವಿರೋಧೀ ಕೃತಿಗಳಿಗೆ ತಾನು 'ಉದ್ವಿಗ್ನನಾಗಬಾರದು. ಹಿಗ್ಗು ತಗ್ಗು, ಭಯ ಉದ್ವೇಗ ಮೊದಲಾದವುಗಳಿಂದ ಬಿಡುಗಡೆ ಹೊಂದಿದವನೇ ನನಗೆ (ಪರಮಾತ್ಮನಿಗೆ) ಪ್ರಿಯತಮನಾಗಿರುವನು......... ಶತ್ರುಮಿತ್ರರಲ್ಲಿಯೂ ಕೂಡ ಸಮಬುದ್ಧಿಯುಳ್ಳವನೂ, ಮಾನಾಪಮಾನ–ಶೀತೋಷ್ಣ–ಸುಖದುಃಖಗಳಲ್ಲಿಯೂ ಸಹ ಸಮಾನಭಾವವುಳ್ಳವನೂ, ಆಸಕ್ತಿರಹಿತನೂ, ನಿಂದಾಸ್ತುತಿಗಳನ್ನು ಸರಿಗಾಣುವವನೂ, ಮೌನಧಾರಿಯೂ, ಸಿಕ್ಕಷ್ಟರಿಂದಲೇ ಸಂತೋಷ ಹಚ್ಚಿಕೊಳ್ಳುವವನೂ, ಒಂದೇ ಅನುಕೂಲತೆಯು ಸರ್ವದಾ ಇರಬೇಕೆಂದು ಅಪೇಕ್ಷಿಸಲಾರದವನೂ ಆದ – ಸ್ಥಿರಬುದ್ಧಿಯುಳ್ಳ, ಭಕ್ತಿಶಾಲಿ ಮನುಷ್ಯನು ನನಗೆ ಪ್ರಿಯಕರನಾಗಿರುವನು. ಈ ಧರ್ಮಾಮೃತವನ್ನು ಯಾರು ಚನ್ನಾಗಿ ಸೇವನೆ ಮಾಡುವರೋ ಅಂಥ ಶ್ರದ್ಧಾಳುಗಳೂ ನನ್ನ (ಪರಮಾತ್ಮನ) ಮೇಲೆಯೇ ಏಕಚಿತ್ತರಾದವರೂ (ಮತ್ಪರಾಯಣರೂ) ಆದ ನನ್ನ ಭಕ್ತರು ನನಗೆ (ಪರಮಾತ್ಮನಿಗೆ) ಅತಿಶಯ ಪ್ರಿಯರಾಗಿರುವರು."

ಇವೆಲ್ಲವನ್ನು ಗೆದಿಯುವುದಕ್ಕೆ ಪ್ರಕೃತಿ ಪುರುಷ ವಿವೇಕಜನಿತವಾದ ಸಾಕ್ಷೀಭಾವವು ಅತ್ಯಾವಶ್ಯಕವೆಂದು ಭಗವದ್ಗೀತೆಯ ೧೪ನೆಯ ಅಧ್ಯಾಯದಲ್ಲಿ ಹೀಗೆ ಹೇಳಲಾಗಿದೆ:—

"(ಸತ್ತ್ವಗುಣಜನಿತವಾದ) ತಿಳಿವು, (ರಜೋಗುಣಜನಿತವಾದ) ಪ್ರವೃತ್ತಿ, (ತಮೋಗುಣಜನಿತವಾದ) ಮೂಢತೆ ಅಥವಾ ಅಜ್ಞಾನ ಇವುಗಳಲ್ಲಿ ಯಾವವುಗಳೇ ಒದಗಿಬಂದರೂ (ತ್ರಿಗುಣಾತೀತನಾದವನು) ಅವುಗಳನ್ನು ದ್ವೇಷಿಸುವದಿಲ್ಲ; ಹಾಗೂ ಹೇ ಅರ್ಜುನಾ, ಇವುಗಳಲ್ಲಿ ಯಾವವುಗಳೇ ಗತಿಸಿಹೋದರೂ ಆತನು ಅವುಗಳನ್ನು (ಪುನಃ ತಿರುಗಿ ಬರಲೆಂದು) ಆಶಿಸುವದಿಲ್ಲ. ತಟಸ್ಥನಾಗಿ ಕುಳಿತುಕೊಂಡು ಆತನು (ಸತ್ತ್ವಾದಿ) ಗುಣಗಳಿಗೆ ವಿಚಲಿತನಾಗುವದಿಲ್ಲ. ಗುಣಗಳ ಸ್ವಭಾವವೇ ಹೀಗೆ ಸದಾ ಪ್ರವರ್ತನಶೀಲವಾಗಿದೆಯೆಂದು ಭಾವಿಸುತ್ತ ಆತನು ಅವುಗಳಿಗೆ ಅಲುಗಾಡದೆ ನಿಂತಿರುತ್ತಾನೆ."

ಈ ತಟಸ್ಥ ಸ್ಥಿತಿಯು ಅಥವಾ ಸಾಕ್ಷೀಭಾವವು ಆತ್ಮನ ಅಂದರೆ ಚೈತ್ಯಪುರುಷನ ಅರಳುವಿಕೆಯಿಂದ ಮಾತ್ರ ಬರುತ್ತದೆ. ಅದು (ಆತ್ಮನ ಅರಳುವಿಕೆಯು) ಪರಮಾತ್ಮನ ಮೇಲಿನ ಅವಿಚಲಿತ ಭಕ್ತಿಯಿಂದ ಬರುತ್ತದೆ. ಈ ವಿಷಯವು ಭಗವದ್ಗೀತೆಯಲ್ಲಿ ಹೀಗೆ ಹೇಳಲ್ಪಟ್ಟಿದೆ.

"ನನ್ನನ್ನು (ಪರಮಾತ್ಮನನ್ನು) ಯಾವಾತನು ಅವಿಚಲಿತವಾದ ಭಕ್ತಿಯೋಗದಿಂದ ಸೇವಿಸುವನೋ ಅವನು ಈ (ಸತ್ತ್ವಾದಿ) ಗುಣಗಳನ್ನು ದಾಟಿದವನಾಗಿ (ತ್ರಿಗುಣಾತೀತನಾಗಿ) ಬ್ರಾಹ್ಮೀಸ್ಥಿತಿಗೆ ಮುಟ್ಟುವುದಕ್ಕೆ ಸಮರ್ಥನಾಗುತ್ತಾನೆ." —ಗೀತಾ ೧೪-೨೬.

ಇಲ್ಲಿ ಇನ್ನೊಂದು ಮಾತೇನೆಂದರೆ, ಸಾಧಕನು ತನ್ನೊಳಗಿನ ಗುಣಗಳ ವಿಷಯದಲ್ಲಾಗಲಿ, ಜನತೆಯ ವಿಷಯದಲ್ಲಾಗಲಿ ಹೇಗೆ ನಡೆದುಕೊಳ್ಳಬೇಕೆಂಬ ಮಾತೊಂದಲ್ಲದೆ,—ಬಾಹ್ಯ ಜಗತ್ತಿನ ವಸ್ತು ಸಮೂಹದ ಪ್ರಾಪ್ತಿ ಅಪ್ರಾಪ್ತಿಗಳ ವಿಷಯದಲ್ಲಿ ಸಹ ಹೇಗೆ ನಡೆದುಕೊಳ್ಳಬೇಕೆಂಬ ಬಗೆಗೂ ಗೀತೆಯ ೧೪ನೆಯ ಅಧ್ಯಾಯದಲ್ಲಿ ಹೀಗೆ ಹೇಳಿದೆ.

"ಸಮಲೋಷ್ಟಾಶ್ಮಕಾಂಚನನು (ಮಣ್ಣಿನ ಹೆಂಟೆಯನ್ನೂ ಕಲ್ಲುಗಳನ್ನೂ ಬಂಗಾರವನ್ನೂ ಸಮನಾಗಿ ಕಾಣುವವನು) ಮತ್ತು ಸ್ವಸ್ಥನು. ...........ಹೀಗಿರುವವನೇ ಗುಣಾತೀತನೆಂದು ಹೇಳಲ್ಪಡುತ್ತಾನೆ."
—ಗೀತಾ, ೧೪-೨೪, ೨೫.

೧೨ನೆಯ ಅಧ್ಯಾಯದ ಕೊನೆಯ ಶ್ಲೋಕಗಳಲ್ಲಿಯೂ ಇಂಥ ಮಾತುಗಳು ಬಂದಿರುವವು. ಇದಲ್ಲದೆ "ಲಾಭಾಲಾಭ, ಜಯಾಜಯ'' ಮೊದಲಾದವುಗಳನ್ನೆಲ್ಲ ಸಮನಾಗಿ ಕಾಣಬೇಕೆಂದು ಗೀತೆಯಲ್ಲಿ ಅನೇಕ ಕಡೆಯಲ್ಲಿ ಹೆಜ್ಜೆಹೆಜ್ಜೆಗೆ ಹೇಳಲಾಗಿದೆ.

"ಸ್ವಸ್ಥ''ನಾಗಿರುವುದೆಂದರೆ ಇದೇ. ಸ್ವಸ್ಥನೆಂದರೆ ತನ್ನಲ್ಲಿ ತಾನಿರುವವನು, ಅಥವಾ ಆತ್ಮಸ್ಥನಾಗಿರುವವನು ಎಂದು ಗೀತೆಯ ಅಭಿಪ್ರಾಯವಿರಬಹುದೆಂದು ಊಹಿಸಲಿಕ್ಕೆ ಅವಕಾಶವಿದೆ. (ಸ್ವ-ಸ್ಥ= ಸ್ವಸ್ಥ).

ಈ ಸ್ವಸ್ಥತೆಗೆ ಬಾಹ್ಯಜೀವನದಲ್ಲಿ ಸಮತ್ವವನ್ನು ಪ್ರಯೋಗಿಸುವದು ಅತ್ಯಾವಶ್ಯಕವೆಂದು ಬೇರೆ ಹೇಳಬೇಕಾಗಿಲ್ಲ. ಗೀತೆಯು ೧೨ನೆಯ ಹಾಗೂ ೧೪ನೆಯ ಅಧ್ಯಾಯಗಳ ಕೊನೆಯಲ್ಲಿಯೂ ಮತ್ತು ಇನ್ನೂ ಅನೇಕ ಕಡೆಯಲ್ಲಿಯೂ ಈ ವಿಷಯವನ್ನು ಪುನಃ ಪುನಃ ವಿಸ್ತರಿಸಿರುವದು. ಅದೆಂತೆಂದರೆ :—

"ಸುಖದುಃಖಗಳಲ್ಲಿ ಸಮಭಾವವುಳ್ಳವನೂ, ಕಲ್ಲು ಮಣ್ಣು ಬಂಗಾರಗಳಲ್ಲಿ ಸಮಬುದ್ಧಿಯುಳ್ಳವನೂ, ಪ್ರಿಯ ಅಪ್ರಿಯಗಳಲ್ಲಿಯೂ ನಿಂದಾಸ್ತುತಿಗಳಲ್ಲಿಯೂ ಮಾನಾಪಮಾನಗಳಲ್ಲಿಯೂ ಶತ್ರು ಮಿತ್ರರಲ್ಲಿಯೂ ಸಮಾನಭಾವವುಳ್ಳವನೂ ಭಗವತ್ಪ್ರೀತ್ಯರ್ಥವಲ್ಲದೆ ಸ್ವಾರ್ಥಬುದ್ಧಿಯಿಂದ ಯಾವ ಉದ್ಯೋಗವನ್ನೂ ಮಾಡದವನೂ ಆದ ಸ್ವಸ್ಥನೂ ಧೀರನೂ ಯಾವನೋ ಅವನೇ ತ್ರಿಗುಣಾತೀತನು.''—(ಅ. ೧೪)

ಇಂಥವನು ಸರ್ವದಾ ಹೇಗಿರಬೇಕೆಂದರೆ, ಗೀತೆಯು ಹೀಗೆ ಹೇಳುತ್ತದೆ:—

"ಅಹಂಕಾರ ಮಮಕಾರ ರಹಿತನೂ, ಸದಾ ಸಂತುಷ್ಟಚಿತ್ತನೂ, ಕ್ಷಮಾಶೀಲನೂ, ಸಂಯಮಿಯೂ, ದೃಢನಿಶ್ಚಯವುಳ್ಳವನೂ, ಅಪೇಕ್ಷಾರಹಿತನೂ, ಪವಿತ್ರನೂ, ದಕ್ಷನೂ, ತಟಸ್ಥಭಾವವುಳ್ಳವನೂ, ವ್ಯಥಾರಹಿತನೂ, ಸ್ವಾರ್ಥೋದ್ಯೋಗಗಳಿಲ್ಲದವನೂ, ಹರ್ಷಶೋಕಗಳಿಲ್ಲದವನೂ ರಾಗದ್ವೇಷಗಳಿಲ್ಲದವನೂ (ಬೇಕುಬೇಡೆಂಬುದಿಲ್ಲದವನೂ), ಹಿತಾಹಿತಗಳ ಆಶೆಯನ್ನು ಅಳಿದವನೂ ಆದ ಭಕ್ತನೇ ನನಗೆ (ಪರಮಾತ್ಮನಿಗೆ) ಪ್ರಿಯಕರನು.''—(ಅ. ೧೨)

ಇಷ್ಟೇ ಅಲ್ಲ, ''ಸಮತ್ವವೇ ಯೋಗನೆಂದು ಎನ್ನಿಸಿಕೊಳ್ಳುತ್ತದೆ'' (ಸಮತ್ವಂ ಯೋಗ ಉಚ್ಯತೇ) ಎಂದು ಗೀತೆಯು ಘಂಟಾಘೋಷವಾಗಿ ಹೇಳುತ್ತದೆ. (ಅ. ೨—ಶ್ಲೋ. ೪೮) ಗೀತೆಯ ೫ನೆಯ ಹಾಗೂ ೬ನೆಯ ಅಧ್ಯಾಯಗಳಲ್ಲಿ ಈ ಸಮತ್ವದ ವರ್ಣನೆಯು ಇನ್ನೂ ಹೆಚ್ಚು ಸವಿಸ್ತಾರವಾಗಿದೆ.

ಇವೆಲ್ಲ ಮಾತುಗಳು ಶ್ರೀ ಅರವಿಂದರ ಯೋಗಕ್ಕೂ ಅತ್ಯಾವಶ್ಯಕ. ಅಂತಲೇ ಅವರು ತಮ್ಮ ಅಮೌಲ್ಯಗ್ರಂಥವಾದ ''ಯೋಗದ ತಳಹದಿ'' ಎಂಬುದರಲ್ಲಿ ಇವೆಲ್ಲ ವಿಷಯಗಳನ್ನು ಹಾಗೂ ಇದೇ ಬಗೆಯ ಇನ್ನೂ ಅನೇಕ ವಿಷಯಗಳನ್ನು ಅತ್ಯಂತ ಸವಿಸ್ತಾರವಾಗಿ ವಿವರಿಸಿದ್ದಾರೆ. ಆ ಗ್ರಂಥವು ಶ್ರೀ ಅರವಿಂದರು ತಮ್ಮ ಶಿಷ್ಯರಿಗೆ ಬರೆದ ಪತ್ರಗಳಿಂದ ಸಂಗ್ರಹಿಸಲಾದ ಮುತ್ತು-ರತ್ನಗಳ ನಿಧಿನಿಕ್ಷೇಪವಾಗಿದೆ. ಈ ಗ್ರಂಥದಿಂದ ಒಂದೊಂದು ವಿಷಯಕ್ಕೆ ಸಂಬಂಧಿಸಿದ ಒಂದೊಂದು ಪತ್ರವನ್ನು ಇಲ್ಲಿ ಕನ್ನಡಿಸಿ ಬರೆಯುವೆನು:—

## ೧. ಸ್ಥಿರತೆ, ಶಾಂತಿ, ಸಮತೆ

''ಮನವು ಚಂಚಲವಾಗಿರುವ ವರೆಗೆ ಈ ಯೋಗದ ನೆಲೆಗಟ್ಟನ್ನು ನಿರ್ಮಿಸಿಕೊಳ್ಳುವದು ಅಶಕ್ಯ ವಾಗಿದೆ. ಮನದಲ್ಲಿ ಅಚಂಚಲತೆಯನ್ನು ನೆಲೆಗೊಳಿಸುವದೇ ಪ್ರಥಮಾವಶ್ಯಕತೆಯಾಗಿರುತ್ತದೆ. ಹಾಗೆಯೇ ವೈಯಕ್ತಿಕ ಪ್ರಜ್ಞೆಯನ್ನು ಲಯಗೊಳಿಸುವದು ಈ ಯೋಗದ ಉದ್ದೇಶವಾಗಿಲ್ಲ: ಮೇಲಿನ ಆತ್ಮಿಕ ಪ್ರಜ್ಞೆಯ ಎದುರಿಗೆ (ಕೆಳಗಿನ) ಈ ಪ್ರಜ್ಞೆಯನ್ನು ತೆರೆದಿಡುವದೇ ಪ್ರಮುಖ ಧ್ಯೇಯವಾಗಿದೆ; ಇದಕ್ಕಾದರೂ ಮನದ ಅಚಂಚಲತೆಯೇ ಮುಖ್ಯವಾಗಿ ಆವಶ್ಯಕವಾದದ್ದು.''

x x

''ಸಾಧನೆಯಲ್ಲಿ ಎಲ್ಲಕ್ಕೂ ಮೊದಲಿಗೆ ಸಾಧಿಸಬೇಕಾದ ಮಾತೆಂದರೆ ಮನದಲ್ಲಿ ದೃಢವಾದ ಶಾಂತಿ ಮತ್ತು ನಿಶ್ಶಬ್ದತೆ. ಇಲ್ಲದಿದ್ದರೆ ನಿಮಗೆ ಅನುಭವಗಳು ಬರಬಹುದಾದರೂ ಅವು ಶಾಶ್ವತವಾಗಿ ನಿಲ್ಲುವ ದಿಲ್ಲ. ನಿಶ್ಶಬ್ದ ಮನದಲ್ಲಿಯೇ ಸತ್ಯಪ್ರಜ್ಞೆಯು ಸ್ಥಾಪಿತವಾಗಬಲ್ಲದು............"

x x

''ಸಮತೆಯನ್ನು ಬಿಟ್ಟರೆ ಸಾಧನದ ಗಟ್ಟಿ ತಳಹದಿಯೇ ನಿರ್ಮಿತವಾಗಲಾರದು. ಪರಿಸರವು ಎಷ್ಟೇ ಅಸುಖಕರವಾಗಿಗಲೊಲ್ಲದೇಕೆ, ಪರರ ನಡತೆಯು ನಿಮಗೆ ಎಷ್ಟೇ ಹೊಂದುಗೂಡಲಾರದಂತಹದಿರ ಲೊಲ್ಲದೇಕೆ,--ನೀವು ಅವೆಲ್ಲವುಗಳನ್ನು ಪರಿಪೂರ್ಣ ಸ್ಥಿರತೆಯಿಂದಲೂ, ಯಾವ ಪ್ರತಿಕೂಲ ಪ್ರತಿಕ್ರಿಯೆಯಿಲ್ಲ ದೆಯೂ ಸ್ವಾಗತಿಸುವುದನ್ನು ಕಲಿಯಲಿಕ್ಕೆಬೇಕು. ಇವೆಲ್ಲ ಸಂಗತಿಗಳು ಸಮತೆಯ ಒರೆಗಲ್ಲುಗಳಾಗಿವೆ. ಸರ್ವ ಸಂಗತಿಗಳೂ ಜನರೂ ಪರಿಸ್ಥಿತಿಯೂ ಹಿತಕರವಾಗಿರುವಾಗ ಸ್ಥಿರತೆಯಿಂದಿರುವುದೂ ಸಮತೆಯಿಂದಿ ರುವುದೂ ಸುಲಭವಾಗಿದೆ; ಆದರೆ ಯಾವಾಗ ಅವೆಲ್ಲವುಗಳೂ ವಿರೋಧಕರವಾಗಿರುವವೋ ಆವಾಗಲೇ ಸ್ಥಿರತೆ-ಶಾಂತಿ-ಸಮತೆಗಳ ಸಂಪೂರ್ಣತೆಯು ಪರೀಕ್ಷೆಯಾಗುವದು, ಹಾಗೂ ಇವುಗಳ ಬಲವೂ ಪರಿ ಪೂರ್ಣತೆಯೂ ಹೆಚ್ಚುವವು.''

* *

## ೨. ಶ್ರದ್ಧೆ, ಅಭೀಪ್ಸೆ, ಸಮರ್ಪಣ

''ಈ ಯೋಗವು, ದೈವೀ ಸತ್ಯವನ್ನು ಹುಡುಕಿಕೊಂಡು ಅದನ್ನು ಅರಳಿಸಿಕೊಳ್ಳಬೇಕೆಂಬ ಅಭೀಪ್ಸೆಗೆ ಜೀವನವನ್ನೇ ಸಂಪೂರ್ಣವಾಗಿ ಧಾರೆಯಾಗಿ ಎರೆಯಬೇಕೆಂದೂ, ಇವರ ಹೊರತು ಬೇರೆ ಇನ್ನಾವು ದಿದ್ದರೂ ಅದಕ್ಕೆ ನಿಮ್ಮ ಜೀವನವನ್ನು ನೀಡಬೇಕಾಗಿಲ್ಲವೆಂದೂ ಕೇಳಿಕೊಳ್ಳುತ್ತದೆ. ನಿಮ್ಮ ಜೀವನವನ್ನು ಪರಮಾತ್ಮನಿಗೂ ಮತ್ತು ಮಹಾ ಸತ್ಯದ ಸಂಶೋಧನದೊಡನೆ ಎಷ್ಟೂ ಸಂಬಂಧವಿಲ್ಲದ ಹೊರಗಿನ ಅನ್ಯ ಗುರಿ ಹಾಗು ಕ್ರಿಯಾ-ಕಲಾಪಗಳಿಗೂ ನಡುವೆ ಹರಿದು ಹಂಚಿಕೊಡುವುದಕ್ಕೆ ಈ ಯೋಗವು ಸಮ್ಮತಿಸ ಲಾರದು. ಆ ಪ್ರಕಾರದ್ದು ಎಷ್ಟೇ ಸ್ವಲ್ಪ ಘಟಿಸಿದರೂ ಈ ಯೋಗದಲ್ಲಿ ಗೆಲವನ್ನು ದೊರಕಿಸುವುದು ಅಶಕ್ಯವಿರುತ್ತದೆ.

ನೀವು ನಿಮ್ಮ ಅಂತರ್‌ರಾಜ್ಯದಲ್ಲಿ ಪ್ರವೇಶಿಸಿ ಸಂಪೂರ್ಣವಾಗಿ ಆಧ್ಯಾತ್ಮಿಕ ಜೀವನಕ್ಕೆ ನಿಮ್ಮನ್ನು ನೀಡಲಿಕ್ಕೆ ಬೇಕು. ನೀವು ಯೋಗದಲ್ಲಿ ಗೆಲವನ್ನು ಅಪೇಕ್ಷಿಸುತ್ತಿದ್ದರೆ ಸಮಸ್ತ ಭೌದ್ಧಿಕ ಸ್ವೇಚ್ಛೆಯ

ಅಂಟು ನಿಮ್ಮೊಳಗಿಂದ ಕಳಚಿ ಬೀಳಲಿಕ್ಕೆಬೇಕು; ಪ್ರಾಣಿಕ ಉದ್ದೇಶ-ಅಭಿರುಚಿ-ಆಸಕ್ತಿಗಳ ಮೇಲಿನ ಸಮಸ್ತ ಆಗ್ರಹವು ದೂರಾಗಲಿಕ್ಕೆ ಬೇಕು; ಕುಟುಂಬ, ಮಿತ್ರರು, ದೇಶ ಇವುಗಳ ಮೇಲಿನ ಅಂಹಕಾರಿಕ ಅಂಟು ಅಳಿದು ಹೋಗಲಿಕ್ಕೆ ಬೇಕು. ನಿಮ್ಮೊಳಗಿಂದ ಹೊರಬೀಳುವ ಯಾವುದೇ ಶಕ್ತಿಯಾಗಲಿ ಕೃತಿಯಾಗಲಿ, ಒಮ್ಮೆ ಕಂಡುಕೊಂಡ ಮಹಾಸತ್ಯದಿಂದಲೇ ಪ್ರವಹಿಸಬೇಕಲ್ಲದೆ, ಕೆಳಗಿನ ಮಾನಸಿಕ-ಪ್ರಾಣಿಕ ಉದ್ದೇಶಗಳಿಂದಲ್ಲ; ದೈವೀಮಹಾಸಂಕಲ್ಪದಿಂದ ಪ್ರವಹಿಸಬೇಕಲ್ಲದೆ ವೈಯಕ್ತಿಕ ಅಭಿಪ್ರಾಯದಿಂದಾಗಲಿ ಅಹಂಕಾರಿಕ ಅಭಿರುಚಿಯಿಂದಾಗಲಿ ಅಲ್ಲ"

X X

"ಸಮಸ್ತ ಯಥಾರ್ಥ ಅಭೀಪ್ಸೆಗೆ ಅದರ ಪರಿಣಾಮವಿರುತ್ತದೆ. ನೀವು ಯಥಾರ್ಥ ಹೃದಯರಾಗಿದ್ದುದಾದರೆ, ನೀವು ದೈವೀ ಜೀವನದಲ್ಲಿ ಪ್ರವರ್ಧಿಸುವಿರಿ.

ಸಂಪೂರ್ಣ ಯಥಾರ್ಥ ಹೃದಯರಾಗುವುದೆಂದರ ದೈವೀ ಮಹಾಸತ್ಯವೊಂದನ್ನೇ ಅಪೇಕ್ಷಿಸುವದೆಂದೂ, ಜಗನ್ಮಾತೆಗೆ ನೀವು ನಿಮ್ಮನ್ನು ಹೆಚ್ಚು ಹೆಚ್ಚಾಗಿ ಸಮರ್ಪಿಸುವುದೆಂದೂ, ಈ ಒಂದು ಅಭೀಪ್ಸೆಯ ಹೊರತು ಉಳಿದೆಲ್ಲ ವೈಯಕ್ತಿಕ ಬೇಡಿಕೆ ಹಾಗು ಆಶೆಗಳನ್ನು ಪರಿತ್ಯಜಿಸುವುದೆಂದೂ ಜೀವನದ ಪ್ರತಿಯೊಂದು ಕರ್ಮವನ್ನು ಪರಮಾತ್ಮನಿಗೆ ನೈವೇದ್ಯಗೊಳಿಸಿ ಅಹಂಕಾರವಿಲ್ಲದೆ ಅದು ನಮಗಿತ್ತ ಕರ್ಮವೆಂದು ಅದನ್ನು ನಿರ್ವಹಿಸುವುದೆಂದೂ ಅರ್ಥವಾಗುತ್ತದೆ. ಇದು ತಾನೇ ದೈವೀ ಜೀವನದ ತಳಹದಿಯಾಗಿದೆ.

ಯಾವನೊಬ್ಬನು ಈ ಅವಸ್ಥೆಗೆ ಒಮ್ಮೆಲೆ ಬರಲಾರನು. ಆದರೆ ಯಾವನೊಬ್ಬನು ಸತ್ಯಹೃದಯದಿಂದ ಹಾಗು ನೇರವಾದ ಸಂಕಲ್ಪದಿಂದ ಸದಾ ಸರ್ವದಾ ಅಭೀಪ್ಸೆ ಪಡೆಯುವನಾದರೆ, ಹಾಗೂ ಯಾವಾಗಲೂ ಜಗನ್ಮಾತೆಯ ಸಹಾಯವನ್ನು ಪ್ರಾರ್ಥಿಸುತ್ತಿರುವನಾದರೆ (ಆಹ್ವಾನಿಸುತ್ತಿರುವನಾದರೆ), ಆತನು ಈ ಪ್ರಜ್ಞೆಯಲ್ಲಿ ಹೆಚ್ಚು ಹೆಚ್ಚಾಗಿ ಪ್ರವರ್ಧಿಸುವನು."

* *

## ೩. ಬಿಕ್ಕಟ್ಟಿನಲ್ಲಿ

"ಮೊದಮೊದಲಿನ ಮೆಟ್ಟಲುಗಳಲ್ಲಿ, ಬಿಕ್ಕಟ್ಟುಗಳೂ, ಪ್ರಗತಿಯ ಹೊಯ್ದಾಟವೂ ಯಾವಾಗಲೂ ಇದ್ದೇ ಇರುತ್ತವೆ. ಜೀವವು ಸಿದ್ಧವಾಗುವವರೆಗೆ ಒಳಗಿನ ಬಾಗಿಲುಗಳು ತೆರೆಯುವದಕ್ಕೆ ವಿಲಂಬವಾಗುವುದೂ ಉಂಟು. ಆದರೆ ಯಾವಾಗ ನೀವು ಧ್ಯಾನಸ್ಥರಾಗಿರುವಿರೋ ಆಗ ಶಾಂತಿಯನ್ನೂ ಒಳಗಿನ ಮಹಾಜ್ಯೋತಿಯ ಹೊಳವುಗಳನ್ನೂ ಅನುಭವಿಸುತ್ತಿರುವಿರಾದರೆ, ಹಾಗೂ ಒಳಗಿನ ಎಳೆತವು ಬೆಳೆದಂತೆಯೂ ಹೊರಗಿನ ಹಿಡಿತಗಳು ಸಡಿಲದಂತೆಯೂ ಪ್ರಾಣಿಕ ತೊಂದರೆಗಳ ಶಕ್ತಿಯು ಕಳೆದು ಹೋದಂತೆಯೂ ನಿಮಗೆ ಕಂಡು ಬರುತ್ತಿದ್ದರೆ, ಅದು ನಿಃಸಂಶಯವಾಗಿ ಒಂದು ದೊಡ್ಡ ಪ್ರಗತಿಯೇ ಸರಿ. ಯೋಗದ ಮಾರ್ಗವು ಬಹಳ ದೀರ್ಘತರವಾಗಿದೆ. ಅದರ ಪ್ರತಿಯೊಂದು ಅಂಗುಲ ಭೂಮಿಯನ್ನೂ ನೀವು ಬಹು ಪ್ರತಿಭಟನೆಯ ವಿರೋಧವನ್ನು ಎದುರಿಸಿಯೇ ಗೆದೆಯಬೇಕಾಗುವದು. ಎಲ್ಲ ಬಿಕ್ಕಟ್ಟು, ವಿಲಂಬ, ತೋರಿಕೆಯ ಅಪಜಯಗಳಲ್ಲಿಯೂ ಕೂಡ ಗಟ್ಟಿಮುಟ್ಟಾಗಿ ನಿಲ್ಲುವ ಶ್ರದ್ಧೆಯಿಂದ ಕೂಡಿದ ಒಂದೇ ಮನಸ್ಸಿನ ಜಿಗಟುತನ ಹಾಗೂ ತಾಳ್ಮೆ ಇವೆರಡರ ಹೊರತು ಸಾಧಕನಿಗೆ ಇನ್ನಾವ ಗುಣಗಳೇ ಬೇಕಾಗಿಲ್ಲ"

X X

"ಕಾಳಗವು ಎಷ್ಟೇ ಕಠಿಣತರವಾದದ್ದಾಗಿದ್ದರೂ ಕೊನೆಮುಟ್ಟುವ ವರೆಗೆ ಯಾವಾಗಲೂ ಕಾದು ವುದೊಂದೇ ಮಾತ್ರ ನಿನ್ನ ಕೆಲಸವಾಗಿದೆ. ..........."

## ೪. ಆಶೆ, ಆಹಾರ, ಕಾಮ

"ಎಲ್ಲ ಸಾಮಾನ್ಯ ಪ್ರಾಣಿಕ ಪ್ರವೃತ್ತಿಗಳು ಸತ್ಯಸತ್ತೆಗೆ ಹೊರಗಾದವುಗಳಾಗಿದ್ದು ಅವು ಹೊರಗಿನಿಂದ ಬರುತ್ತವೆ. ಅವು ಅಂತರಾತ್ಮನಿಗೆ ಸಂಬಂಧಿಸಿದವುಗಳೂ ಅಲ್ಲ, ಅವನೊಳಗಿಂದ ಅವು ಹುಟ್ಟುವದೂ ಇಲ್ಲ; ಅವು ವಿಶ್ವಪ್ರಕೃತಿಯ ಅಲೆಗಳಾಗಿರುತ್ತವೆ.

ಆಶೆಗಳು ಹೊರಗಿನಿಂದ ಬಂದು ಪ್ರಾಣದ ಅವಚೇತನ ಭಾಗದಲ್ಲಿ ಸೇರಿ ಹೊರಮಗ್ಗಲಿಗೆ ಪ್ರಕಟವಾಗುವವು. ಅವು ಹೀಗೆ ಹೊರಮಗ್ಗಲಿಗೆ ಬಂದ ಬಳಿಕ ಮಾತ್ರ ಬುದ್ಧಿಗೆ ಅವುಗಳ ಗೊತ್ತು ಹತ್ತುವದು. ಆಗ ನಮಗೆ ಆ ಆಶೆಗಳ (ಇಚ್ಛೆಗಳ) ಬಗೆಗೆ ಅರಿವು ಉಂಟಾಗುವದು. ಅವು ನಮಗೆ ನಮ್ಮವೆಂದೆನಿಸ ತೊಡಗುವದು. ಏಕೆಂದರೆ ಅವು ಹೊರಗಿನಿಂದ ಬಂದದ್ದು ನಮಗೆ ಗೊತ್ತಾಗದೆ ನಮ್ಮ ಪ್ರಾಣದೊಳಗಿಂದಲೇ ಅವು ಎದ್ದು ನಮ್ಮ ಬುದ್ಧಿಗೆ ಗೋಚರವಾದಂತೆ ನಮಗೆ ಅನಿಸುವದು. ನಮ್ಮ ಪ್ರಾಣಕ್ಕೆ ಸಂಬಂಧಿಸಿದ್ದಾಗಲಿ, ನಮ್ಮ ಸತ್ತೆಗೆ ಪ್ರತಿಸ್ಫುರಣಗೊಳ್ಳಹಚ್ಚಿದ್ದಾಗಲಿ ಈ ಆಶೆ (ಇಚ್ಛೆ) ಯಾಗಿರದೆ, ವಿಶ್ವಪ್ರಕೃತಿಯ ಅಲೆಗಳಿಗೆ ಅಥವಾ ಸೂಚನಾಪ್ರವಾಹಗಳಿಗೆ ಪ್ರತಿಸ್ಫುರಣಗೊಳ್ಳುವ ಅದರ (ಸತ್ತೆಯ ಅಥವಾ ಪ್ರಾಣದ) ಪರಿಪಾಠಿಯೇ ಇದಕ್ಕೆ ಕಾರಣವಾಗಿದೆ.

x x

"ಆಹಾರದ ಬಗ್ಗೆ ನಿನ್ನ ತಲೆಗೆ ತೊಂದರೆಕೊಟ್ಟುಕೊಳ್ಳಬೇಡ. ಯಾವ ಆಶೆಬುರುಕತನವಾಗಲಿ ಹೇಯವಾಗಲಿ ಇಲ್ಲದೆ ಸರಿಯಾದ ಪ್ರಮಾಣದಲ್ಲಿ (ತೀರ ಹೆಚ್ಚಲ್ಲದೆ ತೀರ ಕಡಿಮೆಯಿಲ್ಲದೆ) ಅದನ್ನು ಸ್ವೀಕರಿಸು. ದೇಹರಕ್ಷಣೆಗಾಗಿ ಜಗನ್ಮಾತೆ ಅದನ್ನು ದಯಪಾಲಿಸಿದ್ದಾಳೆಂದು ತಿಳಿದು, ಯೋಗ್ಯ ಭಾವನೆಯಿಂದ, ನಿನ್ನೊಳಗಿನ ಪರಮಾತ್ಮನಿಗೆ ಅದನ್ನು ಅರ್ಪಿಸು. ಆಗ ಅದು ನಿನ್ನಲ್ಲಿ ತಮಸ್ಸನ್ನು ಹುಟ್ಟಿಸದು."

x x

"ಸಾಧಕನು ತನ್ನ ಪ್ರಾಣ ಮತ್ತು ದೇಹಗಳಲ್ಲಿ ಕಾಮಪ್ರವೃತ್ತಿಯು ಪ್ರವೇಶಿಸದಂತೆ ಸಂಪೂರ್ಣವಾಗಿ ಅದರಿಂದ ಹಿಂದಕ್ಕೆ ಸರಿದುಕೊಳ್ಳಲಿಕ್ಕೆ ಬೇಕು. ಏಕೆಂದರೆ, ಆತನು ಕಾಮಪ್ರವೃತ್ತಿಯನ್ನು ಜಯಿಸದಿದ್ದರೆ ದೇಹದಲ್ಲಿ ದೈವೀ ಪ್ರಜ್ಞೆಯೂ ದೈವೀ ಮಹದಾನಂದವೂ ನೆಲೆಗೊಳ್ಳಲಾರವು."

* *

## ೫. ಭೌತಿಕಪ್ರಜ್ಞೆ, ಅವಚೇತನ, ನಿದ್ರೆ, ಕನಸು, ಬೇನೆ

"ವಿಜ್ಞಾನಮಯ ಸಿದ್ಧಿಯನ್ನು ಮಾಡಿಕೊಳ್ಳುವದು ನಮ್ಮ ಉದ್ದೇಶವಾಗಿದೆ. ಅದಕ್ಕಾಗಿ ಏನೇನು ಅವಶ್ಯವಿದೆಯೋ ಅದನ್ನೆಲ್ಲ ನಾವು ಮಾಡಬೇಕಾಗಿದೆ. ಮತ್ತು ಪ್ರತಿಯೊಂದು ಮೆಟ್ಟಲಿನ ಸ್ಥಿತಿಗೆ

ಅನುಸರಿಸಿ ಆ ದಿಶೆಯಲ್ಲಿ ಏನೇನು ಅವಶ್ಯವಿದೆಯೋ ಅದನ್ನೆಲ್ಲಾ ನಾವು ಮಾಡಬೇಕಾಗಿದೆ. ಸದ್ಯಕ್ಕೆ ಭೌತ ಪ್ರಜ್ಞೆಯನ್ನು ಸಿದ್ಧಗೊಳಿಸುವುದರ ಆವಶ್ಯಕತೆಯಿದೆ. ಆದರ ಸಲುವಾಗಿ ಪರಿಪೂರ್ಣ ಸಮತೆ ಮತ್ತು ಶಾಂತಿಗಳನ್ನೂ, ವೈಯಕ್ತಿಕ ಬೇಡಿಕೆ ಆಶೆಗಳಿಲ್ಲದ ಸಂಪೂರ್ಣ ಸಮರ್ಪಣವನ್ನೂ ದೇಹ (= ಭೌತಿಕ) ಹಾಗೂ ನಿಮ್ನಪ್ರಾಣಗಳಲ್ಲಿ ನೆಲೆಗೊಳಿಸಬೇಕಾಗಿದೆ. ಉಳಿದೆಲ್ಲ ಮಾತುಗಳು ತಮ್ಮ ಉಚಿತ ಸಮಯಕ್ಕೆ ಕೈಗೂಡಿಬರುವವು. ಭೌತಿಕ (ದೈಹಿಕ) ಪ್ರಜ್ಞೆಯಲ್ಲಿ ಅಂತರಾತ್ಮನನ್ನು (ಚೈತ್ಯಪುರುಷನನ್ನು) ಅರಳಿಸು ವುದು ಹಾಗು ಅವಿರತ ಸಾನ್ನಿಧ್ಯ ಮತ್ತು ಮಾರ್ಗದರ್ಶನಗಳನ್ನು ಅವುಗಳಲ್ಲಿ ಅರಳಿಸುವದು ಇವು ಮಾತ್ರ ಇದೀಗ ಅಗತ್ಯವಾಗಿರುವ ಮಾತುಗಳಾಗಿವೆ.''

X X

"ಅವಚೇತನವು ಸಮಸ್ತ ರೂಢಪ್ರವೃತ್ತಿಗಳಿಗೆ, ಅದರಲ್ಲಿಯೂ ವಿಶೇಷವಾಗಿ ದೈಹಿಕ ಹಾಗು ನಿಮ್ನಪ್ರಾಣಿಕ ಪ್ರವೃತ್ತಿಗಳಿಗೆ ಮುಖ್ಯ ಆಧಾರಸ್ತಂಭವಾಗಿದೆ. ಪ್ರಾಣ ಅಥವಾ ದೇಹದೊಳಗಿಂದ ನಾವು ಏನೇನನ್ನು ಹೊಡೆದೋಡಿಸುವೆವೋ ಅದೆಲ್ಲಾ ಯಾವಾಗಲೂ ಅವಚೇತನದೊಳಗೆ ಹೋಗಿ ಅಲ್ಲಿ ಬೀಜ ರೂಪದಿಂದ ಕುಳಿತುಕೊಳ್ಳುತ್ತದೆ; ಹಾಗೂ ಶಕ್ಯವಾದೊಡನೆ ಮೇಲೆ ಬರುತ್ತದೆ. ಈ ಕಾರಣದಿಂದಲೇ ರೂಢಪ್ರಾಣಿಕ ಪ್ರವೃತ್ತಿಗಳನ್ನು ಹೊಡೆದೋಡಿಸುವುದೂ, ಸ್ವಭಾವವನ್ನು ಬದಲುಮಾಡುವುದೂ ಬಿಕ್ಕಟ್ಟಿನ ದಾಗಿ ಪರಿಣಮಿಸುತ್ತದೆ. ಏಕೆಂದರೆ ಈ ತಳದಿಂದ ಬೆಂಬಲಪಡೆದು, ನವೋನವವಾಗಿ, ನಿಮ್ನ ಪ್ರಾಣ ಪ್ರವೃತ್ತಿಗಳು ಈ ತವರುಮನೆಯಲ್ಲಿ ಕಾದಿಡಲ್ಪಟ್ಟು—ಎಷ್ಟೇ ಹತ್ತಿಕ್ಕಲ್ಪಟ್ಟು ತುಳಿಯಲ್ಪಟ್ಟಾಗಲೂ ಕೂಡ—ಪುನಃ ತಲೆಯೆತ್ತಿ ಹಿಂದಿರುಗಿ ಬರುವವು. ಅವಚೇತನದ ಕಾರ್ಯವು ಯುಕ್ತಿಸಂಗತವಲ್ಲವೂ, ಯಾಂತ್ರಿಕವೂ, ಪುನರಾವೃತ್ತಿಮಯವೂ ಆಗಿರುತ್ತದೆ. ತರ್ಕದ ಇಲ್ಲವೆ ಬೌದ್ಧಿಕ ಸಂಕಲ್ಪದ (ನಿರ್ಧಾರದ) ಮಾತನ್ನು ಇದು ಕೇಳುವದಿಲ್ಲ. ಕೇವಲ ಮೇಲಿನ ಮಹಾಪ್ರಕಾಶ ಹಾಗೂ ಮಹಾಶಕ್ತಿಗಳನ್ನು ಇದರೊ ಳಗೆ ಇಳಿಸುವದರಿಂದ ಮಾತ್ರವೇ ಇದು ಬದಲಾಗಬಲ್ಲದು."

X X

"ನಿದ್ರೆಯು ತಳಹದಿಯು ಅವಚೇತನವಾಗಿರುವದರಿಂದ-ಪ್ರಜ್ಞಾಯುಕ್ತ ನಿದ್ರೆಯಾಗಿರದ ಪಕ್ಷದಲ್ಲಿ ಯಾವಾಗಲೂ ಅದು ಕೆಳಗಿನ ಪಾತಳಿಗೆ ಕೆಡವುತ್ತದೆ. ಹೆಚ್ಚುಹೆಚ್ಚಾಗಿ ಪ್ರಜ್ಞಾಯುತರಾಗುತ್ತಲಿರುವುದೇ ಇದಕ್ಕೆ ಒಂದು ಶಾಶ್ವತ ಉಪಾಯವಿರುತ್ತದೆ. ಆದರೆ ಇದನ್ನು ಸಾಧಿಸುವ ವರೆಗೆ ಈ ಮುಳುಗುವ ಪ್ರವೃತ್ತಿಯ ವಿರುದ್ಧವಾಗಿ ಎಚ್ಚರಾದಾಗಲೆಲ್ಲಾ ಪ್ರತಿರೋಧಿಸುತ್ತಿರಲೇ ಬೇಕು. ಮಬ್ಬಿನ ಇರುಳುಗಳು ಗಟ್ಟಿಗೊಂಡು ಮೂಡುವ ಪರಿಣಾಮಗಳಿಗೆ ಆಸ್ಪದ ಕೊಡಬಾರದು. ಈ ಮಾತುಗಳನ್ನೆಲ್ಲ ಸಾಧಿಸುವುದಕ್ಕೆ ಯಾವಾಗಲೂ ದೃಢಪ್ರಯತ್ನವೂ, ಸಾಧನವೂ ಬೇಕು; ಇದಕ್ಕೆ ಕಾಲವೂ ಹಿಡಿಯುತ್ತದೆ, ಒಮ್ಮೊಮ್ಮೆ ದೀರ್ಘಕಾಲವು ಸಹ ಬೇಕಾಗುತ್ತದೆ. ಶೀಘ್ರ ಪರಿಣಾಮಗಳು ಕಂಡುಬರಲೊಲ್ಲವೆಂಬ ಕಾರಣದಿಂದ ಪ್ರಯತ್ನಕ್ಕೆ ಬೇಸರಿಸ ಬಾರದು."

X X

"ಇದು [ಭಯಸೂಚಕ ಸ್ವಪ್ನರಾಜ್ಯವು] ಕೇವಲ ಇಷ್ಟು ಮಾತ್ರ ತೋರಿಸಿಕೊಡುತ್ತದೆ, ಅದೇನೆಂದರೆ, ನೀನು [ಸ್ವಪ್ನದಲ್ಲಿ] ಪ್ರಾಣಮಯ ಜಗತ್ತಿನಲ್ಲಿ ಹೋಗುತ್ತಿರುತ್ತೀ; ಎಲ್ಲರೂ ಇದನ್ನೇ ಮಾಡುತ್ತಿರುತ್ತಾರೆ. ಮತ್ತು ಪ್ರಾಣಮಯ ಜಗತ್ತು ತುಂಬ ಅಂಥ ಸ್ಥಳಗಳಿಂದಲೂ, ಅನುಭವಗಳಿಂದಲೂ ಕೂಡಿದ್ದಾಗಿರುತ್ತದೆ.

ನೀನು ಮಾಡಬೇಕಾದುದು ಅದರೊಳಗೆ ಹೋಗುವುದನ್ನು ತಪ್ಪಿಸಿಕೊಳ್ಳುವ ಕೆಲಸವಲ್ಲ, ಏಕೆಂದರೆ ಹಾಗೆ ತಪ್ಪಿಸಿಕೊಳ್ಳಲಿಕ್ಕೆ ಅಶಕ್ಯವಿರುತ್ತದೆ. ಈ ಅತಿಭೌತಿಕ ನಿಸರ್ಗದ ಪ್ರದೇಶಗಳ ಮೇಲೆ ನಿನಗೆ ಪ್ರಭುತ್ವ ವುಂಟಾಗುವ ವರೆಗೆ ನೀನು ಪೂರ್ಣ ರಕ್ಷಣೆಯನ್ನು ಸಂಗಡ ತೆಗೆದುಕೊಂಡು ಹೋಗುವ ಕೆಲಸವನ್ನು ಮಾಡಬೇಕು. ನಿದ್ರೆ ಹೋಗುವದಕ್ಕಿಂತ ಮುಂಚೆ ನೀನು ಜಗನ್ಮಾತೆಯನ್ನು ಸ್ಮರಿಸುವುದೂ [ಆ ತಾಯಿಯ] ಮಹಾಶಕ್ತಿಗೆ ನಿನ್ನನ್ನು ತೆರೆದಿಡುವುದೂ ಏಕೆ ಆವಶ್ಯವಾಗಿದೆಯೆಂಬುದಕ್ಕೆ ಕಾರಣವು ಇದೇ ಇರುತ್ತದೆ. ನಿನಗೆ ಇದು ಹೆಚ್ಚು ಹೆಚ್ಚಾಗಿ ರೂಢಿಯಾದ ಹಾಗೆಲ್ಲ ನಿನ್ನ ಸಂಗಡ ಹೆಚ್ಚು ಹೆಚ್ಚಾಗಿ ರಕ್ಷಣೆಯು ಬರುತ್ತದೆ.''

X X

''ಬೇನೆಯು ಭೌತ ಪ್ರಕೃತಿಯಲ್ಲಿ [ದೈಹಿಕ ಪ್ರಕೃತಿಯಲ್ಲಿ] ಕೆಲವೊಂದು ಅಪೂರ್ಣತೆಯಾಗಲಿ, ದುರ್ಬಲತೆಯಾಗಲಿ, ಅದೈವೀಶಕ್ತಿಗಳ ಸ್ಪರ್ಶಕ್ಕೆ ತೆರೆದಿಡುವಿಕೆಯಾಗಲಿ ಇವೆಯೆಂದು ಸೂಚಿಸುತ್ತದೆ. ಅಥವಾ ನಿಮ್ಮ ಪ್ರಾಣದೊಳಗಿನ, ಅಥವಾ ಭೌತ ಮನದೊಳಗಿನ, ಇಲ್ಲವೆ ಇನ್ನಾವುದರದೋ ಒಳಗಿನ ಅಸಾಮರಸ್ಯದೊಡನೆ ಅಥವಾ ಅಂಧಕಾರದೊಡನೆ ಅದರ [ಭೌತ ಪ್ರಕೃತಿಯ] ಸಂಬಂಧವುಂಟಾಗಿದೆಯೆಂದು ಯಾವಾಗಲೂ ಸೂಚಿತವಾಗುತ್ತಿರುತ್ತದೆ.

ಶ್ರದ್ಧೆಯ ಬಲದಿಂದಾಗಲಿ, ಯೋಗಶಕ್ತಿಯಿಂದಾಗಲಿ, ಅಥವಾ ದೈವೀ ಮಹಾಶಕ್ತಿಯ ಅಂತಃಪ್ರವೇಶ ದಿಂದಾಗಲಿ ರೋಗವನ್ನು ಸಂಪೂರ್ಣವಾಗಿ ಹೊಡೆದೋಡಿಸಲಿಕ್ಕೆ ಶಕ್ಯವಾದರೆ ಬಹಳ ಒಳ್ಳೆಯದೇ ಸರಿ. ಆದರೆ ಯಾವಾಗಲೂ ಇದು ಶಕ್ಯಕರವಾಗಿರುವದಿಲ್ಲ. ಏಕೆಂದರೆ ಸಮಸ್ತ ಪ್ರಕೃತಿಯು ಮಹಾಶಕ್ತಿಯೆಡೆಗೆ ಉನ್ಮುಕ್ತವಾಗಿರುತ್ತಿರುವದಿಲ್ಲ, ಅಥವಾ ಆದಕ್ಕೆ ಪ್ರತಿಸ್ಫುರಣ ಕೊಡಲು ಅಸಮರ್ಥವಾಗಿರುತ್ತದೆ.............................ಇಂಥ ಸಂದರ್ಭಗಳಲ್ಲಿ ಭೌತಿಕ ಉಪಾಯಗಳನ್ನು ಯೋಜಿಸಲಿಕ್ಕೆ ಅಡ್ಡಿಯಿಲ್ಲ; ಆದರೆ ಮುಖ್ಯ ಉಪಾಯವೆಂದಲ್ಲ, ಮಹಾಶಕ್ತಿಯ ಕ್ರಿಯೆಗೆ ಭೌತಿಕ ಸಹಾಯವೆಂದು, ಪೋಷಕವೆಂದು ಮಾತ್ರ. ಆದರೆ ಅತಿಶಯ ತೀಕ್ಷ್ಣ ಔಷಧಗಳನ್ನು ಉಪಯೋಗಿಸಬಾರದು. ದೇಹಕ್ಕೆ ಯಾವ ತೊಂದರೆಯನ್ನೂ ಕೊಡ ದಂಥ ಹಿತಕರ ಔಷಧಗಳನ್ನು ಉಪಯೋಗಿಸಬೇಕು."

* *

## ಉಪಸಂಹಾರ

ಜ್ಞಾನಯೋಗ, ಭಕ್ತಿಯೋಗ, ಕರ್ಮಯೋಗಗಳ ಸಿದ್ಧಾಂತಗಳನ್ನು ಜೀವನದಲ್ಲಿ ನಡೆಯಿಸಿ ಮುಗಿಸಿದ ಮೇಲೆ ನಮ್ಮೊಳಗಿನ ಅಂತರಾತ್ಮನು ಅರಳುವದರಿಂದ ಆ ಮೇಲೆ ಅವನ ಸಹಾಯದಿಂದ ನಮ್ಮ ದೇಹ-ಪ್ರಾಣ-ಮನಗಳ (ಗೀತೆಯ ಪರಿಭಾಷೆಯಲ್ಲಿ ಇಂದ್ರಿಯ-ಮನ-ಬುದ್ಧಿಗಳ) ದೋಷಗಳನ್ನು ಆಮೂಲಾಗ್ರ ವಾಗಿ ನಮ್ಮ ಪ್ರಕೃತಿಯೊಳಗಿಂದ ಕಿತ್ತಿಹಾಕಲಿಕ್ಕೆ ಶಕ್ಯವಾಗುವದು. ಆದುದರಿಂದ ಗೀತೆಯೊಳಗಿನ ಈ ತ್ರಿಮಾರ್ಗಸಮನ್ವಯವನ್ನು ಅಥವಾ ಶ್ರೀ ಅರವಿಂದರ ''ಯೋಗಪ್ರದೀಪ (Lights on Yoga)'' ದೊಳಗಿನ ಜ್ಞಾನ-ಭಕ್ತಿ-ಕರ್ಮ ಸಮನ್ವಯವನ್ನು ಇದರ ಜೊತೆಜೊತೆಗೇ ಅನುಸರಿಸುತ್ತ ನಾವೀ ದಾರಿಯಲ್ಲಿ ಪ್ರಯತ್ನಿಸುವುದೊಳ್ಳೆಯದೆಂದು ಬೇರೆ ಹೇಳಬೇಕಾಗಿಲ್ಲ.

ಸಮರ್ಪಣ

ಹೀಗೆ "ಯೋಗಪ್ರದೀಪ" ಮತ್ತು "ಯೋಗದ ತಳಹದಿ" ಎಂಬ ಎರಡು ಗ್ರಂಥರತ್ನಗಳಲ್ಲಿ ಶ್ರೀ ಅರವಿಂದರ ಯೋಗದ ಆರಂಭದ "ಸಾಧನ ಚತುಷ್ಟಯ"ವು ವಿಸ್ತಾರವಾಗಿ ವಿವರಿಸಲ್ಪಟ್ಟಿದೆಯೆಂಬುದನ್ನು ವಾಚಕರ ನೆನಪಿಗೆ ತಂದುಕೊಡಬಯಸುತ್ತೇನೆ. ಈ ಎರಡು ಗ್ರಂಥಗಳನ್ನು ಇಂಗ್ಲಿಷ್ ಅಥವಾ ಹಿಂದಿಯಲ್ಲಿ ನೋಡಿಕೊಂಡು ಆರಂಭದ ಈ "ಸಾಧನ ಚತುಷ್ಟಯ"ದ ಬಗೆಗೆ ವಿವರವಾಗಿ ತಿಳಿದುಕೊಳ್ಳಬೇಕೆಂದು ಬಿನ್ನಹ. ಭಗವದ್ಗೀತೆಯ ಪುರಾತನವಾಣಿಯುಲ್ಲಿಯೂ ಈ ವಿಷಯವನ್ನು ಕಾಣಬಹುದು. ಶ್ರೀ ಅರವಿಂದರ ಯೋಗದ ಮುಂದಿನ ಸಾಧನಗಳು ಇದರಿಂದ ಮುಂದುವರಿಯುವವೆಂಬುದನ್ನು ಸೂಚಿಸಿ ಪ್ರಸ್ತುತ ಲೇಖನವನ್ನು ಮುಗಿಸುತ್ತೇನೆ.

॥ ಓಂ ಶ್ರೀ ಓಂ ॥

ಜಗತ್ತಿನ ತಾಯಿತಂದೆಗಳ
ಶ್ರೀ ಚರಣಗಳಲ್ಲಿ ಅನಂತಪ್ರಣಾಮಗಳು

ಜಗತಃ ಪಿತರೌ ವಂದೇ
ಪರಮೇಶ್ವರೀ ಪರಮೇಶ್ವರೌ.

—ಶ್ರೀ ಮಾತೃಶ್ರೀಚರಣಾಶ್ರಿತ ಶಿಶು—

**ಮಧುರಚೆನ್ನ, ಹಲಸಂಗಿ**

Those who do work for the Mother in all sincerity are prepared by the work itself for the right consciousness even if they do not sit down for meditation or follow any particular practice of Yoga. It is not necessary to tell you how to meditate; Whatever is needful will come of itself, if in your work and at all times you are sincere and keep yourself open to the Mother.

—*Sri Aurobindo*

ಮಾತೆಗಾಗಿ ಯಾರು ಶುದ್ಧಾಂತಃಕರಣದಿಂದ ಕೆಲಸ ಮಾಡುವರೋ ಅವರು ಧ್ಯಾನಕ್ಕೆಂದು ಕೂತಿರದಿದ್ದರೂ, ಯಾವ ನಿರ್ದಿಷ್ಟ ಯೋಗಪದ್ಧತಿಯನ್ನನುಸರಿಸದಿದ್ದರೂ, ಕೇವಲ ಆ ಕೆಲಸದ ಮೂಲಕವೇ ಸರಿಯಾದ ಪ್ರಜ್ಞೆಗೆ ಪಾತ್ರರಾಗುವರು. ಹೇಗೆ ಧ್ಯಾನಮಾಡಬೇಕೆಂಬುದನ್ನು ನಿನಗೆ ಹೇಳುವದು ಅಗತ್ಯವಿಲ್ಲ; ನಿನ್ನ ಕೆಲಸದಲ್ಲಿ ಮತ್ತು ಸದಾ ನೀನು ನಿಷ್ಠೆಯಿಂದ ಕೂಡಿ ಮಾತೆಗೆ ನಿನ್ನನ್ನು ತೆರವಿಟ್ಟುಕೊಂಡು ದಾಪರೆ ಏನು ಅವಶ್ಯವಿದೆಯೋ ಅದು ತಾನಾಗಿಯೇ ಒದಗಿ ಬರುವದು.

**—ಶ್ರೀ ಅರವಿಂದರು**

# ಉತ್ತರಪರಾ ಉಪನ್ಯಾಸ

(ಕಲಕತ್ತೆಯಲ್ಲಿ ನಡೆದ 'ಅಲಿಪುರ ಬಾಂಬ ಪ್ರಕರಣ' ದಿಂದ ೧೯೦೯ ರಲ್ಲಿ ಶ್ರೀ ಅರವಿಂದರು ಬಿಡುಗಡೆ ಯಾದೊಡನೆಯೆ ಕಲಕತ್ತೆಯ ಒಂದು ಉಪನಗರವಾದ ಉತ್ತರಪರಾದಲ್ಲಿ ಅಲ್ಲಿಯ 'ಧರ್ಮರಕ್ಷಿಣೀ ಸಭಾ' ಎಂಬ ಸಂಸ್ಥೆಯ ವಾರ್ಷಿಕ ಸಭೆಯಲ್ಲಿ ಮಾಡಿದ ಸುಪ್ರಸಿದ್ಧ ಭಾಷಣ.)

ನಿಮ್ಮ ವಾರ್ಷಿಕ ಸಭೆಯಲ್ಲಿ ನನಗೆ ಮಾತನಾಡಲು ಕೇಳಿದಾಗ, ಈ ದಿನದ ವಿಷಯವೆಂದು ಹಿಂದೂ ಧರ್ಮದ ವಿಚಾರವಾಗಿ ಕೆಲವು ಮಾತುಗಳನ್ನಾಡಬೇಕೆಂಬುದೇ ನನ್ನ ಉದ್ದೇಶವಾಗಿತ್ತು. ಇದೀಗ ಆ ಉದ್ದೇಶ ವನ್ನು ಈಡೇರಿಸುವೆನೋ ಇಲ್ಲವೋ ನನಗೇ ತಿಳಿಯದಾಗಿದೆ. ಏಕೆಂದರೆ, ನಾನಿಲ್ಲಿ ಕುಳಿತಾಗಲೇ, ನಿಮಗೆ ಹೇಳಬೇಕಾದ ಒಂದು ಮಾತು ನನ್ನ ಮನದಲ್ಲಿ ಒಡಮೂಡಿತು. ಅದನ್ನೇ ನಾನು ಸಮಸ್ತ ಭಾರತರಾಷ್ಟ್ರಕ್ಕೂ ಹೇಳಬೇಕಾಗಿದೆ. ನಾನು ಸೆರೆಮನೆಯಲ್ಲಿದ್ದಾಗ ಮೊಟ್ಟಮೊದಲಿಗೆ ಅಂತರ್ವಾಣಿಯನ್ನು ಕೇಳಿದೆನು. ಅದನ್ನೇ ನನ್ನ ಜನರಿಗೆ ಹೇಳಬೇಕೆಂದು ನಾನು ಸೆರೆಮನೆಯಿಂದ ಹೊರಗೆ ಬಂದಿರುವೆ.

ನಾನು ಹಿಂದೊಮ್ಮೆ ಇಲ್ಲಿಗೆ ಬಂದಿದ್ದೆ. ಅಂದಿಗೂ ಇಂದಿಗೂ ನಡುವೆ ವರ್ಷಕ್ಕಿಂತ ಹೆಚ್ಚು ಅವಧಿ ಸಂದು ಹೋಯಿತು. ಆಗ ನಾನು ಒಬ್ಬನೇ ಬಂದಿದ್ದಿಲ್ಲ. ಆಗ ನನ್ನ ಬದಿಯಲ್ಲಿ ಕುಳಿತವರು ರಾಷ್ಟ್ರ ಧರ್ಮದ ಶ್ರೇಷ್ಠ ಪ್ರವಾದಿಗಳಲ್ಲೊಬ್ಬರು. ಆಗ ಅವರು ಅದೇ ಸೆರೆಮನೆಯ ಏಕಾಂತವಾಸದಿಂದ ಹೊರಬಂದಿದ್ದರು. ಸೆರೆಮನೆಯ ಆ ಶಾಂತ ಏಕಾಂತದ ಕೋಣೆಯಲ್ಲಿ ಅವರು ಭಗವಂತನ ವಾಣಿಯನ್ನುಕೇಳಿ ಅದನ್ನು ಲೋಕಕ್ಕೆ ಹೇಳಬೇಕೆಂದೇ ಅದೇ ಭಗವಂತನು ಅವರನ್ನು ಅಲ್ಲಿಗೆ ಕಳಿಸಿದ್ದ. ಅವರನ್ನು ಸ್ವಾಗತಿಸಲು ಅಂದು ನೀವು ನೂರುಗಟ್ಲೆ ಜನ ಬಂದಿದ್ದಿರಿ. ಇದೀಗ ಅವರು ನಮ್ಮಿಂದ ಬಹು ದೂರದಲ್ಲಿದ್ದಾರೆ; ಸಾವಿರಾರು ಮೈಲುಗಳಾಚೆ ಇದ್ದಾರೆ. ನನ್ನ ಪರಿಚಯದ ಜೊತೆಯ ಕಾರ್ಯಕರ್ತರೆಲ್ಲರು ಇಂದು ನನ್ನೊಡನೆ ಇಲ್ಲ. ದೇಶದ ತುಂಬೆಲ್ಲ ಬೀಸಿದ ಬಿರುಗಾಳಿ ಅವರನ್ನೆಲ್ಲಾ ದೂರ-ಬಹುದೂರ ಚೆದುರಿಸಿದೆ. ಈ ಸಲ ನಾನೂ ಒಂದು ವರ್ಷ ಏಕಾಂತವಾಸದಲ್ಲಿ ಕಳೆದೆ. ಈಗ ಹೊರಗೆ ಬಂದು ನೋಡುತ್ತೇನೆ, ಎಲ್ಲವೂ ಬದಲಾಗಿದೆ. ನನ್ನೊಡನೆ ಸದಾ ಸರ್ವದಾ ಇರುತ್ತಿದ್ದು ನನ್ನ ಕಾರ್ಯದಲ್ಲಿ ಸಹಭಾಗಿಗಳಾದಂಥವರಲ್ಲಿ ಒಬ್ಬರು ಇಂದು ಬ್ರಹ್ಮದೇಶದಲ್ಲಿ ಬಂದಿಯಾಗಿದ್ದಾರೆ. ಇನ್ನೊಬ್ಬರು ಉತ್ತರದ ಸೆರೆಮನೆಯೊಂದರಲ್ಲಿ ಸ್ಥಾನಬದ್ಧರಾಗಿ ಕೊಳೆಯುತ್ತಿದ್ದಾರೆ. ನಾನು ಹೊರಗೆ ಬಂದಬಳಿಕ ಸುತ್ತೆಲ್ಲ ನಿಟ್ಟಿಸಿದೆ. ಸಲಹೆ-ಸ್ಫೂರ್ತಿಗಳಿಗಾಗಿ ಸದೈವ ನಾನು ಯಾರ ಬಳಿ ಹೋಗುತ್ತಿದ್ದೆನೋ ಅವರೆಲ್ಲಾ ಎಲ್ಲಿರುವರೆಂದು ಸುತ್ತಲೂ ನೋಡಿದೆ. ಅವರಾರೂ ಕಾಣಲಿಲ್ಲ. ಇಷ್ಟೇ ಅಲ್ಲ, ಪರಿಸ್ಥಿತಿಯಲ್ಲಿ ಮಹದಂತರವಾಗಿತ್ತು. ನಾನು ಸೆರೆಮನೆ ಕಂಡಾಗ ರಾಷ್ಟ್ರವೆಲ್ಲಾ 'ವಂದೇ ಮಾತರಂ' ಮಂತ್ರಘೋಷದಿಂದ ಸಜೀವವಾಗಿತ್ತು. ನವ ರಾಷ್ಟ್ರದ ನವ ಆಶೆ ಆ ಮಂತ್ರದಲ್ಲಿತ್ತು. ಅವಮಾನ-ಅವನತಿ ಗಳನ್ನು ಕೊಡಹಿ ಅದೇ ಎಚ್ಚತ್ತ ಕೋಟಿ ಕೋಟಿ ಜನಗಳ ಉಜ್ಜ್ವಲ ಆಶೆ ಆ ಜಯಜಯಕಾರದಲ್ಲಿತ್ತು. ನಾನು ಸೆರೆಮನೆಯಿಂದ ಹೊರಬಂದ ಮೇಲೆ ಆ ಜಯಧ್ವನಿ ಕೇಳಬೇಕೆಂದೆ. ಆ ಧ್ವನಿ ಕೇಳಿಸಲಿಲ್ಲ. ಅದರ ಸ್ಥಳದಲ್ಲಿ ನೀರವತೆ ನೆಲಿಸಿತ್ತು. ರಾಷ್ಟ್ರವನ್ನೆಲ್ಲಾ ಗಾಢ ನೀರವತೆ ಆವರಿಸಿತ್ತು; ಜನರೆಲ್ಲಾ ಕಂಗೆಟ್ಟಂತೆ

ಕಂಡಿತು. ಭವಿಷ್ಯತ್ತಿನ ಭವ್ಯದರ್ಶನದಿಂದೊಡಗೂಡಿದ ಉಜ್ಜ್ವಲವಾದ ದೈವೀ ಸ್ವರ್ಗವೊಂದನ್ನು ನಾವು ಕಾಣುವೆವೆಂದು ತಿಳಿದಾಗ, ಮಾನವನೊಳಗಿನ ಗುಡುಗು–ಕೋಲ್ಮಿಂಚುಗಳ ಸುರಿಮಳೆಯನ್ನೇ ಸುರಿಸುವ ಕಾರ್ಮೋಡಗಳಿಂದ ಭಾರವಾದ ಆಕಾಶದ ಭಯದಾಯಕ ದೃಶ್ಯವು ಕಣ್ಣೆದುರು ಕಂಡಂತಾಯ್ತು. ಯಾವ ದಾರಿಯಿಂದ ಮುನ್ನಡೆಯಬೇಕೆಂಬುದು ಯಾರೊಬ್ಬರಿಗೂ ತಿಳಿಯದಂತಾಯ್ತು. "ನಾವು ಮುಂದೇನು ಮಾಡ ಬೇಕು? ಏನು ಮಾಡಬಲ್ಲೆವು?" ಎಂಬ ಪ್ರಶ್ನೆ ಎಲ್ಲೆಡೆಗಳಿಂದಲೂ ಕೇಳಬರತೊಡಗಿತು. ನನಗೂ ಕೂಡ ಯಾವದಾರಿ ಹಿಡಿಯಬೇಕೆಂಬುದೇ ತೋಚದಾಯ್ತು. ಮುಂದೇನು ಮಾಡಬೇಕೆಂಬುದು ನನಗೂ ತಿಳಿಯ ಲಿಲ್ಲ. ಆದರೆ ಒಂದು ವಿಷಯ ನನಗೆ ತಿಳಿದಿತ್ತು: ಮುಂಚಿನ ಆ ಜಯ ಜಯಕಾರ–ಆ ಆಶೆಗಳನ್ನು ಭಗವಂತನ ಆ ಸರ್ವಸಮರ್ಥಶಕ್ತಿಯೇ ಎತ್ತರಕ್ಕೆ ಏರಿಸಿದ್ದರಿಂದ ಅದೇ ಶಕ್ತಿಯೇ ಈ ನೀರವತೆಯನ್ನು ಕೆಳಗೆ ಕಳುಹಿದೆ ಎಂದು. ಆ ಜಯಜಯಕಾರ–ಆ ಅಂದೋಲನಗಳಲ್ಲಿ ಇದ್ದ ಭಗವಂತನೇ ಈ ನಿಧಾನ–ಈ ನೀರ ವತೆಗಳಲ್ಲೂ ಉಂಟು. ಸಮಸ್ತ ರಾಷ್ಟ್ರವು ಒಂದು ಕ್ಷಣವಾದರೂ ನಿಂತು ನಿಧಾನಿಸಿ ಅಂತರ್ಮುಖವಾಗಿ ಈಶ್ವರೇಚ್ಛೆಯನ್ನು ಅರಿತುಕೊಳ್ಳಬೇಕೆಂದೇ ಆತ ನಮ್ಮೆಲ್ಲರತ್ತ ಈ ನೀರವತೆ ಕಳುಹಿದ್ದಾರೆ. ನಾನೇನೂ ಈ ನೀರವತೆಯಿಂದ ಎದೆಗುಂದಿಲ್ಲ. ಏಕೆಂದರೆ ಸೆರೆಮನೆಯ ವಾಸದಿಂದ ಏಕಾಂತ–ಮೌನಗಳ ಅಭ್ಯಾಸವಾಗಿ ಬಿಟ್ಟಿದೆ. ನನ್ನ ದೀರ್ಘ ವರ್ಷದ ಸ್ಥಾನಬದ್ಧತೆಯ ಅವಧಿಯಲ್ಲಿ ಈ ನಿಧಾನ– ನೀರವತೆಗಳ ಮೂಲಕವೇ ನಾನು ಮೌನದ ಪಾಠವನ್ನು ಕಲಿತೆನೆಂಬುದು ನನಗೆ ಗೊತ್ತಿತ್ತು. ಬಿಪಿನಚಂದ್ರ ಪಾಲರು ಸೆರೆಮನೆಯಿಂದ ಹೊರಬರುವಾಗ ಒಂದು ಸಂದೇಶ ತಂದರು. ಆ ಸಂದೇಶ ಚೈತನ್ಯದಾಯಕವಾಗಿತ್ತು. ನನಗೆ ನೆನಪಿದೆ, ಅವರು ಅಂದು ಇಲ್ಲಿ ಮಾಡಿದ ಭಾಷಣ. ಆ ಭಾಷಣದ ಸ್ವರೂಪ ಮತ್ತು ಉದ್ದೇಶ ರಾಜಕೀಯವಾಗಿರದೆ ಹೆಚ್ಚಾಗಿ ಧಾರ್ಮಿಕವಾಗಿದ್ದವು. ನಮ್ಮೆಲ್ಲರಲ್ಲಿಯೂ ಇರುವ ಭಗವಂತನ, ರಾಷ್ಟ್ರದಲ್ಲಿ ಅಂತರ್ಗತನಾಗಿರುವ ಪರಮಾತ್ಮನ ಸಾಕ್ಷಾತ್ಕಾರವು ತಮಗೆ ಕಾರಾಗೃಹದಲ್ಲಿ ಆದುದರ ಬಗೆಗೆ ಅವರು ಅಂದು ಮಾತನಾಡಿದರು. ಹಾಗು ಅನಂತರದ ಅವರ ಭಾಷಣ ಗಳಲ್ಲಿ ಅವರು ಆಂದೋಲನದಲ್ಲಿ ಸಾಮಾನ್ಯಶಕ್ತಿಗಿಂತಲೂ ಹೆಚ್ಚಿನದೊಂದು ಶಕ್ತಿಯುಂಟೆಂದೂ ಸಾಮಾನ್ಯ ಉದ್ದೇಶಕ್ಕಿಂತಲೂ ಹೆಚ್ಚಿನದೊಂದು ಉದ್ದೇಶವುಂಟೆಂದೂ ಹೇಳುತ್ತಿದ್ದರು. ಈಗ ನಾನೂ ನಿಮ್ಮೆಲ್ಲರ ಭೆಟ್ಟಿಗೆ ಪುನಃ ಬಂದಿದ್ದೇನೆ. ನಾನೂ ಸೆರೆಮನೆಯಿಂದ ಹೊರಗೆ ಬಂದಿದ್ದೇನೆ. ಹಾಗು ಪುನಃ ಮೊಟ್ಟಮೊದಲಿಗರಾಗಿ ಉತ್ತರಪರಾದವರಾದ ನೀವೇ ನನ್ನನ್ನು ಸ್ವಾಗತಿಸಿದ್ದೀರಿ. ನಾನು ಮಾತನಾಡುತ್ತಿರುವುದು ಯಾವೊಂದು ರಾಜ ಕೀಯ ಸಭೆಯಲ್ಲಿ ಅಲ್ಲ, ಆದರೆ ನಮ್ಮ ಧರ್ಮರಕ್ಷಣೆಗಾಗಿ ಇದ್ದ ಒಂದು ಸಂಸ್ಥೆಯ ವಾರ್ಷಿಕ ಸಭೆಯಲ್ಲಿ. ಭಗವಂತನು ಬಕ್ಸಾರ ಜೇಲಿನಲ್ಲಿ ಬಿಪಿನಚಂದ್ರ ಪಾಲರಿಗಿತ್ತ ಸಂದೇಶವನ್ನೆ ನನಗೆ ಅಲೀಪುರ ಜೇಲಿನಲ್ಲಿ ದಯಪಾಲಿಸಿದ. ಆ ಜ್ಞಾನವನ್ನು ಅವನು ನನ್ನ ಬಂಧನದ ಹನ್ನೆರಡು ತಿಂಗಳೂ ಅನುದಿನವೂ ನನಗಿತ್ತ. ಇದೀಗ ನಾನು ಕಾರಾಗೃಹದಿಂದ ಹೊರಬಂದಿದ್ದು, ಆತ ಆಜ್ಞೆ ವಿಧಿಸಿದಂತೆ ಆತನ ಸಂದೇಶವನ್ನು ನಿಮಗೆ ನಾನಿಂದು ಹೇಳುತ್ತಿದ್ದೇನೆ.

ನಾನು ಕಾರಾಗೃಹದಿಂದ ಹೊರಬರುವೆನೆಂದು ನನಗೆ ತಿಳಿದಿತ್ತು. ಸ್ಥಾನಬದ್ಧತೆಯ ಒಂದು ವರ್ಷವೆಂದರೆ ಏಕಾಂತ ಮತ್ತು ಸಾಧನೆಯ ಒಂದು ವರ್ಷವಾಗಿತ್ತು. ಪರಮಾತ್ಮನ ಉದ್ದೇಶಕ್ಕಾಗಿ ಅವಶ್ಯ ವಿದ್ದ ಅವಧಿಗಿಂತ ಹೆಚ್ಚು ಕಾಲ ನನ್ನನ್ನು ಬಂಧಿಸಿಡುವದು ಯಾರಿಗೆ ತಾನೇ ಸಾಧ್ಯ? ಹೇಳಬೇಕಾದ ಒಂದು ಮಾತನ್ನೂ ಮಾಡಬೇಕಾದ ಒಂದು ಕಾರ್ಯವನ್ನೂ ಆತನು ನನಗೆ ದಯಪಾಲಿಸಿದ ಆ ಮಾತು ಆಡದ ವರೆಗೂ ಯಾವ ಮಾನವಶಕ್ತಿಯೂ ನನ್ನನ್ನು ತಡೆಯಲಾರದು; ಭಗವಂತನ ಉಪಕರಣವು ಎಷ್ಟೇ ನಿರ್ಬಲವಿರಲಿ, ಎಷ್ಟೇ ಸಣ್ಣದಿರಲಿ, ಅದರಿಂದಾಗಬೇಕಾದ ಆ ಕಾರ್ಯ ಆಗಿ ಮುಗಿಯುವ ವರೆಗೂ ಯಾವ ಮಾನವಶಕ್ತಿಯೂ ಅದನ್ನು ತಡೆಯಲಾರದು—ಎಂಬುದು ನನಗೆ ಗೊತ್ತಿತ್ತು. ನಾನು ಇದೀಗ

ಹೊರಬಂದಿದ್ದು, ಈ ಕೆಲ ನಿಮಿಷಗಳಲ್ಲಿಯೇ ಒಂದು ಮಾತು ನನಗೆ ಸೂಚಿತವಾಗುತ್ತಿದೆ. ಇದನ್ನಾಡ ಬೇಕೆಂದು ಮೊದಲು ನಾನು ಇಚ್ಛಿಸಿರಲಿಲ್ಲ. ಮೊದಲು ನನ್ನ ಮನಸ್ಸಿನಲ್ಲಿದ್ದುದನ್ನು ಆತನೇ ಕಿತ್ತು ಹೊರ ಗೆಸೆದಿದ್ದಾನೆ. ಒಂದು ಬಗೆಯ ಆವೇಶಕ್ಕೂ ಆವೇಗಕ್ಕೂ ಒಳಗಾಗಿ ನಾನೀಗ ಮಾತನಾಡುತ್ತಿದ್ದೇನೆ.

ನನ್ನನ್ನು ಬಂಧಿಸಿ ಲಾಲಬಝಾರ ಹಜತ್‌ಕ್ಕೆ ಅವಸರದಿಂದ ಕರೆದೊಯ್ಯುತ್ತಿರುವಾಗ ನನ್ನ ಶ್ರದ್ಧೆ ಕೆಲ ಕಾಲ ತತ್ತರಿಸಿತು. ಏಕೆಂದರೆ ಆತನ ಉದ್ದೇಶದ ಆಳವನ್ನು ಕಾಣಲು ನಾನು ಅಸಮರ್ಥನಾಗಿದ್ದೆ. ಆದ್ದರಿಂದ ಕ್ಷಣಮಾತ್ರ ನಾನು ಚಲವಿಚಲನಾಗಿ ನನ್ನ ಹೃದಯದ ಆಳದಲ್ಲಿದ್ದ ಆತನನ್ನು ಕೂಗಿ ಕೇಳಿದೆ: "ಇದೇನು? ಹೀಗೇಕಾಯ್ತು ನನಗೆ? ನನ್ನ ದೇಶಬಾಂಧವರಿಗಾಗಿ ನಾನು ಮಾಡಬೇಕಾದ ಒಂದು ಕಾರ್ಯ ವಿದೆಯೆಂದೂ ಆ ಕಾರ್ಯ ಮುಗಿಯುವ ವರೆಗೆ ನಿನ್ನ ರಕ್ಷಣೆ ನನಗುಂಟೆಂದೂ ನಾನು ನಂಬಿದ್ದೆ. ಆದರೆ ಈಗ ಇಲ್ಲಿ ಇಂಥ ಆರೋಪದೊಂದಿಗೆ ನಾನು ಇರುವುದೇಕೆ?" ಒಂದು ದಿನ ಕಳೆಯಿತು. ಮರುದಿನವೂ ಸರಿಯಿತು. ಮೂರನೆಯ ದಿನ ಅಂತರಂಗದ ಆಳದೊಳಗಿಂದ ಧ್ವನಿಯೊಂದು ಬಂದಿತು: "ತಾಳು; ನೋಡುತ್ತಿರು" ಎಂದು. ಅನಂತರ ನಾನು ಶಾಂತನಾಗಿ ಮುಂದಾಗುವದರ ದಾರಿ ಕಾಯುತ್ತ ಕುಳಿತೆ. ಲಾಲಬಝಾರದಿಂದ ಅಲೀಪುರಕ್ಕೆ ನನ್ನನ್ನೊಯ್ದು ಮನುಷ್ಯಸಂಪರ್ಕವೇ ಇಲ್ಲದಂಥ ಒಂದು ಏಕಾಂತದ ಕೋಣೆಯಲ್ಲಿ ಒಂದು ತಿಂಗಳವರೆಗೆ ನನ್ನನ್ನಿಟ್ಟರು. ಅಲ್ಲಿ ಅಂತರಂಗದ ಅಧಿದೇವನ ವಾಣಿಯ ದಾರಿ ಯನ್ನು ಹಗಲಿರುಳೂ ಕಾಯುತ್ತ ಕುಳಿತೆ. ಆತನು ನನಗೆ ಯಾವ ಆದೇಶವನ್ನು ಕೊಡುವನೋ ಎಂಬು ದನ್ನು ಅರಿಯಲಿಕ್ಕೆ ಹಾಗು ನಾನು ಮಾಡತಕ್ಕದ್ದೇನು ಎಂಬುದನ್ನು ತಿಳಿಯಲಿಕ್ಕೆ ಅಂತರಂಗದ ಅಂತ ರ್ವಾಣಿಯನ್ನಾಲಿಸಲು ನಾನು ಆತುರನಾಗಿದ್ದೆ. ಈ ಏಕಾಂತವಾಸದಲ್ಲಿ ಸಾಕ್ಷಾತ್ಕಾರದ ಪ್ರಥಮ ಪಾಠವು ನನಗೆ ಲಭಿಸಿತು. ಎಲ್ಲ ಚಟುವಟಿಕೆಗಳನ್ನು ಬದಿಗೆ ಸರಿಸಿ ಏಕಾಂತದಲ್ಲಿದ್ದು ಅಂತರ್ಮುಖಿಯಾಗೆಂದೂ ಇದರಿಂದ ಭಗವಂತನೊಡನೆ ಹೆಚ್ಚಿನ ಸಾಮರಸ್ಯವನ್ನು ಪಡೆಯುವಿಯೆಂದೂ ಹೇಳುವ ಒಂದು ಒಳಗಿನ ಧ್ವನಿಯು ನನ್ನ ಬಂಧನಕ್ಕಿಂತ ಒಂದು ತಿಂಗಳೊಪ್ಪತ್ತು ಮುಂಚೆ ನನಗೆ ಕೇಳಬಂದಿತ್ತೆಂಬುದರ ಸ್ಮರಣೆ ಆಗ ನನಗಾಯ್ತು. ಆ ಒಳದನಿಯ ಕರೆಗೆ ಓಗುಡಲು ಆಗ ನಾನು ಸಮರ್ಥನಾಗಿರಲಿಲ್ಲ. ನನ್ನ ಕಾರ್ಯ ನನಗೆ ಅತಿಪ್ರಿಯವಾಗಿತ್ತು. ನಾನಿರದಿದ್ದರೆ ಅದು ಕೆಡುವುದೆಂದೂ ಇಲ್ಲವೆ ಯಶಸ್ಸುದೊರೆಯದೆ ನಿಂತು ಹೋಗುವುದೆಂದೂ ಒಳಗಿಂದೊಳಗೆ ಗರ್ವಪಡುತ್ತಿದ್ದೆ. ಅಂತೆಯೇ ಆತನು ನನಗೆ ಪುನಃ ಹೀಗೆ ಹೇಳಿ ದಂತೆ ತೋರಿಬಂತು: "ನಿನ್ನ ಶೃಂಖಲೆಗಳನ್ನು ಕಡಿದೊಗೆಯುವ ಶಕ್ತಿ ನಿನಗಿರಲಿಲ್ಲ; ಅವನ್ನು ನಾನೀಗ ನಿನಗಾಗಿ ಕಡಿದಿದ್ದೇನೆ. ಏಕೆಂದರೆ ಅದೇ ಕಾರ್ಯವನ್ನು ನೀನು ಮುಂದುವರಿಸುವದು ನನ್ನ ಸಂಕಲ್ಪದ ಲ್ಲಿಲ್ಲ. ಆ ಬಗೆಯ ಉದ್ದೇಶವು ನನ್ನದೆಂದೂ ಇರಲಿಲ್ಲ. ನಿನಗಾಗಿ ಇನ್ನೊಂದು ಕಾರ್ಯವನ್ನು ನಾನು ಗೊತ್ತುಮಾಡಿಟ್ಟಿದ್ದೇನೆ. ಅದಕ್ಕಾಗಿ ನಾನು ನಿನ್ನನ್ನು ಇಲ್ಲಿಗೆ ಕರೆತಂದಿರುವೆನು. ನೀನು ನೀನಾಗಿ ಕಲಿಯ ಲಾರದ್ದನ್ನು ನಿನಗೆ ಕಲಿಸಲು ಹಾಗು ನನ್ನ ಕಾರ್ಯಕ್ಕಾಗಿ ನಿನ್ನನ್ನು ಅಣಿಗೊಳಿಸಲು ನಿನ್ನನ್ನು ಇಲ್ಲಿಗೆ ತಂದಿರುವೆನು." ಬಳಿಕ ಆತನು ನನ್ನ ಕೈಯಲ್ಲಿ 'ಗೀತೆ'ಯನ್ನಿಟ್ಟನು. ಆತನ ಶಕ್ತಿಯೆಲ್ಲಾ ನನ್ನಲ್ಲಿ ಪ್ರವೇಶಿಸಿತು. ಗೀತೆಯಲ್ಲಿ ಹೇಳಿದ 'ಸಾಧನೆ'ಯನ್ನು ಅನುಷ್ಠಾನಮಾಡಲು ಸಮರ್ಥನಾದೆ. ಶ್ರೀಕೃಷ್ಣನು ಅರ್ಜುನನಿಂದ ಯಾವುದನ್ನು ಅಪೇಕ್ಷಿಸಿದನೋ ಮತ್ತು ಆತನ ಕಾರ್ಯವೆಸಗಲು ತೀವ್ರೇಚ್ಛೆಯುಳ್ಳವರಿಂದ ಆತನು ಯಾವುದನ್ನು ಇಂದಿಗೂ ಅಪೇಕ್ಷಿಸುವನೋ ಅದನ್ನು ಬುದ್ಧಿಯುಕ್ತವಾಗಿ ಇಷ್ಟೇ ಅಲ್ಲ –ಅನುಭಾವ ಯುಕ್ತವಾಗಿ ಅರಿಯಬೇಕಾಗಿತ್ತು. ಸುಖದುಃಖಾದಿ ದ್ವಂದ್ವದಿಂದ ಮುಕ್ತನಾಗುವದನ್ನೂ, ಕರ್ಮಫಲ ಹೇತುವಿಲ್ಲವೆ ಆತನಿಗಾಗಿ ನಿಷ್ಕಾಮಕರ್ಮವನ್ನೆಸಗುವದನ್ನೂ, ಸ್ವಸಂಕಲ್ಪದ ತ್ಯಾಗದಿಂದ ಆತನ ಕೈಯಲ್ಲಿ ರುವ ತಟಸ್ಥವೃತ್ತಿಯ ನಂಬಿಗೆಯ ನಿಮಿತ್ತಮಾತ್ರದ ಉಪಕರಣವಾಗುವುದನ್ನೂ, ಉಚ್ಚ–ನೀಚ–ಶತ್ರು

ಮಿತ್ರ–ಜಯಾಜಯಗಳ ವಿಷಯದಲ್ಲಿ ಸಮದರ್ಶಿಯಾಗುವುದಲ್ಲದೆ ಆತನ ಕಾರ್ಯದ ಅನುಷ್ಠಾನದಲ್ಲಿ ಅಲಕ್ಷ್ಯ ಮಾಡದಿರುವದನ್ನೂ ನಾನು ಅರಿತುಕೊಳ್ಳಬೇಕಾಗಿತ್ತು; ಅರಿತುಕೊಂಡೆ. ಹಿಂದೂಧರ್ಮದ ಅರ್ಥವೇನೆಂಬು ದನ್ನು ನಾನು ಅರಿತುಕೊಂಡೆ. ಆಗಾಗ ನಾವೆಲ್ಲ ಹಿಂದೂ ಧರ್ಮ—ಸನಾತನ ಧರ್ಮದ ವಿಷಯವಾಗಿ ಮಾತನಾಡುತ್ತಿರುತ್ತೇವೆ; ಆದರೆ ಧರ್ಮವೇನೆಂಬುದೇ ನಿಜವಾಗಿ ನಮ್ಮೆಲ್ಲಾರಿಗೂ ತಿಳಿದಿಲ್ಲ. ಇತರ ಧರ್ಮ ಗಳು ಮುಖ್ಯತ್ವೇನ ಶ್ರದ್ಧೆ ಮತ್ತು ಸ್ವೀಕಾರಗಳ ಧರ್ಮಗಳಾಗಿದ್ದರೆ ಸನಾತನ ಧರ್ಮವು ಜೀವನವೇ ಆಗಿದೆ; ನಂಬುವದಕ್ಕಿಂತ ಇದ್ದು ತೋರುವ ವಿಷಯವು ಅದಾಗಿದೆ. ಮಾನವಕುಲದ ಉದ್ಧಾರಕ್ಕಾಗಿ ಪ್ರಾಚೀನ ಕಾಲದಿಂದಲೂ ಭರತಖಂಡದ ತಪೋವನಗಳ ಏಕಾಂತದಲ್ಲಿ ಪುಷ್ಟಿಗೊಂಡ ಧರ್ಮವು ಇದಾಗಿದೆ. ಈ ಧರ್ಮವನ್ನು ಮಾನವಕುಲಕ್ಕೆ ಅರ್ಪಿಸಲೆಂದೇ ಭಾರತವು ಇಂದು ಚೇತರಿಸಿಕೊಂಡು ಏಳುತ್ತಿದೆ. ಇತರ ದೇಶಗಳಂತೆ ಈ ದೇಶವು ಸ್ವಾರ್ಥಕ್ಕಾಗಿ ಎಚ್ಚತ್ತಿರುವದಿಲ್ಲ; ಅಥವಾ ತಾನು ಬಲಿಷ್ಠವಾದಾಗ ದುರ್ಬಲ ರನ್ನು ತುಳಿಯುವದಕ್ಕೂ ಅಲ್ಲ. ಭಗವಂತನು ತನಗೆ ಒಪ್ಪಿಸಿಕೊಟ್ಟಂತೆ ಭಾರತಮಾತೆ ಶಾಶ್ವತ ಪ್ರಕಾಶ ವನ್ನು ಜಗತ್ತಿಗೆಲ್ಲಾ ಬೀರಲು ತಾನು ಚೇತರಿಸಿ ಏಳುತ್ತಿದ್ದಾಳೆ. ಭಾರತವು ಎಂದಿಗೂ ತನಗಾಗಿ ತಾನು ಬದುಕಿರದೆ ಮಾನವಕುಲಕ್ಕಾಗಿ ಬದುಕಿದೆ. ಇಂದಾದರೂ ಈ ದೇಶವು ತನಗಾಗಿ ಅಲ್ಲ—ಮಾನವಕುಲದ ಕಲ್ಯಾಣಕ್ಕಾಗಿ ಘನತೆ ಪಡೆಯಬೇಕಾಗಿದೆ.

ಆದ್ದರಿಂದ ಭಗವಂತನು ನನಗೆ ನಿರ್ದೇಶಿಸಿದ ಎರಡನೆಯ ವಿಷಯವೆಂದರೆ ಇದೇ.— ಹಿಂದೂ ಧರ್ಮದ ಕೇಂದ್ರ-ಸತ್ಯದ ಸಾಕ್ಷಾತ್ಕಾರವು ನನಗೆ ಆಗುವಂತೆ ಆತನು ಮಾಡಿದನು. ನನ್ನ ಕಾವಲುಗಾರ ಅಧಿಕಾರಿ (Jailor) ಗಳ ಹೃದಯಪರಿವರ್ತನೆಯನ್ನು ಆತನು ಮಾಡಿದ್ದರಿಂದ ಸೆರೆಮನೆಯ ಮುಖ್ಯಾಧಿ ಕಾರಿ ಆಂಗ್ಲ ಗೃಹಸ್ಥನೊಡನೆ ಅವರು ಹೀಗೆ ಮಾತನಾಡಿದರು. ''ಅವನು ಏಕಾಂತದ ಕೋಣೆಯಲ್ಲಿ ಕೊಳೆಯುತ್ತಿದ್ದಾನೆ. ಮುಂಜಾವಿನಲ್ಲಿ ಮತ್ತು ಸಂಜೆಯಲ್ಲಿ ಅರ್ಧ ತಾಸಿನ ಮಟ್ಟಿಗಾದರೂ ಅವನು ಕೋಣೆಯ ಹೊರಗೆ ಬಂದು ಅಡ್ಡಾಡಲಿ.'' ಆ ಮೇಲೆ ನಾನು ಹಾಗೆ ಅಡ್ಡಾಡುವಂತೆ ವ್ಯವಸ್ಥೆಯಾಯಿತು. ನಾನು ಹಾಗೆ ಅಡ್ಡಾಡುತ್ತಿರುವಾಗ ಭಗವಂತನ ಶಕ್ತಿ ಮತ್ತೆ ನನ್ನಲ್ಲಿ ಪ್ರವೇಶಿಸಿತು. ಮನುಷ್ಯ ಸಂಪರ್ಕ ವಿಲ್ಲದಂತೆ ನನ್ನನ್ನು ದೂರ ಇರಿಸಿದ ಆ ಸೆರೆಮನೆಯತ್ತ ನಾನು ದಿಟ್ಟಿಸಿ ನೋಡಿದೆ. ಆಗ ಆ ಜೇಲಿನ ಬಹು ಎತ್ತರದ ಗೋಡೆಗಳಿಂದ ನಾನು ಬಂಧಿತನಾಗಿರಲಿಲ್ಲ; ಖಂಡಿತವಾಗಿಯೂ ಇಲ್ಲ ವಾಸುದೇವನೇ ನನ್ನನ್ನು ಸುತ್ತುಗಟ್ಟಿದ್ದನು. ನನ್ನ ಕೋಣೆಯ ಎದುರಿಗಿರುವ ಗಿಡದ ಟೊಂಗೆಗಳ ಬುಡದಲ್ಲಿ ನಾನು ಅಡ್ಡಾಡುತ್ತಿರು ವಾಗ ಆ ಗಿಡವು ಗಿಡವಾಗಿರದೇ ವಾಸುದೇವನೇ ಅಲ್ಲಿದ್ದನೆಂದು ನಾನು ಅರಿತೆ. ನನ್ನ ಮೇಲೆ ತನ್ನ ನೆರಳನ್ನು ಹರಹುತ್ತ ಶ್ರೀಕೃಷ್ಣನೇ ಅಲ್ಲಿ ನಿಂತಿದ್ದನೆಂಬುದನ್ನು ನಾನು ಕಂಡೆ. ನನ್ನ ಕೋಣೆಯ ಬಾಗಿಲ ದಂತಿರುವ ಕಬ್ಬಿಣದ ಸಲಾಕೆಗಳತ್ತ ನಾನು ದಿಟ್ಟಿಸಿ ನೋಡಿದೆ. ಮತ್ತೆ ವಾಸುದೇವನ ದರ್ಶನವೆ ನನಗಾ ಯಿತು. ನನ್ನನ್ನು ಕಾಯುತ್ತ ಕಾವಲುಗಾರನಾಗಿ ನಿಂತವನು ನಾರಾಯಣನೇ ಆಗಿದ್ದನು. ನನಗೆ ಕೊಟ್ಟ ಆ ಹುರಬರಕು ದಪ್ಪ ಕಂಬಳಿಗಳ ಮೇಲೆ ನಾನು ಮಲಗಿದಾಗ ನನ್ನ ಸುತ್ತಲೂ ಶ್ರೀಕೃಷ್ಣನ ತೋಳುಗಳ ಸ್ಪರ್ಶ ನನಗಾಯಿತು. ಪ್ರಾಣಸಖ–ಪ್ರಾಣಕಾಂತನ ತೋಳುಗಳ ಸ್ಪರ್ಶವದು. ಭಗವಂತನು ನನಗಿತ್ತ ಅಂತರ್ದೃಷ್ಟಿಯ ಪ್ರಥಮ ಉಪಯೋಗವೇ ಇದು. ಜೇಲಿನಲ್ಲಿ ಸೆರೆಯಾಳುಗಳಾದ ಕಳ್ಳರು-ಕೊಲೆಗಡ ಕರು-ದ್ರೋಹಿಗಳು ಇವರೆಲ್ಲರನ್ನೂ ನಾನು ದಿಟ್ಟಿಸಿ ನೋಡಿದೆ. ಇವರನ್ನು ನೋಡುತ್ತಿರುವಾಗ ವಾಸುದೇವನೇ ನನಗೆ ಕಾಣುತ್ತಿದ್ದ. ಈ ಎಲ್ಲ ಪತಿತರ ಅಂಧಃಕಾರಮಯ ಆತ್ಮಗಳಲ್ಲಿಯೂ ದುರುಪಯೋಗಗೊಳಿಸಿದ ದೇಹಗಳಲ್ಲಿಯೂ ನಾರಾಯಣನನ್ನೇ ನಾನು ಕಂಡೆ. ಈ ಕಳ್ಳಕಾಕರಲ್ಲಿಯೇ ಹಲವರು ತಮ್ಮ ಸ್ನೇಹ– ಕರುಣೆಗಳಿಂದ ನನ್ನನ್ನು ನಾಚಿಸಿದರು. ಇಂಥ ಪ್ರತಿರೋಧದ ಪರಿಸ್ಥಿತಿಯಲ್ಲಿಯೂ ಮಾನವತ್ವವು ವಿಜಯಿ

ಯಾದುದು ಕಂಡುಬಂತು. ಈ ಜನಗಳ ಮಧ್ಯದಲ್ಲಿ ಮುಖ್ಯವಾಗಿ ನಾನೊಬ್ಬನನ್ನು ಕಂಡೆ; ಆತನು ನನಗೆ ಸಾಧುಪುರುಷನಂತೆ ಕಂಡ ಅವನೊಬ್ಬ ಓದುಬರಹ ಬರದ ನನ್ನ ದೇಶದ ಒಬ್ಬ ರೈತಬಾಂಧವನಾಗಿದ್ದು ೧೦ ವರ್ಷದ ಕಠೋರ ಶಿಕ್ಷೆಯನ್ನು ಪಡೆದ ದರೋಡೆಗಾರನಾಗಿದ್ದ. ದ್ರೋಹಿಗಳಾದ ನಾವು ಗರ್ವದಿಂದ ಇಂಥವರನ್ನು 'ಕೆಳಗಿನ ಜನ' ರೆಂದು ಕರೆಯುತ್ತೇವೆ. ಆದರೆ ಭಗವಂತನು ಇಂಥವರ ಮಧ್ಯದಲ್ಲಿಯೇ ನನ್ನನ್ನು ತಂದಿಟ್ಟು ಪುನಃ ನನಗೆ ಹೀಗೆ ಕೂಗಿ ಹೇಳಿದ. ''ಇಲ್ಲಿ ನೋಡು ನನ್ನ ಕಾರ್ಯದಲ್ಲಿ ಒಂದಿಷ್ಟನ್ನಾದರೂ ಮಾಡಲು ಈ ಜನರ ಮಧ್ಯದಲ್ಲಿ ನಿನ್ನನ್ನು ಕಳುಹಿದ್ದೇನೆ. ನಾನು ಚೈತನ್ಯದುಂಬಿಸಿ ಎಬ್ಬಿಸುತ್ತಿರುವ ರಾಷ್ಟ್ರದ ಸ್ವರೂಪವು ಇದಾಗಿದೆ. ನಾನು ಈ ರಾಷ್ಟ್ರದ ಈ ಜನತೆಯನ್ನು ಎಬ್ಬಿಸುತ್ತಿರುವ ಕಾರಣವಾದರೂ ಇದೇ ಆಗಿದೆ."

ಕೆಳಗಿನ ಕೋರ್ಟಿನಲ್ಲಿ ಪ್ರಕರಣದ ಚೌಕಸಿಗೆ ಆರಂಭವಾಗಲು ನಮ್ಮನ್ನು ಮ್ಯಾಜಿಸ್ಟ್ರೇಟರೆದುರು ತಂದು ನಿಲ್ಲಿಸಿದರು. ಆಗಲೂ ಅದೇ ಅಂತರ್ದೃಷ್ಟಿ ನನ್ನನ್ನು ಬೆಂಬತ್ತಿ ಬಂತು. ಭಗವಂತನು ನನಗೆ ಹೀಗೆ ನುಡಿದ ''ಸೆರೆಮನೆಯಲ್ಲಿ ನಿನ್ನನ್ನು ಚೆಲ್ಲಿದಾಗ ನಿನ್ನೆದೆಯು ತತ್ತರಿಸಿ 'ನಿನ್ನ ರಕ್ಷಣೆಯೆಲ್ಲಿದೆ' ಎಂದು ನನ್ನನ್ನು ಕೂಗಿ ಕರೆದೆಯಲ್ಲವೆ? ಈಗ ಮ್ಯಾಜಿಸ್ಟ್ರೇಟರನ್ನು ಕಣ್ಣೆತ್ತಿ, ನೋಡು. ಆ ಸರಕಾರಿ ವಕೀಲರನ್ನು ಕಣ್ಣಿಟ್ಟು ನೋಡು." ನಾನು ಕಣ್ಣೆತ್ತಿ, ನೋಡಿದೆ; ಅವರು ಮ್ಯಾಜಿಸ್ಟ್ರೇಟರಾಗಿರಲಿಲ್ಲ–ವಾಸುದೇವನೇ ಆಗಿದ್ದರು. ಆಸನದ ಮೇಲೆ ಕುಳಿತವನು ನಾರಾಯಣನು. ಸರಕಾರಿ ವಕೀಲರನ್ನು ಕಣ್ಣಿಟ್ಟು ನೋಡಿದೆ. ನನಗೆ ಕಾಣಿಸಿದವರು ಸರಕಾರಿ ವಕೀಲರಾಗಿರಲಿಲ್ಲ; ಅಲ್ಲಿ ನಗುತ್ತ ಕುಳಿತವನು ನನ್ನ ಪ್ರಾಣಕಾಂತ–ಪ್ರಾಣಮಿತ್ರ ಶ್ರೀಕೃಷ್ಣನೇ ಆಗಿದ್ದ. ಅವನು ನನಗೆ ಹೀಗೆ ನುಡಿದ : ''ಈಗ ನಿನಗೆ ಭಯವಾಗುವದೇ? ನಾನು ಸಕಲ ಮಾನವರಲ್ಲಿಯೂ ಉಪಸ್ಥಿತನಾಗಿರುವೆ. ಅವರ ಎಲ್ಲ ಕಾರ್ಯಗಳ ಮತ್ತು ಎಲ್ಲ ಮಾತುಗಳ ಅಧಿದೈವತವು ನಾನೇ. ಈಗಲೂ ಸಹ ನಿನಗೆ ನನ್ನ ರಕ್ಷಣೆಯುಂಟು ನೀನು ಹೆದರಕೂಡದು. ನಿನ್ನ ವಿರುದ್ಧವಾಗಿ ಎದ್ದ ಈ ಆಪಾದನೆಯ ಪ್ರಕರಣದ ಹೊಣೆಯನ್ನು ನನಗೊಪ್ಪಿಸಿಬಿಡು ಅದು ನಿನಗಾಗಿ ಇಲ್ಲ. ಈ ನ್ಯಾಯವಿಚಾರಣೆಗೆಂದೇನೂ ನಿನ್ನನ್ನು ನಾನಿಲ್ಲಿ ತಂದಿಲ್ಲ. ನಿನ್ನನ್ನು ಇಲ್ಲಿ ಎಳೆತಂದುದರ ಕಾರಣವು ಬೇರೆಯೇ ಆಗಿದೆ. ಈ ಪ್ರಕರಣವು ನನ್ನ ಕಾರ್ಯಸಾಧನೆಗೆ ನಿಮಿತ್ತ ಮಾತ್ರ; ಹೆಚ್ಚಿನದೇನೂ ಇದರಲ್ಲಿಲ್ಲ." ಅನಂತರ ಸೆಶನ್ಸಕೋರ್ಟಿನಲ್ಲಿ ಪ್ರಕರಣದ ಚೌಕಸಿಗೆ ಆರಂಭವಾದೊಡನೆ ನನ್ನ ವಿರುದ್ಧವಿರುವ ಪುರಾವೆಯಲ್ಲಿ ಅಸತ್ಯಾಂಶವಾವುದು ಹಾಗು ವಿರುದ್ಧ ಸಾಕ್ಷಿದಾರರಿಗೆ ಪ್ರತಿಪ್ರಶ್ನೆಗಳನ್ನು ಯಾವ ಸಂಗತಿಗಳ ಬಗ್ಗೆ ಕೇಳಬೇಕು ಈ ಬಗ್ಗೆ ನನ್ನ ವಕೀಲರಿಗೆಂದು ಅನೇಕ ಸೂಚನೆಗಳನ್ನು ನಾನು ಬರೆಯತೊಡಗಿದೆ. ಆಗ್ಗೆ ಅನಿರೀಕ್ಷಿತವಾಗಿ ಒಂದು ಘಟನೆ ನಡೆಯಿತು. ಆಪಾದನೆಯಿಂದ ನನ್ನನ್ನು ರಕ್ಷಿಸಿಕೊಳ್ಳುವ ವಿಷಯದಲ್ಲಿ ಈ ಮೊದಲು ಮಾಡಿದ ವ್ಯವಸ್ಥೆಯೆಲ್ಲಾ ಒಮ್ಮಿಂದೊಮ್ಮೆಲೆ ಬದಲಾಗಿ ನನ್ನ ಪರವಾಗಿ ಪ್ರತಿವಾದ ಮಾಡಲಿಕ್ಕೆ ಮತ್ತೊಬ್ಬರೇ ಬಂದು ನಿಂತರು. ಅವರು ನನ್ನ ಮಿತ್ರರೇ ಆಗಿದ್ದರೂ ಅವರು ಈ ಕೆಲಸಕ್ಕೆ ಬರುವರೆಂಬುದು ನನ್ನ ಕನಸು–ಮನಸಿನಲ್ಲಿಯೂ ಇರಲಿಲ್ಲ. ಅವರ ಹೆಸರನ್ನು ನೀವೆಲ್ಲರೂ ಕೇಳಿಯೇ ಇದ್ದೀರಿ. ನನಗಾಗಿ ಅವರು ತಮ್ಮೆಲ್ಲ ಇತರ ವಿಚಾರಗಳನ್ನು ಬದಿಗೆ ಸರಿಸಿ, ತಮ್ಮ ವಕೀಲಿಯ ಗಳಿಕೆಯನ್ನೆಲ್ಲಾ ತ್ಯಾಗಮಾಡಿ, ತಿಂಗಳುಗಟ್ಲೆ ದಿನಾಲು ಮಧ್ಯರಾತ್ರಿಯ ವರೆಗೂ ಜಾಗರಣೆಯಿಂದಿದ್ದು ನನ್ನನ್ನುಳಿಸಬೇಕೆಂದು ತಮ್ಮ ಆರೋಗ್ಯವನ್ನೆಲ್ಲಾ ಹಾಳುಮಾಡಿಕೊಂಡರು. ಅವರೇ ಶ್ರೀಯುತ ಚಿತ್ತರಂಜನದಾಸರು. ಅವರನ್ನು ಕಂಡೊಡನೆ ನನಗೆ ತೃಪ್ತಿಯಾಯಿತು. ಆದರೂ ಕೆಲವು ಸೂಚನೆಗಳನ್ನು ಬರೆದುಕೊಡುವದು ಆವಶ್ಯವೆಂದು ಆಗ್ಗೆ ಕೂಡ ನನಗನಿಸಿತು. ಅವನ್ನೆಲ್ಲಾ ನಾನು ಬರೆದಿಟ್ಟೆ. ಆಗ್ಗೆ ಅಂತರಂಗದಿಂದ ಒಂದು ಸಂದೇಶ ಬಂದಿತು. "ನಿನ್ನ ಕಾಲು ಕಟ್ಟಿದ ಈ ಜಾಲದಿಂದ ನಿನ್ನನ್ನು ರಕ್ಷಿಸಲು ಯೋಗ್ಯ ವ್ಯಕ್ತಿಯು

ಈತನೇ. ನೀನು ಬರೆದಿಟ್ಟ ನಿನ್ನ ಕಾಗದಗಳನ್ನು ಬೀಸಿ ಒಗೆ. ಆತನಿಗೆ ಸೂಚನೆಗಳನ್ನು ಕೊಡುವ ಕೆಲಸ ನಿನ್ನದಲ್ಲ. ನಾನೇ ಅವನಿಗೆ ಆ ಸೂಚನೆಗಳನ್ನು ಕೊಡುವೆನು." ಆ ಗಳಿಗೆಯಿಂದ ನಾನಾಗ ನನ್ನ ವಕೀಲರಿಗೆ ಈ ಪ್ರಕರಣದ ವಿಷಯದಲ್ಲಿ ಒಂದು ಶಬ್ದ ಕೂಡ ನಾನು ಮಾತನಾಡಲಿಲ್ಲ, ಯಾವ ಸೂಚನೆಯನ್ನೂ ನಾನು ಮಾಡಲಿಲ್ಲ. ನನಗೆ ಅವರೇನಾದರೂ ಪ್ರಶ್ನೆ ಹಾಕಿದಾಗ ನಾನು ಕೊಟ್ಟ ಉತ್ತರದಿಂದ ನನ್ನ ಪ್ರಕರಣಕ್ಕೆ ಯಾವ ಬಗೆಯ ಸಹಾಯವೂ ಆಗಲಿಲ್ಲವೆಂದು ನನಗೆ ಮೇಲಿಂದಮೇಲೆ ಕಂಡುಬಂತು. ನಾನು ಅವರಿಗೇ ಎಲ್ಲವನ್ನು ಒಪ್ಪಿಸಿಬಿಟ್ಟೆ... ಅವರು ಸಂರಕ್ಷಣೆ–ಸಮರ್ಥನೆಯ ಎಲ್ಲ ಹೊಣೆಯನ್ನೂ ತಾವೇ ಪೂರ್ಣವಾಗಿ ವಹಿಸಿಕೊಂಡರು. ಪರಿಣಾಮವು ಏನಾಯ್ತೆಂಬುದು ನಿಮಗೆ ಗೊತ್ತೇ ಇದೆ. ನನ್ನ ಬಗ್ಗೆ ಭಗವಂತನ ಸಂಕಲ್ಪವೇನಿತ್ತೆಂಬುದರ ಅರಿವು ಮೊದಲಿನಿಂದ ಕೊನೆಯವರೆಗೂ ನನಗಿತ್ತು. ಅಂತರ್ವಾಣಿಯನ್ನು ಪದೇ ಪದೇ ನಾನು ಆಲಿಸುತ್ತಿದ್ದೆ: ''ನಾನು ಮಾರ್ಗದರ್ಶನ ಮಾಡುತ್ತಿದ್ದೇನೆ. ಆದ್ದರಿಂದ ಭಯಪಡಬೇಡ. ನಾನು ನಿನ್ನನ್ನು ಈ ಸೆರೆಮನೆಗೆ ಯಾವ ಕಾರ್ಯಕ್ಕಾಗಿ ತಂದಿರುವೆನೋ ಆ ನಿನ್ನ ಕಾರ್ಯದ ಕಡೆಗೇ ನಿನ್ನ ಗಮನವಿರಲಿ. ಇಲ್ಲಿಂದ ಹೊರಬಿದ್ದ ಮೇಲೆ ಎಂದಿಗೂ ಭಯಪಡಬೇಡವೆಂಬುದನ್ನು ನೆನಪಿನಲ್ಲಿಡು. ಅಂಜಬೇಡ ಅಳುಕಬೇಡ ಇದನ್ನೆಲ್ಲ ಮಾಡಿ ಮಾಡಿಸುವವನು ನಾನೆಂಬುದನ್ನು ಸ್ಮರಣೆಯಲ್ಲಿಡು ; ನೀನೂ ಅಲ್ಲ, ಬೇರೆ ಯಾರೂ ಅಲ್ಲ. ಎಂಥ ಮೋಡ ಕವಿದರೂ, ಎಂಥ ಸಂಕಟ–ವಿಘ್ನಗಳು ಅಡ್ಡ ಬಂದರೂ, ಎಂಥ ಕಷ್ಟ ನಷ್ಟಗಳೇ ಒದಗಿದರೂ ಭಯಪಡಬೇಡ. ಕಾರ್ಯ ಅಸಾಧ್ಯವೆಂದೆನಿಸಿದರೂ ಅಂಜಬೇಡ. ಈ ಜಗದಲ್ಲಿ ಅಸಾಧ್ಯವೆಂಬುದೇ ಇಲ್ಲ; ಕಠಿಣವೆಂಬುದೇ ಇಲ್ಲ. ರಾಷ್ಟ್ರದಲ್ಲಿ ಇದ್ದವನು ನಾನು ; ಅದರ ಜಾಗೃತಿಯಲ್ಲಿ ಇದ್ದವನೂ ನಾನೇ. ವಾಸುದೇವನು ನಾನು ನಾರಾಯಣನು ನಾನು. ನನ್ನ ಇಚ್ಛೆಯೇ ಈಡೇರುವುದಲ್ಲದೆ ಅನ್ಯರ ಇಚ್ಛೆ ಈಡೇರಲಾರದು. ಇಂತಹದು ಘಟಿಸಬೇಕೆಂದು ನನ್ನ ಸಂಕಲ್ಪವಿದ್ದ ಕಾಲದಲ್ಲಿ ಯಾವ ಮಾನವಶಕ್ತಿಯೂ ಅದಕ್ಕೆ ಅಡ್ಡಬರಲಾರದು. ಇದನ್ನೆಲ್ಲ ನೀನು ಸ್ಮರಣೆಯಲ್ಲಿಡು.

ಇಷ್ಟರಲ್ಲಿ ಭಗವಂತನು ನನ್ನನ್ನು ಏಕಾಂತದಿಂದ ಹೊರಗೆ ಕರೆತಂದು, ಈ ಪ್ರಕರಣದಲ್ಲಿ ಆಪಾದನೆಗೆ ಗುರಿಯಾದ ನನ್ನ ಜೊತೆಗಾರರೊಡನೆ ನನ್ನನ್ನಿರಿಸಿದ. ನೀವು ಈದಿನ ನನ್ನತ್ಯಾಗ ಹಾಗು ರಾಷ್ಟ್ರಭಕ್ತಿಯ ವಿಚಾರವಾಗಿ ಸಾಕಷ್ಟು ಕೊಂಡಾಡಿ ಮಾತನಾಡಿದ್ದೀರಿ. ನಾನು ಸೆರೆಮನೆಯಿಂದ ಹೊರಗೆ ಬಂದಾಗಿನಿಂದ ಈ ಬಗೆಯ ಮಾತು ನನಗೆ ಕೇಳಿಬರುತ್ತದೆ. ಇಂಥ ಮಾತನ್ನು ಕೇಳಿದಾಗ ಸಂಕೋಚದಿಂದ ನಾನು ಮುದುಡಿಕೊಳ್ಳುತ್ತೇನೆ; ಒಂದು ಬಗೆಯ ವ್ಯಥೆಯೂ ನನಗೆ ಆಗುತ್ತಿದೆ. ಏಕೆಂದರೆ ನನ್ನ ದುರ್ಬಲತೆಯ ಅರಿವು ನನಗಿದೆ. ನನ್ನ ಲೋಪ-ದೋಷಗಳಿಗೆ ನಾನೇ ತುತ್ತಾಗಿರುವೆ. ಮುಂಚೆ ಕೂಡ ಇವುಗಳ ಬಗ್ಗೆ ನಾನೇನೂ ಕುರುಡನಾಗಿರಲಿಲ್ಲ ; ಏಕಾಂತದಲ್ಲಂತೂ ಅವೆಲ್ಲವೂ ಒಟ್ಟುಗೂಡಿ ನನ್ನ ವಿರುದ್ಧವಾಗಿ ತಲೆಯೆತ್ತಿ ನಿಂತಾಗ, ನನ್ನ ಹೃದಯದೌರ್ಬಲ್ಯದ ಪೂರ್ಣಸ್ವರೂಪದ ಅನುಭವವು ನನಗೆ ಆಗ ಆಯಿತು. ನಾನೆಂದರೆ ದೌರ್ಬಲ್ಯದ ಮೊಟ್ಟೆಯೇ ಆದ ಹುಲು ಮಾನವನೆಂದೂ, ದೋಷಮಯ ಅಪೂರ್ಣ ಉಪಕರಣವೆಂದೂ, ದೈವೀ ಶಕ್ತಿ ನನ್ನಲ್ಲಿ ಪ್ರವೇಶಿಸಿದಾಗ ಮಾತ್ರ ನಾನು ಬಲಶಾಲಿಯೆಂದೂ ಆಗ ನನಗೆ ತಿಳಿಯಿತು. ಈ ತರುಣರ ಮಧ್ಯದಲ್ಲಿ ಆಗ ನನ್ನ ನಿಜರೂಪವು ನನಗೆ ಕಂಡಿತು. ಅವರಲ್ಲಿ ಹಲವರು ಬಲಿಷ್ಠ ಮೇರುಪರ್ವತದಂತೆ ಧೈರ್ಯಶಾಲಿಗಳಾಗಿದ್ದರೆಂಬುದನ್ನು ನಾನು ಕಂಡುಕೊಂಡೆ. ಧ್ಯೇಯಕ್ಕಾಗಿ ಪೂರ್ಣ ಆತ್ಮಾರ್ಪಣ ಮಾಡಿದ ಅವರ ಅದ್ಭುತ ಶಕ್ತಿಯ ಮುಂದೆ ನಾನು ಯಾವ ಗಿಡದ ತೊಪ್ಪಲೋ ಎಂದೆನಿಸಿತು. ಶಕ್ತಿ-ಶೀಲಗಳಲ್ಲಿಷ್ಟೇ ಅಲ್ಲ—ನಾನು ಗರ್ವಪಟ್ಟುಕೊಳ್ಳುತ್ತಿದ್ದ ಬೌದ್ಧಿಕ ಸಾಮರ್ಥ್ಯದ ವಿಕಾಸದಲ್ಲಿ ಕೂಡ—ನನಗಿಂತ ಶ್ರೇಷ್ಠರಾದವರು ಅವರಲ್ಲಿ ಒಬ್ಬಿಬ್ಬರು—ಅದೇಕೆ ಅನೇಕರು—ಇದ್ದರೆಂಬುದು ನನಗೆ ತೋರಿಬಂತು. ಭಗವಂತನು ನನಗೆ ಹೀಗೆ ಹೇಳಿದ: "ನನ್ನ ಆಜ್ಞೆಯ ಪ್ರಕಾರ ಜಾಗೃತವಾಗುತ್ತಿರುವ ತರುಣ ಸಂತತಿ ಇದೇ ನೋಡು. ಚೇತರಿಸಿಕೊಂಡೇಳುವ ಚೈತನ್ಯದಿಂದ

ಕೂಡಿದ ಅಭಿನವ ಶಕ್ತಿಸಂತ ಜನಾಂಗವು ಇದೇ. ನೀನೀಗ ಬದಿಗೆ ಸರಿದರೆ ಅಥವಾ ಮಲಗಿದರೂ ಸಹ ರಾಷ್ಟ್ರಕಾರ್ಯವು ಮುಂದುವರಿಯುವದು ಖಂಡಿತ. ಕಾಲಪ್ರವಾಹದಲ್ಲಿ ನಾಳೆ ನೀನು ಎಲ್ಲಿಯಾದರೂ ಕೊಚ್ಚಿಹೋದಲ್ಲಿ ನಿನ್ನ ಕಾರ್ಯವನ್ನು ತಮ್ಮ ಕೈಯಲ್ಲಿ ತೆಗೆದುಕೊಂಡು ನೀನು ಇದುವರೆಗೆ ಮಾಡಿದ್ದಕ್ಕಿಂತ ಹೆಚ್ಚು ಮಿಗಿಲಾಗಿ ಕಸುವಿನಿಂದ ಕಾರ್ಯ ಸಾಂಗಮಾಡುವರು. ಈ ರಾಷ್ಟ್ರಕ್ಕೆ ಒಂದು ಮಾತನ್ನು ಹೇಳಿ ಕೊಡುವ ಸಾಮರ್ಥ್ಯವು ನನ್ನಿಂದಲೇ ನಿನಗೆ ಬಂದಿರುವದು. ಆ ಮಾತಿನಿಂದ ಈ ರಾಷ್ಟ್ರದ ಅಭ್ಯುದಯಕ್ಕೆ ಸಹಾಯವಾಗುವದು." ಭಗವಂತನು ನನಗೆ ಹೇಳಿಕೊಟ್ಟ ಎರಡನೆಯ ಮಾತೇ ಇದು.

ಆ ಬಳಿಕ ಅಕಸ್ಮಾತ್ತಾಗಿ ಒಂದು ಸಂಗತಿ ಘಟಿಸಿ, ಕ್ಷಣಾರ್ಧದಲ್ಲಿ ನನ್ನನ್ನು ಕಟ್ಟೇಕಾಂತದ ಒಂದು ಕೋಣೆಗೆ ಅವಸರದಲ್ಲಿ ಸ್ಥಳಾಂತರಿಸಿದರು. ಆ ಅವಧಿಯಲ್ಲಿ ನನ್ನೊಳಗೆ ಏನೇನು ನಡೆಯಿತೆಂಬುದನ್ನು ಇಲ್ಲಿ ಹೇಳಲೇಬೇಕೆಂದು ನನಗೆ ಅನಿಸುತ್ತಿಲ್ಲ. ಇಷ್ಟು ಮಾತ್ರ ನಿಜ, ಭಗವಂತನು ಪ್ರತಿದಿನವೂ ತನ್ನ ಆಶ್ಚರ್ಯಗಳನ್ನು ತೋರಿ ಹಿಂದೂಧರ್ಮದ ಪರಮ ಸತ್ಯದ ಸಾಕ್ಷಾತ್ಕಾರವು ನನಗಾಗುವಂತೆ ಆತನು ಮಾಡಿದನು. ಆ ಮೊದಲು ನನ್ನ ತಲೆಯಲ್ಲಿ ಅನೇಕ ಸಂಶಯಗಳಿದ್ದವು. ನನ್ನ ಬಾಲ್ಯವು ಇಂಗ್ಲಂಡದಲ್ಲಿ ಸಂಪೂರ್ಣ ಪರಕೀಯ ವಾತಾವರಣ ಹಾಗು ಪರಕೀಯ ಕಲ್ಪನೆಗಳ ಮಧ್ಯದಲ್ಲಿ ಕಳೆಯಿತು. ಆಗ ನನ್ನ ನಂಬಿಗೆ ಬೇರೊಂದು ಬಗೆಯದಾಗಿತ್ತು. ಹಿಂದೂ ಧರ್ಮದಲ್ಲಿಯ ಅನೇಕ ಮಾತುಗಳು ಕಾಲ್ಪನಿಕವೆಂದೂ ಸ್ವಪ್ನಲೋಕಕ್ಕೇ ಹೆಚ್ಚಾಗಿ ಅವು ಸೇರಿದವುಗಳೆಂದೂ ಈ ಧರ್ಮದಲ್ಲಿ ಹೇಳಿದುದು ಒಂದು ಭ್ರಮೆ ಮತ್ತು ಮಾಯೆಯೆಂದೂ ನಾನು ತಿಳಿದಿದ್ದೆ. ಆದರೆ ಈಗ ದಿನ ದಿನವೂ ಕಳೆದಂತೆ ಹಿಂದೂಧರ್ಮದ ಸತ್ಯ ಸಿದ್ಧಾಂತಗಳು ನನ್ನ ಮನದಲ್ಲಿ, ನನ್ನ ಎದೆಯಲ್ಲಿ, ನನ್ನ ದೇಹದಲ್ಲಿ ಬಿಂಬಿಸಿ ಅವುಗಳ ಅರಿವು ನನಗಾಯಿತು. ಅವೆಲ್ಲಾ ನನಗೆ ಜಾಗೃತ ಅನುಭವಗಳಾಗಿ ಪರಿಣಮಿಸಿದವು. ಯಾವ ಭೌತಿಕ ಶಾಸ್ತ್ರವೂ ತಿಳಿಸಿ ಹೇಳದ ಅನೇಕ ಮಾತುಗಳ ದರ್ಶನವು ನನಗಾಯಿತು. ಮೊಟ್ಟಮೊದಲು ಭಗವಂತನ ಬಳಿಗೆ ನಾನು ಹೋದುದು ಕೇವಲ ಭಕ್ತನೆಂದೂ ಅಲ್ಲ, ಕೇವಲ ಜ್ಞಾನಿಯೆಂದೂ ಅಲ್ಲ. ಸ್ವದೇಶಿ ಚಳವಳಿಯು ಆರಂಭವಾಗುವದಕ್ಕಿಂತ ಮೊದಲೇ, ನಾನು ಬಡೋದೆಯಲ್ಲಿದ್ದಾಗ, ಬಹು ದಿನಗಳ ಹಿಂದೆಯೇ ನನಗೆ ಇಂಥದೊಂದು ಅನುಭವವು ಉಂಟಾಗಿ ಆತನ ಕಡೆಗೆ ನನ್ನ ಪ್ರವೃತ್ತಿಯುಂಟಾಯ್ತು.

ಆಗ ದೇವರ ಕಡೆಗೆ ನನ್ನ ಚಿತ್ತವು ಪ್ರವೃತ್ತಿಗೊಂಡರೂ ಆತನಲ್ಲಿ ನನಗೆ ಸದೈವ ಜಾಗೃತ ಶ್ರದ್ಧೆಯೇ ಇರಲಿಲ್ಲ. ನಾನಿನ್ನೂ ನಿರೀಶ್ವರವಾದಿಯೂ ನಾಸ್ತಿಕನೂ ಆಗಿದ್ದೆ. ಸಂಶಯಾತ್ಮನಾಗಿ ದೇವರ ಅಸ್ತಿತ್ವವನ್ನು ಪೂರ್ಣವಾಗಿ ಒಪ್ಪಿಕೊಳ್ಳುತ್ತಿರಲಿಲ್ಲ. ಈಶಾವಾಸದ ಅನುಭವವೇ ನನಗಿರಲಿಲ್ಲ. ಆದರೂ ಯಾವುದೋ ಒಂದು ಶಕ್ತಿಯು ನನ್ನನ್ನು ವೇದಗಳ ಸತ್ಯರಾಜ್ಯಕ್ಕೆ, ಭಗವದ್ಗೀತೆಯ ಸತ್ಯರಾಜ್ಯಕ್ಕೆ, ಹಿಂದೂಧರ್ಮದ ಸತ್ಯರಾಜ್ಯಕ್ಕೆ ಎಳೆದೊಯ್ಯಿತು. ಈ ಯೋಗದಲ್ಲಿ, ವೇದಾಂತದ ಆಧಾರದ ಮೇಲೆ ನಿಂತಿದ್ದ ಈ ಧರ್ಮದಲ್ಲಿ ಎಲ್ಲಿಯಾದರೂ ಒಂದು ಪ್ರಬಲ ಸತ್ಯವು ಇರಲೇಬೇಕೆಂದು ನನಗನಿಸಿತು. ಹೀಗೆ ಯೋಗದೆಡೆಗೆ ನನ್ನ ಚಿತ್ತವು ಒಲಿದು, ನನ್ನ ಕಲ್ಪನೆ ಸರಿಯಹುದೇನೆಂಬದನ್ನು ಕಂಡುಕೊಳ್ಳಲು ಆ ಯೋಗದ ಅನುಷ್ಠಾನ ಕೈಕೊಳ್ಳಲು ನಾನು ನಿರ್ಧರಿಸಿದೆ. ಆಗ ನಾನು ಭಗವಂತನಿಗೆ ಈ ರೀತಿಯಲ್ಲಿ ಪ್ರಾರ್ಥಿಸಿದೆ: "ನೀನು ಇದ್ದುದು ನಿಜವಿದ್ದಲ್ಲಿ ನೀನು ನನ್ನ ಹೃದಯವನ್ನು ಅರಿತಿರುವೆ. ಮುಕ್ತಿಯನ್ನು ಕೇಳಬಂದಿಲ್ಲವೆಂಬುದನ್ನು ನೀನು ಬಲ್ಲೆ. ಅನ್ಯರು ಕೇಳಬಹುದಾದ ಯಾವುದನ್ನೂ ನಾನು ಕೇಳುತ್ತಿಲ್ಲ. ಈ ರಾಷ್ಟ್ರವನ್ನು ಜಾಗೃತಗೊಳಿಸಬಲ್ಲ ಸಾಮರ್ಥ್ಯವನ್ನು ಮಾತ್ರ ನಾನು ಕೇಳುತ್ತಿದ್ದೇನೆ. ಈ ಜನತೆಗಾಗಿ ನಾನು ಜೀವಿಸುವಂತೆ, ಇವರಿಗಾಗಿ ನಾನು ಕಾರ್ಯಮಾಡುವಂತೆ ನಿನ್ನ ಅನುಮತಿಯ ಬಲವನ್ನು ಮಾತ್ರ ನಾನು ಕೇಳುತ್ತಿದ್ದೇನೆ. ಏಕೆಂದರೆ ಈ ಜನತೆಯನ್ನು ನಾನು ಪ್ರೀತಿಸುತ್ತೇನೆ; ಇವರಿಗಾಗಿ ನನ್ನ ಜೀವನವನ್ನು

ಮೀಸಲಿಡುವ ಸಾಮರ್ಥ್ಯವನ್ನು ದಯಪಾಲಿಸೆಂದು ಪ್ರಾರ್ಥಿಸುತ್ತೇನೆ." ಯೋಗದ ಸಾಕ್ಷಾತ್ಕಾರಕ್ಕಾಗಿ ನಾನು ದೀರ್ಘಪ್ರಯತ್ನಪಟ್ಟೆ; ಸ್ವಲ್ಪ ಮಟ್ಟಿಗೆ ಸಿದ್ಧಿಯೇನೋ ಲಭಿಸಿತು. ಆದರೆ ಯಾವುದನ್ನು ನಾನು ಆತ್ಯಂತಿಕವಾಗಿ ಅಪೇಕ್ಷಿಸಿದ್ದೆನೋ ಅದರಲ್ಲಿ ನನಗೆ ತೃಪ್ತಿಯೆನಿಸಲಿಲ್ಲ. ಆ ಮೇಲೆ ಸೆರೆಮನೆಯ ಶಾಂತಪ್ರಶಾಂತ ಏಕಾಂತ ಸ್ಥಳದಲ್ಲಿ ನನ್ನ ಮೊದಲಿನ ಅಪೇಕ್ಷೆಗಾಗಿ ಮತ್ತೆ ಪ್ರಾರ್ಥಿಸಿದೆ. ನಾನು ಹೀಗೆ ನುಡಿದೆ: "ನಿನ್ನ ಆದೇಶವನ್ನು ನನಗೆ ಕೊಡು ಯಾವ ಕಾರ್ಯವನ್ನು ಹೇಗೆಮಾಡಬೇಕೆಂಬುದೇ ನನಗೆ ತಿಳಿಯದಾಗಿದೆ. ನನಗೊಂದು ಸಂದೇಶ ನೀಡು." ಯೋಗದ ಅನುಸಂಧಾನದಲ್ಲಿ ಎರಡು ಸಂದೇಶಗಳು ಬಂದವು. ಮೊದಲನೆಯ ಸಂದೇಶವು ಹೀಗಿತ್ತು: "ನಿನಗೊಂದು ಕಾರ್ಯವನ್ನು ನಾನು ಕೊಟ್ಟಿದ್ದೇನೆ ಈ ರಾಷ್ಟ್ರದ ಅಭ್ಯುದಯಕ್ಕೆ ಸಹಾಯ ಮಾಡುವದಕ್ಕಾಗಿ ಅದು ಇದೆ. ಕ್ಷಿಪ್ರದಲ್ಲಿಯೇ ಸೆರೆಮನೆಯಿಂದ ನಿನ್ನ ಬಿಡುಗಡೆಯಾಗುವದು. ಈ ಸಲ ನಿನಗೆ ಈ ಪ್ರಕರಣದಲ್ಲಿ ಶಿಕ್ಷೆಯಾಗಬೇಕೆಂದೂ ಇಲ್ಲವೆ ಇತರರಂತೆ ದೇಶಕ್ಕಾಗಿ ಕಷ್ಟಪಡುತ್ತ ನೀನು ಕಾಲಕಳೆಯಬೇಕೆಂದೂ ನನ್ನ ಸಂಕಲ್ಪವಿರುವದಿಲ್ಲ. ನಾನು ಕಾರ್ಯಕ್ಕಾಗಿಯೇ ನಿನ್ನನ್ನು ಕರೆದಿರುವೆ. ನೀನು ಕೇಳಬಯಸಿದ ಆದೇಶವೇ ಇದು. ಮುನ್ನಡೆದು ನನ್ನ ಕಾರ್ಯ ಮಾಡೆಂಬ ಆದೇಶವನ್ನೇ ನಾನು ನಿನಗೆ ಕೊಟ್ಟಿದ್ದೇನೆ.'' ಆ ಮೇಲೆ ಬಂದ ಎರಡನೆಯ ಸಂದೇಶವೇನೆಂದರೆ: ಈ ವರ್ಷದ ಏಕಾಂತವಾಸದ ಅವಧಿಯಲ್ಲಿ ಅದೊಂದು ರಹಸ್ಯವನ್ನು ನಿನಗೆ ತೋರಿಸಿದ್ದೇನೆ. ಅದರ ಬಗ್ಗೆ ನಿನ್ನಲ್ಲಿದ್ದ ಸಂಶಯಗಳನ್ನು ನಿವಾರಿಸಿದ್ದೇನೆ. ಅದೇ ಹಿಂದೂ ಧರ್ಮದ ಸತ್ಯವು. ಜಗತ್ತಿನೆದುರು ಈ ಧರ್ಮವನ್ನು ನಾನು ಎತ್ತಿ ನಿಲ್ಲಿಸುತ್ತಿದ್ದೇನೆ. ಋಷಿಗಳ–ಸಂತರ–ಅವತಾರಗಳ ಮುಖಾಂತರವಾಗಿ ಇದನ್ನು ವಿಕಾಸಗೊಳಿಸುತ್ತ ನಾನು ಪರಿಪೂರ್ಣಗೊಳಿಸಿದ್ದೇನೆ. ಇನ್ನು ಬಳಿಕ ಈ ಧರ್ಮವು ನನ್ನ ಕಾರ್ಯವನ್ನು ರಾಷ್ಟ್ರಗಳ ಮಧ್ಯದಲ್ಲಿ ಮುಂದುವರಿಸಲಿದೆ. ನನ್ನ ಸಂದೇಶವನ್ನು ಎಲ್ಲೆಡೆ ಕಳುಹುವದಕ್ಕಾಗಿ ನಾನು ಈ ದೇಶವನ್ನು ಮೇಲಕ್ಕೆ ಎತ್ತುತ್ತಿರುವೆ. ನನ್ನ ಸಂದೇಶವೇ ಈ ಸನಾತನ ಧರ್ಮವು; ಇದುವೇ ಶಾಶ್ವತ ಧರ್ಮವು. ಇದನ್ನು ನೀನು ಮೊದಲು ನಿಜವಾಗಿಯೂ ತಿಳಿದಿರಲಿಲ್ಲ; ಅದರ ರಹಸ್ಯವನ್ನು ನಾನೀಗ ನಿನಗೆ ಪ್ರಕಟಿಸಿ ತೋರಿಸಿದ್ದೇನೆ. ನಿನ್ನಲ್ಲಿದ್ದ ನಾಸ್ತಿಕನಿಗೆ–– ಸಂಶಯವಾದಿಗೆ ಉತ್ತರವನ್ನು ಕೊಟ್ಟಿದ್ದೇನೆ. ನಿನ್ನ ಒಳಗೂ ಹೊರಗೂ ಬಾಹ್ಯ ಮತ್ತು ಆಂತರಿಕ ನಿದರ್ಶನಗಳನ್ನು ನಿನಗಿತ್ತಿದ್ದೇನೆ. ಅವುಗಳಿಂದ ನಿನಗೆ ತೃಪ್ತಿಯಾಗಿದೆ. ನೀನು ಹೊರಬಿದ್ದೊಡನೆ ನಿನ್ನ ರಾಷ್ಟ್ರಕ್ಕೆ ನನ್ನ ಈ ಮಾತನ್ನು ಹೇಳು. ಸನಾತನ ಧರ್ಮಕ್ಕಾಗಿ ಜನಾಂಗವು ಎಚ್ಚತ್ತಿದೆಯೆಂದೂ, ಜಗತ್ತಿಗೆಂದಲ್ಲದೆ ಸ್ವಾರ್ಥಕ್ಕಾಗಿ ರಾಷ್ಟ್ರವು ಎಚ್ಚತ್ತಿಲ್ಲವೆಂದೂ ನಿನ್ನ ಜನರಿಗೆ ಹೇಳು. ಜಗತ್ತಿನ ಸೇವೆಗಾಗಿ ನಾನು ಅವರಿಗೆ ಸ್ವಾತಂತ್ರ್ಯವನ್ನು ಕೊಡುತ್ತಿದ್ದೇನೆ. ಭಾರತರಾಷ್ಟ್ರವು ತಲೆಯೆತ್ತುವುದೆಂದು ನಾವು ಅಂದಾಗ ಅದರ ಅರ್ಥವಿಷ್ಟೇ–ಸನಾತನ ಧರ್ಮವು ತಲೆಯೆತ್ತುವುದೆಂದು. ಭಾರತರಾಷ್ಟ್ರವು ಘನತೆ ಪಡೆಯುವದೆಂದು ನಾವು ಅಂದಾಗ ಅದರ ಅರ್ಥವಿಷ್ಟೇ ಸನಾತನ ಧರ್ಮವು ಘನತೆಪಡೆಯುವುದೆಂದು. ಭಾರತ ರಾಷ್ಟ್ರವು ವಿಶಾಲವೂ ವಿಸ್ತೃತವೂ ಆಗುವುದೆಂದು ನಾವು ಅಂದಾಗ ಅದರಅರ್ಥವಿಷ್ಟೇ– ಸನಾತನ ಧರ್ಮವು ಜಗದ ತುಂಬಾ ವಿಶಾಲವೂ ವಿಸ್ತೃತವೂ ಆಗುವುದೆಂದು. ಧರ್ಮಕ್ಕಾಗಿ ಧರ್ಮದಿಂದಲೇ ಭಾರತವು ಬದುಕಿದೆ. ಧರ್ಮವನ್ನು ಮಹತ್ತರಗೊಳಿಸಿದರೆ ದೇಶವು ಮಹತ್ತರವಾಗುವುದು. ನಾನು ಸರ್ವತ್ರ ಸರ್ವ ಜನರಲ್ಲಿ ಸರ್ವ ವಸ್ತುಗಳಲ್ಲಿ ಇದ್ದೇನೆಂಬುದನ್ನೂ, ಈ ಆಂದೋಲನದಲ್ಲಿ ನಾನು ಇದ್ದೇನೆಂಬುದನ್ನೂ ಮತ್ತು ದೇಶಕ್ಕಾಗಿ ಕಷ್ಟಪಡುತ್ತಿರುವ ಜನರಲ್ಲಿಷ್ಟೇ ನಾನಿರದೆ ಅವರನ್ನು ಎದುರಿಸಿ ಅಡ್ಡಗಟ್ಟುತ್ತಿರುವ ವಿರೋಧಿಗಳಲ್ಲೂ ನಾನು ಇದ್ದೇನೆಂಬುದನ್ನೂ ನಿನಗೆ ತೋರಿಸಿಕೊಟ್ಟಿದ್ದೇನೆ. ಪ್ರತಿಯೊಬ್ಬನ ಹೃದ್ದೇಶದಲ್ಲಿ ನಾನು ನಿಂತು ಕಾರ್ಯ ಮಾಡುತ್ತಿದ್ದೇನೆ. ಜನರು ಏನೇ ಭಾವಿಸಿರಲಿ, ಏನೇ ಮಾಡಲಿ ನನ್ನ ಸಂಕಲ್ಪಕ್ಕೆ ಸಹಾಯವಾಗದಂತಹುದನ್ನು ಯಾವುದನ್ನೂ ಅವರು ಮಾಡಲಾರರು. ಅವರೂ ನನ್ನ ಕಾರ್ಯವನ್ನೇ ಮಾಡುತ್ತಿದ್ದಾರೆ; ಅವರು ನನ್ನ ಶತ್ರುಗಳಲ್ಲ, ನನ್ನ ಕಾರ್ಯಕ್ಕೆ ನಿಮಿತ್ತಮಾತ್ರರು. ನಿನ್ನೆಲ್ಲ ಕೃತಿಗಳಲ್ಲಿ ನೀನೆತ್ತ ಸಾಗಿರುವಿಯೆಂಬುದನ್ನು ಅರಿಯದೇನೇ ನೀನು ಮುನ್ನುಗ್ಗುತ್ತಿರುವಿ. ನಿನ್ನ ಮನಸ್ಸಿನಲ್ಲಿ

ದ್ದುದು ಒಂದು, ನೀನು ಮಾಡುತ್ತಿರುವುದು ಮತ್ತೊಂದು. ನೀನು ಗುರಿಯಿಟ್ಟು ಬಯಸಿದ ಫಲವೊಂದು, ನಿನ್ನ ಪ್ರಯತ್ನಗಳು ಪಕ್ವಗೊಳಿಸುತ್ತಿರುವ ಫಲವೇ ಬೇರೊಂದು ಅಥವಾ ತದ್ವಿರುದ್ಧವಾದುದು. ಶಕ್ತಿಮಾತೆ ಮುನ್ನುಗ್ಗಿ ಜನತೆಯಲ್ಲಿ ಪ್ರವೇಶ ಮಾಡಿದ್ದಾಳೆ. ಬಹು ದಿನಗಳಿಂದ ಈ ರಾಷ್ಟ್ರವನ್ನು ಊರ್ಧ್ವಕ್ರಾಂತಿಗಾಗಿ ಅಣಿಮಾಡುತ್ತಿದ್ದೇನೆ. ಈಗ ಸುಸಮಯ ಬಂದಿದೆ. ಆ ಕ್ರಾಂತಿಯ ಸಿದ್ಧಿಗಾಗಿ ನಾನೇ ಮಾರ್ಗದರ್ಶನ ಮಾಡುತ್ತಿದ್ದೇನೆ. ''

ಇದುವೇ ನಾನು ನಿಮಗೆ ಹೇಳಬೇಕಾಗಿದ್ದ ಮಾತು. ನಿಮ್ಮ ಸಂಸ್ಥೆಯ ಹೆಸರು '' ಧರ್ಮರಕ್ಷಿಣೀ ಸಭಾ '' ಎಂದು. ಹೌದು. ಧರ್ಮರಕ್ಷಿಣಿಯೇ —ಅಂದರೆ ಹಿಂದೂ ಧರ್ಮವನ್ನು ಜಗತ್ತಿನೆದುರು ತಲೆಯೆತ್ತಿ ನಿಲ್ಲುವಂತೆ ಮಾಡುವದೇ ನಮ್ಮೆದುರಿಗಿನ ಕಾರ್ಯ. ಆದರೆ ಹಿಂದೂಧರ್ಮವೆಂದರೇನು ? ಸನಾತನ–ಶಾಶ್ವತ ಧರ್ಮವೆಂದು ನಾವು ಕರೆಯುವ ಈ ಧರ್ಮದ ಸ್ವರೂಪವಾದರೂ ಏನು? ಅದಕ್ಕೆ ಹಿಂದೂಧರ್ಮವೆಂಬ ಹೆಸರು ಬಂದದ್ದೇಕೆಂದರೆ ಹಿಂದೂರಾಷ್ಟ್ರವು ಅದನ್ನು ಉಳಿಸಿಕೊಂಡು ಬಂದಿದೆಯೆಂಬ ಮಾತ್ರಕ್ಕೆ; ಈ ದ್ವೀಪಕಲ್ಪದಲ್ಲಿ ಸಾಗರ ಮತ್ತು ಹಿಮಾಲಯಗಳಿಂದ ಸುತ್ತುಗಟ್ಟಲ್ಪಟ್ಟ ಈ ಏಕಾಂತ ಪ್ರದೇಶದಲ್ಲಿ ಅದು ಬೆಳೆದು ಬಂದಿದೆಯೆಂಬ ಮಾತ್ರಕ್ಕೆ ಯುಗ ಯುಗಾಂತರಗಳಿಂದ ಈ ಪವಿತ್ರ ಪ್ರಾಚೀನ ದೇಶದಲ್ಲಿ ಈ ಧರ್ಮವನ್ನು ಕಾಯ್ದುಕೊಂಡಿರುವ ಕಾರ್ಯವನ್ನು ಆರ್ಯ ಜನಾಂಗದ ವಶಕ್ಕೆ ಒಪ್ಪಿಸಲಾಯಿತೆಂಬ ಮಾತ್ರಕ್ಕೆ. ಆದರೆ ಈ ಧರ್ಮವು ವಿಶಿಷ್ಟ ಮೇರೆಗಳನ್ನುಳ್ಳ ಒಂದೇ ಒಂದು ದೇಶಕ್ಕೆ ಮರ್ಯಾದಿತವಾಗಿಲ್ಲ. ಪೃಥ್ವಿಯ ಒಂದು ವಿಶಿಷ್ಟ ಪ್ರದೇಶಕ್ಕೇನೇ ಸರ್ವ ಕಾಲವೂ ವಿಶಿಷ್ಟವಾಗಿ ಸಂಬಂಧಿಸಿದ್ದೇನೂ ಅದು ಇಲ್ಲ. ನಾವು ಹಿಂದೂ ಧರ್ಮವೆಂದು ಹೆಸರಿಟ್ಟು ಕರೆಯುವ ಧರ್ಮವು ನಿಜವಾಗಿ ಶಾಶ್ವತ ಧರ್ಮವು ; ಏಕೆಂದರೆ ಅದು ಎಲ್ಲ ಧರ್ಮಗಳನ್ನೂ ಒಳಗೊಂಡ ವಿಶ್ವಧರ್ಮವು. ಧರ್ಮವು ವಿಶ್ವ–ಧರ್ಮವಾಗಿರದಿದ್ದರೆ ಅದು ಶಾಶ್ವತ ಧರ್ಮವಾಗಲಾರದು. ಧರ್ಮವು ಸಂಕುಚಿತ ವಾದರೆ, ಏಕಪಂಥೀಯವಾದರೆ, ಪ್ರತ್ಯೇಕವಾದುದಾದರೆ ಅದು ಕೆಲಕಾಲದ ಮಟ್ಟಿಗೆ ಕ್ಲಿಪ್ತ ಉದ್ದೇಶಕ್ಕಾಗಿ ಮಾತ್ರ ಬಾಳಬಲ್ಲದು. ಇಂದಿನ ವಿಜ್ಞಾನದ ಶೋಧನೆಗಳನ್ನೂ ತತ್ತ್ವಜ್ಞಾನದ ತರ್ಕಗಳನ್ನೂ ಮುಂಗಂಡು ಒಳಗೊಂಡು ಭೌತಿಕವಾದವನ್ನು ಮೆಟ್ಟಿ ನಿಲ್ಲಬಹುದಾದ ಒಂದೇ ಒಂದು ಧರ್ಮವೆಂದರೆ ಇದೇ ಸರಿ. ಜೀವ-ದೇವ ಸಾಮೀಪ್ಯವನ್ನು ಮಾನವ ಕುಲಕ್ಕೆ ಬಿಂಬಿಸಿ ಹೇಳಬಲ್ಲ ಹಾಗು ಮಾನವನು ದೇವಸಂನಿಧಿಗೆ ಹೋಗಲು ಸಾಧ್ಯವಿದ್ದ ಎಲ್ಲ ಸಾಧನಗಳನ್ನೂ ತನ್ನ ಆವರಣದಲ್ಲಿ ಒಳಗೊಂಡ ಒಂದೇ ಒಂದು ಧರ್ಮವೆಂದರೆ ಇದೇ. 'ಭಗವಂತನು ಎಲ್ಲ ಮಾನವರಲ್ಲೂ ಎಲ್ಲ ವಸ್ತುಗಳಲ್ಲೂ ಉಂಟು ; ಅವನಲ್ಲಿಯೇ ನಾವು ಚಲಿಸುತ್ತಿದ್ದು ಆವನಲ್ಲಿಯೇ ನಮ್ಮ ಅಸ್ತಿತ್ವವಿದೆ' ಎಂಬೀ ಸತ್ಯವನ್ನು ಎಲ್ಲ ಧರ್ಮಗಳೂ ಒಪ್ಪಿಕೊಂಡಿವೆ ನಿಜ ; ಆದರೆ ಈ ಸತ್ಯದ ಆಗ್ರಹವನ್ನು ಪ್ರತಿಕ್ಷಣಕ್ಕೂ ಹಿಡಿಯುವ ಧರ್ಮವೆಂದರೆ ಇದೊಂದೇ. ಈ ಸತ್ಯವನ್ನು ಅರಿತು ನಂಬಲು ಇಷ್ಟೇ ಅಲ್ಲ–ಅದನ್ನು ನಮ್ಮ ಜೀವದ ಕಣಕಣದಲ್ಲೂ ಸಾಕ್ಷಾತ್ಕರಿಸಿಕೊಳ್ಳಲು ನಮಗೆ ಶಕ್ತಿಯನ್ನೀವ ಒಂದೇ ಒಂದು ಧರ್ಮವೆಂದರೆ ಇದು. ಜಗತ್ತು ವಾಸುದೇವನ ಲೀಲೆಯೆಂಬ ವಸ್ತುಸ್ಥಿತಿಯನ್ನು ಜಗತ್ತಿಗೆ ತೋರಿಸುವ ಒಂದೇ ಒಂದು ಧರ್ಮವೆಂದರೇ ಇದು. ಆ ಲೀಲೆಯ ಅತ್ಯಂತ ಸೂಕ್ಷ್ಮಧರ್ಮಗಳನ್ನೂ ಅತ್ಯಂತ ಉದಾತ್ತ ನಿಯಮಗಳನ್ನೂ ನಮಗೆ ತೋರಿಸುತ್ತ ನಾವು ಆ ಲೀಲೆಯಲ್ಲಿ ಉತ್ತಮ ಪಾತ್ರವನ್ನು ಹೇಗೆ ವಹಿಸಬಲ್ಲೆವೆಂಬುದನ್ನು ತೋರ್ಪಡಿಸುವ ಒಂದೇ ಒಂದು ಧರ್ಮವೆಂದರ ಇದು. ಜೀವನದ ಎಂಥ ಸಣ್ಣ ವಿವರಗಳನ್ನೂ ಧರ್ಮದಿಂದ ಬೇರ್ಪಡಿಸದೆ, ಅಮೃತ ತತ್ತ್ವವನ್ನು ತಿಳಿದುಕೊಂಡು ಮರಣವೆಂಬ ವಸ್ತುಸ್ಥಿತಿಯನ್ನು ಸಂಪೂರ್ಣವಾಗಿ ನಮ್ಮಿಂದ ದೂರ ಇರಿಸಿದ ಒಂದೇ ಒಂದು ಧರ್ಮವೆಂದರೆ ಇದೇ.

ಇಂದು ನಿಮಗೆ ಹೇಳಬೇಕೆಂದು ನನ್ನ ಬಾಯಿಯಲ್ಲಿ ಆತನೇ ಇಟ್ಟ ಮಾತಿದು. ಉಪನ್ಯಾಸ ಮಾಡಬೇಕೆಂದು ಮೊದಲು ನಾನು ಭಾವಿಸಿದ್ದನ್ನೆಲ್ಲಾ ಆತನು ನನ್ನಿಂದ ಕಿತ್ತೊಗೆದನು. ನನಗೆ ಆದೇಶ

ವಿಸ್ತೃತವಾಗಿ ದಕ್ಕಿಂತ ಹೆಚ್ಚಿಗೆ ನಾನೇನು ಹೇಳುವುದಿಲ್ಲ. ನಿಮ್ಮನ್ನು ಕುರಿತು ನಾನು ಹೇಳಬೇಕೆಂದು ಪ್ರೇರಣೆಯಾದ ಮಾತು ಮಾತ್ರ ಇದು. ಆ ಮಾತು ಇಲ್ಲಿಗೆ ಮುಗಿಯಿತು. ಇದಕ್ಕೂ ಮುಂಚೆ ಒಮ್ಮೆ ನಾನಿಲ್ಲಿ ಮಾತನಾಡಿದಾಗ ಈ ಆಂದೋಲನವು ರಾಜಕೀಯ ಆಂದೋಲನವಲ್ಲವೆಂದೂ ರಾಷ್ಟ್ರೀಯತ್ವವೆಂದರೆ ರಾಜಕಾರಣವಲ್ಲವೆಂದೂ ಅದೊಂದು ಧರ್ಮ, ಧ್ಯೇಯ, ಶ್ರದ್ಧೆಯೆಂದೂ ನಾನು ಇಷ್ಟೇ ಶಕ್ತಿಯುತವಾಗಿ ಹೇಳಿದ್ದು ಸ್ಮರಣೆಗೆ ಬರುತ್ತದೆ. ಅದನ್ನೇ ಇಂದು ನಾನು ಪುನಃ ಉಚ್ಚರಿಸುತ್ತೇನೆ. ಆದರೆ ಮತ್ತೊಂದು ರೀತಿಯಲ್ಲಿ ಅದನ್ನು ಇಡಬಯಸುತ್ತೇನೆ. ರಾಷ್ಟ್ರೀಯತ್ವವೆಂದರೆ ಒಂದು ಧರ್ಮ, ಧ್ಯೇಯ, ಶ್ರದ್ಧೆಯೆಂದು ಇನ್ನು ಮುಂದೆ ನಾನು ಹೇಳುವದಿಲ್ಲ; ಆದರೆ ಸನಾತನ ಧರ್ಮವೇ ನಮಗೆ ರಾಷ್ಟ್ರಧರ್ಮವೆಂದು ನಾನೀಗ ಅನ್ನುತ್ತೇನೆ. ಈ ಭಾರತ ರಾಷ್ಟ್ರವು ಈ ಸನಾತನ ಧರ್ಮದೊಂದಿಗೆ ಹುಟ್ಟಿದೆ; ಅದರೊಂದಿಗೇನೇ ಅದು ಚಲಿಸುತ್ತಿದೆಯಲ್ಲದೆ ಅದರೊಂದಿಗೇನೇ ಅದು ಬೆಳೆಯುತ್ತಿದೆ. ಸನಾತನ ಧರ್ಮವು ಇಳಿಮುಖವಾದಾಗ ರಾಷ್ಟ್ರವು ಇಳಿಮುಖವಾಗುವದು. ಸನಾತನ ಧರ್ಮವು ಎಂದಾದರೂ ಅಳಿಯಬಲ್ಲುದಾದರೆ ರಾಷ್ಟ್ರವೂ ಆ ಸನಾತನ ಧರ್ಮದೊಡನೆ ಅಳಿಯುವುದು. ಸನಾತನ ಧರ್ಮವೇ ರಾಷ್ಟ್ರ ಧರ್ಮವು. ಇದೇ ನಾನು ನಿಮಗೆ ಹೇಳಬೇಕಾದ ಸಂದೇಶ.

—**ಶ್ರೀ ಅರವಿಂದರು**

ಪ್ರಹ್ಲಾದ ನರೇಗಲ್ಲ ಮತ್ತು ರಾಘವೇಂದ್ರ ಬಾಗಲ
(ಅನುವಾದಕರು)

If *all* the life is to be Yoga, what is there that can be called petty or of no importance?

—*Sri Aurobindo*

ಜೀವನವೆಲ್ಲಾ ಯೋಗವಾಗಿ ಪರಿಣಮಿಸುವುದಾದರೆ, ಯಾವುದನ್ನು ನಾವು ಕ್ಷುಲ್ಲಕವೆಂದಾಗಲಿ ಮಹತ್ತ್ವವಿಲ್ಲದ್ದೆಂದಾಗಲಿ ಎಣಿಸಬಹುದು?

—**ಶ್ರೀ ಅರವಿಂದರು**

The more one develops the psychic, the more is it possible for the Grace to act.

—*Sri Aurobindo*

ನಮ್ಮಲ್ಲಿ ಚೈತ್ಯಾಂಶವನ್ನು ಬೆಳಿಸಿದಷ್ಟೂ ಭಗವತ್-ಕೃಪೆಯ ಪ್ರಭಾವಕ್ಕೆ ಹೆಚ್ಚು ಹೆಚ್ಚಿನ ಅವಕಾಶವನ್ನು ಕಲ್ಪಿಸಿದಂತಾಗುವದು.

—**ಶ್ರೀ ಅರವಿಂದರು**

# ವಿಕಾಸಕ್ರಮದಲ್ಲಿ ಅನಿಷ್ಟದ ಪಾತ್ರ

## THE ROLE OF EVIL IN EVOLUTION

*Evil turns back to its original good*
*And sorrow lies upon the breasts of Bliss.*

—Savitri

## ಅನಿಷ್ಟದ ಮೂಲ

ಜ್ಞಾನ, ಸತ್ಯ, ಸೌಂದರ್ಯ, ಶಕ್ತಿ, ಐಕ್ಯ ಇವುಗಳು ದೈವೀ ಚಿಹ್ನೆಗಳು. ಇವುಗಳ ಅಭಾವದ ಒಟ್ಟು ಫಲವಾಗಿ ಜೀವನದಲ್ಲಿ ದುಃಖ ತುಂಬಿಕೊಂಡಿದೆ. ಅಪೂರ್ಣದೃಷ್ಟಿಯ ಮಾನವನು ಇದನ್ನು ಅರಿತುಕೊಳ್ಳದೆ ಕೇವಲ ನೀತಿ, ಸುಖ ಇವುಗಳ ಅಭಾವವನ್ನು ಅಂದರೆ ಅನಿಷ್ಟಯಾತನೆ ಇವುಗಳನ್ನು ಮಾತ್ರ ಗಮನಿಸುತ್ತಾನೆ,– ಎಂಬುದು ಶ್ರೀ ಅರವಿಂದರ ವಿಚಾರ ಸರಣಿ. ಅವರ ಪೂರ್ಣಯೋಗವು ಮಾನವನ ಅಪೂರ್ಣ ದೃಷ್ಟಿಯನ್ನು ಕಳೆಯುವ ಗುರಿಯತ್ತ ಸಾಗುತ್ತಿದೆ. ಜೀವನದಲ್ಲಿಯ ಅಪೂರ್ಣದೃಷ್ಟಿ ಅಳಿದಾಗ ಅದರ ಫಲಗಳಾದ ಅನಿಷ್ಟ, ಯಾತನೆ, ಇವುಗಳೂ ಅಳಿಯುತ್ತಿವೆಯೆಂಬುದು ಅವರ ಸಿದ್ಧಾಂತವಾಗಿದೆ.

ಅಪೂರ್ಣದೃಷ್ಟಿಯು ಜೀವನದಲ್ಲಿ ಅನಿಷ್ಟದ ಅನುಭವಕ್ಕೆ ಕಾರಣವಾಗಿದ್ದರೆ ಮಾನವನ ಅಹಂಕಾರ, ಭಿನ್ನತಾ ಭಾವನೆಗಳು ಅದನ್ನು ಹೆಚ್ಚಿಸಲು ಸಹಾನುಕಾರಿಯಾಗುತ್ತಿವೆಯೆಂದೂ ಶ್ರೀ ಅರವಿಂದರು ಹೇಳುತ್ತಾರೆ. ಹಾಗಾದರೆ ಜೀವನದಲ್ಲಿಯ ಅನಿಷ್ಟಯಾತನೆಗಳು ಅಳಿಯಬೇಕಾದರೆ ಮಾನವನ ಅಪೂರ್ಣ ದೃಷ್ಟಿ ಅಳಿಯಬೇಕು, ಎಂದ ಹಾಗಾಯಿತು. ನಡೆಯುತ್ತಿರುವ ಅನಿಷ್ಟದ ಬಗೆಗೇ ಮಾನವನು ತಲ್ಲಣಗೊಳ್ಳದೆ ಅಹಂಕಾರ, ಮಮಕಾರ, ಭಿನ್ನತಾಭಾವಗಳನ್ನು ಹೊಡೆದೋಡಿಸಲು ಯತ್ನಿಸಬೇಕು. ಹಾಗೂ ಪೂರ್ಣದೃಷ್ಟಿಯನ್ನು ಬೆಳೆಯಿಸಿಕೊಂಡು ವಿಶ್ವದ ವ್ಯವಹಾರಗಳನ್ನು ಅರ್ಥೈಯಲು ಸಮರ್ಥನಾಗಬೇಕು. ಹೀಗಾದಲ್ಲಿ ಅನಿಷ್ಟದ ಸಂವೇದನೆಯು ನಮ್ಮನ್ನು ಬಾಧಿಸಲಾರದೆಂಬುದೂ ನಿಜ.

## ಜೀವನದಲ್ಲಿ ಅನಿಷ್ಟದ ಪಾತ್ರ

ಈ ಸಂದರ್ಭದಲ್ಲಿ ಜೀವನದಲ್ಲಿ ಅನಿಷ್ಟದ ಪಾತ್ರವೇನೆಂಬುದನ್ನು ಕುರಿತು ಶ್ರೀ ತಾಯಿಯವರ ವಿಚಾರ ಪ್ರಣಾಲಿ ಹೀಗಿದೆ: ಅನಿಷ್ಟವು ಒಂದು ಬಗೆಯ ಕತ್ತಲೆಯ ಅನುಭವವಿದ್ದಂತೆ. ಈ ಅನುಭವದಿಂದ ಕೂಡ ನಮಗೆ ಹೊಸ ಬೆಳಕು ಗೋಚರವಾಗಬಹುದು. ಕೇವಲ ಇಷ್ಟವಾದುದರ ಮೂಲಕ ನಮಗೆ ಪೂರ್ಣ ಅನುಭವವು ದೊರೆತಂತೆ ಆಗುವುದಿಲ್ಲ. ಜೀವನದಲ್ಲಿ ಅನಿಷ್ಟದ ಅಸ್ತಿತ್ವವು ದೈವೀ

ಶಕ್ತಿಯ ಅವತರಣಕ್ಕೆ ಚಾಲನೆಕೊಡುವುದು; ಅದರಿಂದ ದೈವೀಕೃಪೆಯು ಹೊರಹೊಮ್ಮುವುದು. ಸಂಕಟ ಗಳ ಮಧ್ಯದಲ್ಲಿಯೇ ದೈವೀ ಆನಂದದ ಅನುಭವವು ಅನೇಕ ಸಲ ವೇದ್ಯವಾಗುತ್ತಿದೆ.

ತಾಯಿಯವರ ಈ ವಿಚಾರ ಸರಣಿಯನ್ನು ಹಿನ್ನೆಲೆಯಾಗಿಟ್ಟುಕೊಂಡು ಕೆಲವೊಂದು ವಿವೇಚನೆ ಯನ್ನಿಲ್ಲಿ ಕೊಡಬಹುದಾಗಿದೆ.

ಭೀಕರವಾದ ಕತ್ತಲೆಯು ಮುಂಬರುವ ಅರುಣೋದಯದ ಆಶೆಯನ್ನೂ ಹುಟ್ಟಿಸುತ್ತಿದೆ. ಹೀಗೆ ಹೇಳುವಾಗ ಕತ್ತಲೆಯು ಅಪೇಕ್ಷಣೀಯವೆಂದು ಹೇಳಿದಂತಾಗಲಿಲ್ಲ; ಆದರೆ ಅದು ಅನಿವಾರ್ಯವೆಂಬು ದನ್ನು ಗುರುತಿಸಿದಂತಾಗುತ್ತಿದೆ. ಯಾತನೆಯ ಅನುಭವವನ್ನು ಹಳಿಯುತ್ತ ಕೂಡುವುದರಲ್ಲಿ ಪ್ರಯೋಜನ ವೇನಿದೆ? ಅದಕ್ಕೆ ಪ್ರತಿಯಾಗಿ ಯಾತನೆಯ ಅನುಭವದಿಂದ ದೈವೀ ಶಕ್ತಿ ಮಾನವ ಭೂಮಿಯಲ್ಲಿ ಇಳಿ ಯಲು ಅನುಕೂಲವಾಗುತ್ತಿದೆಯೆಂದು ಸಮಾಧಾನ ಪಡೆದುಕೊಳ್ಳುವುದು ಲೇಸಲ್ಲವೇ? ನಮ್ಮ ಹಿಂದಿನ ಸಾಧು ಶರಣರು ಯಾತನೆಯನ್ನು ಬೇಡಿಬಯಸಿದ ಉದಾಹರಣೆಗಳೂ ಇವೆಯಷ್ಟೇ? ನಾವಾಗಿಯೇ ಯಾತನೆಯನ್ನು ಬೇಡಿಬಯಸಬೇಕೆಂದೇನೂ ಅಲ್ಲ. ಆದರೆ ಅವು ಅನಿವಾರ್ಯವಾಗಿ ಬಂದಾಗ ಅವುಗಳ ಬಗೆಗೆ ನಾವು ಸರಿಯಾದ ಮನೋಭಾವವನ್ನು ಬಲಿಸಿಕೊಳ್ಳುವುದು ಉಚಿತವಾದ ಮಾರ್ಗವೆಂದು ತೋರು ತ್ತಿದೆ. 'ಬಂದದ್ದೆಲ್ಲ ಬರಲಿ ಗೋವಿಂದನ ದಯೆಯೊಂದಿರಲಿ', ಎಂಬ ಪುರಂದರದಾಸರ ಉಕ್ತಿಯಲ್ಲಿಯೂ ಈ ಭಾವ ಅಡಕವಾಗಿರುವುದನ್ನು ನಾವು ಕಾಣುತ್ತೇವೆ. 'ಬಪ್ಪುದು ತಪ್ಪದು' ಎಂಬ ಬಸವಣ್ಣನವರ ವೀರವಾಣಿಯಲ್ಲಿಯ ಕೆಚ್ಚು ಈ ದಿಶೆಯಲ್ಲಿ ನಮಗೆ ಮಾರ್ಗದರ್ಶಕವಾಗಿದೆ. ಅಚಲವಾದ ಮನೋವೃತ್ತಿ ನಮ್ಮಲ್ಲಿ ಬೆಳೆದುಬಂದರೆ ಯಾತನೆಯ ಅನುಭವವು ನಮ್ಮನ್ನು ಬಾಧಿಸಲಾರದು. ಅಂತಹ ಮನೋವೃತ್ತಿ ಯನ್ನು ಬಲಿಸಲೆಂದೇ ಅನಿಷ್ಟಗಳು ನಮಗೆ ಒದಗುತ್ತಿವೆಯೆಂದು ತಿಳಿಯಬಹುದಲ್ಲವೇ?

ಜೀವನದ ಬಗೆಗೆ ಅತೃಪ್ತಿಯನ್ನು, ನಿರಾಶೆಯನ್ನು ತಳೆಯುವುದು ಮಾನವರಿಗೆ ಸಹಜವೇನೋ ಆಹುದು. ಆದರೆ ಹೀಗೆ ಮಾಡುವುದರಿಂದ ದೈವೀಶಕ್ತಿಯ ಬಗೆಗೆ ಸಂದೇಹ ತಳೆದಂತಾಗುತ್ತಿದೆಯೆಂಬ ಮಾತನ್ನೂ ನಾವು ಲಕ್ಷಿಸಬೇಕಾಗುತ್ತಿದೆ. 'ಬಪ್ಪುದು ತಪ್ಪದು' ಎಂಬ ಅಚಲ ಮನೋಭಾವವನ್ನಿಟ್ಟು ಕೊಂಡು ದೇವರ ದಯೆಯ ಬಗೆಗೆ ವಿಶ್ವಾಸವಿಟ್ಟು ನಾವು ಜೀವನಾಪಥದಲ್ಲಿ ಮುಂದುವರಿಯುವುದಾದರೆ ಅನಿಷ್ಟವು ನಮ್ಮನ್ನು ಬಾಧಿಸಬೇಕಾಗಿಲ್ಲ. ಅನಿಷ್ಟವನ್ನು ಅದರ ಮಾನಸಿಕ ಅನುಭವವಾದ ಯಾತನೆಯನ್ನು ಕುರಿತು ಇಂತಹ ಮನೋಭಾವವನ್ನು ಬಲಿಸಿಕೊಳ್ಳಬೇಕೆನ್ನುವ ಬೋಧೆಯು ಶ್ರೀ ಅರವಿಂದ ವಾಣಿಯಲ್ಲಿದೆ. ಅದನ್ನು ಹೀಗೆ ಸಂಗ್ರಹಿಸಬಹುದು.

ಜೀವನದಲ್ಲಿ ನಮಗೆ ಅನಿಷ್ಟವೆಂದು ತೋರುವುದು ಕೇವಲ ಮೇಲು ಪದರಿನ ಪ್ರತಿಕ್ರಿಯೆ ಮಾತ್ರ. ಅಂತರಾಳದಲ್ಲಿ ಇಳಿದು ನಾವು ಪೂರ್ಣದೃಷ್ಟಿಯಿಂದ ವ್ಯವಹರಿಸಲು ಸಮರ್ಥರಾದರೆ ಅದನ್ನು ನಾವು ಹೊಡೆದೋಡಿಸಬಲ್ಲೆವು. ಯಾತನೆಯ ಅನುಭವವು ಇಲ್ಲದೆ ಹೋದರೆ ಸುಖದ ಪರಿಣಾಮವು ಅಷ್ಟೊಂದು ತೀವ್ರವಾಗುವುದಿಲ್ಲ. ಇದರಂತೆಯೆ ಅಜ್ಞಾನ, ಅಸತ್ಯ ದೌರ್ಬಲ್ಯಗಳ ಪರಿಚಯವು ಇಲ್ಲದೆ ಹೋದರೆ ಜ್ಞಾನ, ಶಕ್ತಿ, ಇವುಗಳ ಅನುಭವವು ಅಷ್ಟೊಂದು ಪರಿಣಾಮಕಾರಿಯಾಗುವುದಿಲ್ಲ. **ಪರಿಪೂರ್ಣತೆಯ ಅಭಾವವೇ ಅನಿಷ್ಟದ ಅನುಭವಕ್ಕೆ ಕಾರಣವಾಗಿದೆ.** ಆದರೆ ಅನಿಷ್ಟದ ಮುಖಾಂತರ ಇಷ್ಟವಾದು ದನ್ನು ಪಡೆಯಲು ನಮಗೆ ಪ್ರಚೋದನೆ ದೊರೆಯುತ್ತಿದೆ. ಅನಿಷ್ಟವು ಅಚೇತನದ ಫಲವಾಗಿರುವುದರಿಂದ ನಮ್ಮಲ್ಲಿ ದೈವೀ ಚೇತನವು ಅಂಕುರಿಸಿದರೆ, ಬೆಳೆದರೆ ಅನಿಷ್ಟವು ಅಡಗಲೇಬೇಕು.

ಜೀವನದಲ್ಲಿ ಅನಿಷ್ಟದ ಪಾತ್ರವೇನೆಂಬುದು ಶ್ರೀ ಅರವಿಂದರ ವಾಣಿಯಿಂದ ಸ್ಪಷ್ಟವಾಗುತ್ತಿದೆ. ಇಷ್ಟವಾದುದರ ಪ್ರಚೋದನೆಯನ್ನೀಯುವ ಮೂಲಕ ಅನಿಷ್ಟವು ಸ್ವಾಗತಾರ್ಹವೇನೋ ಅಹುದು. ಆದರೆ ಅನಿಷ್ಟವನ್ನು ಅನುಭವಿಸುವುದರಿಂದ ಮಾತ್ರ ನಾವು ಕೃತಕೃತ್ಯರಾದಂತೆಯೆಂದು ತಿಳಿಯಕೂಡದು. ಇಷ್ಟವಾದುದರ ಪ್ರಚೋದನೆಯನ್ನು ಪಡೆದುಕೊಳ್ಳುವದರಲ್ಲಿ ಮಾತ್ರ ಅನಿಷ್ಟದ ಸಫಲತೆಯಿದೆ.

## ಅನಿಷ್ಟ ಅಸತ್ಯಗಳ ಸಂಬಂಧ

ಅನಿಷ್ಟದೊಂದಿಗೇ ಹೊಂದಿಕೊಂಡು ಬಂದಿರುವ ಜೀವನದಲ್ಲಿಯ ಇನ್ನೊಂದು ಆಭಾಸವೆಂದರೆ ಅಸತ್ಯ. ಅದೂ ಕೂಡ ಅಚೇತನದ ಫಲವೆಂದು ಶ್ರೀ ಅರವಿಂದರು ಹೇಳುತ್ತಾರೆ. ವಿಕಾಸ ಕ್ರಮದಲ್ಲಿ ಅದು ಅನಿವಾರ್ಯವೂ ಅಹುದು.

ಅಚೇತನವು ದೈವೀ ಚೇತನವಾಗಿ ಮಾರ್ಪಾಟು ಹೊಂದುವ ವಿಕಾಸಕ್ರಮ ಹಾಗು ಅದರಲ್ಲಿ ಅನಿಷ್ಟ, ಅಸತ್ಯ–ಇವುಗಳ ಸಂಬಂಧ, ಇವುಗಳನ್ನು ಕುರಿತು ಶ್ರೀ ಅರವಿಂದರ ವಿವೇಚನೆಯು ಇಲ್ಲಿ ಪ್ರಸ್ತುತವಾಗಿದೆ.

ವಿಕಾಸ ಕ್ರಮವು ಜಡ, ಪ್ರಾಣ, ಮನ–ಹೀಗೆ ಮೂರು ಅವಸ್ಥೆಗಳಲ್ಲಿ ನಡೆಯುತ್ತಿದೆ. ಅಂತರಾತ್ಮನು ವಿಕಾಸಗೊಳ್ಳುವುದಕ್ಕೆ ಮೊದಲು ಜಡದ ಆವರಣವು ದಟ್ಟವಾಗಿ ವ್ಯಾಪಿಸಿರುತ್ತದೆ. ದಟ್ಟವಾದ ಆ ಆವರಣವು ಕ್ರಮವಾಗಿ ತೆಳುವಾಗುತ್ತ ಕೊನೆ ಕೊನೆಗೆ ಅಳಿದು ಹೋಗುವುದು. ಆದರೆ ಅದಿನ್ನೂ ಪೂರ್ತಿಯಾಗಿ ಅಳಿಯದ ಮೆಟ್ಟಲಿನಲ್ಲಿ ನಾವಿಂದು ಇರುತ್ತೇವೆ. ಜಡದ ಅಚೇತನವು ಗಾಢವಾಗಿ ಪಸರಿಸಿರುವ ಸಂದರ್ಭಗಳಲ್ಲಿ ನಾವು ಅಸತ್ಯ ಅನಿಷ್ಟಗಳನ್ನು ಹೆಚ್ಚಾಗಿ ಎದುರಿಸಬೇಕಾಗುತ್ತದೆ. ಚೇತನವು ಕ್ರಮವಾಗಿ ಬೆಳೆಯುತ್ತ ಹೋದಂತೆ ಅವು ಅಳಿಯುತ್ತವೆ.

ಈ ವಿವೇಚನೆಯಿಂದ ನಮಗೆ ಎರಡು ಸಂಗತಿಗಳು ಸ್ಪಷ್ಟವಾಗುತ್ತವೆ. (೧) ಜೀವನದಲ್ಲಿ ಅನಿಷ್ಟವು ಅನಿವಾರ್ಯವಾಗಿ ಸೇರಿಕೊಂಡಿದೆ. (೨) ವಿಕಾಸದ ಕ್ರಮದಲ್ಲಿ ಅದು ಅಳಿಯಲೇಬೇಕು. ಈ ಎರಡು ಸಂಗತಿಗಳನ್ನು ನಾವು ಮನದಂದಾಗ ಅನಿಷ್ಟವನ್ನು ಕುರಿತು ನಾವು ಕಳವಳಪಡಬೇಕಾಗಿಲ್ಲವೆಂಬುದೂ ಸ್ಪಷ್ಟವಾಗುತ್ತಿದೆ. ಏಕೆಂದರೆ ಕೆಲವೊಂದು ಸ್ಥಿತಿಯಲ್ಲಿ ಅದು ಅನಿವಾರ್ಯ. ಕಾರಣ ಅದನ್ನು ಎದುರಿಸಲೇಬೇಕು. ಅದು ಕೊನೆಗೆ ಅಳಿಯುವದಾದ್ದರಿಂದ ಅದರಿಂದಾಗಿ ನಾವು ಎದೆಗುಂದಬೇಕಾಗಿಲ್ಲ.

## ಇಷ್ಟ-ಅನಿಷ್ಟದ್ವಂದ್ವ

ದೈವೀ ಚೇತನದ ವಿಕಾಸ ಕ್ರಮದಲ್ಲಿ ನಾವು ಇಷ್ಟ, ಅನಿಷ್ಟ ಇವೆರಡನ್ನೂ ಅನುಭವಿಸಲೇಬೇಕಾಗುತ್ತಿದೆ. ಅವೆರಡರಿಂದಲೂ ನಾವು ಪ್ರಯೋಜನ ಪಡೆದುಕೊಳ್ಳಬೇಕಾಗುತ್ತಿದೆ. ಕೇವಲ ಇಷ್ಟವಾದುದರ ಅನುಭವವು ಅಪೂರ್ಣವೆಂದೆನಿಸುತ್ತಿದೆ. ನಾವಿನ್ನೂ ಸಾಧಿಸಬೇಕಾಗಿರುವ ವಿಕಾಸದ ಗುರಿಯನ್ನು ಮುಟ್ಟುವ ಹಾದಿಯೆಲ್ಲವನ್ನು ಕ್ರಮಿಸಬೇಕಾದರೆ ಅನಿಷ್ಟದ ಅನುಭವವನ್ನು ಪಡೆಯಲೇ ಬೇಕಾಗುವುದು. ಇಲ್ಲದಿದ್ದರೆ ನಾವು ಸಾಧಿಸಬೇಕಾಗಿರುವ ಗುರಿಯನ್ನು ತಲಪಲಾರೆವು.

ಜೀವನದಲ್ಲಿ ಇಷ್ಟವೆಂದು ತಿಳಿದುದನ್ನು ನಾವು ಸಾಧಿಸ ಹೊರಟಾಗಲೂ ತದ್ವಿರುದ್ಧವಾದ ಪರಿಣಾಮವೂ ಅನೇಕಸಲ ನಮ್ಮ ಅನುಭವಕ್ಕೆ ಬರುತ್ತಿದೆ. ಭಾರತ ದೇಶಕ್ಕೆ ಸ್ವಾತಂತ್ರ್ಯ ಪಡೆಯಲು

ಹೊರಟಾಗ ದೇಶದ ವಿಭಜನೆಯು ನಮ್ಮ ಪಾಲಿಗೆ ಬಂದಿತು. ಸುರಾಸುರರು ಸಮುದ್ರ ಮಥನ ಮಾಡಿ ಅಮೃತ ದೊರಕಿಸಲು ಹೊರಟಾಗ ಹಾಲಾಹಲವನ್ನು ಎದುರಿಸಬೇಕಾಯಿತು. ಹಾಲಾಹಲವನ್ನು ಕಂಡು ಇತರ ದೇವತೆಗಳೆಲ್ಲ ಬೆದರಿ ಓಡಿಹೋದರು. ಶಿವನು ಮಾತ್ರ ಅದನ್ನು ಸವಿಯಬೇಕಾಯಿತು. ನಂಜುಂಡನು ವಿಷವನ್ನು ಸವಿದುದರಿಂದಲೇ ಮುಂದೆ ಅಮೃತವನ್ನು ಗಳಿಸುವುದು ಸಾಧ್ಯವಾಯಿತು. ಅಂತು ಜೀವನದಲ್ಲಿ ಅನಿಷ್ಟವನ್ನು ನಾವಾಗಲಿ ನಮ್ಮ ಪರವಾಗಿ ಬೇರೊಬ್ಬರಾಗಲಿ ಅನುಭವಿಸಲೇಬೇಕೆಂಬುದು ಸ್ಪಷ್ಟವಿದೆ. ಲೌಕಿಕಮಟ್ಟದಲ್ಲಿ ಈ ಮಾತಿನ ಅನುಭವವು ಮತ್ತೆ ಮತ್ತೆ ಕಾಣಬರುತ್ತಿದೆ. ಸಾರ್ವಜನಿಕ ಜೀವನ ರಂಗದಲ್ಲಿ ಒಳ್ಳೆಯದನ್ನು ಸಾಧಿಸ ಹೊರಟ ಕಾರ್ಯಕರ್ತರ ಅನುಭವಗಳನ್ನು ನಾವು ಸಂಗ್ರಹಿಸಿದರೆ ನಮಗೆ ತಿಳಿದು ಬರುವದೇನು? ಅಂತಹರು ಉದ್ದಿಷ್ಟ ಗುರಿಯನ್ನು ಮುಟ್ಟುವದಕ್ಕೆ ಮೊದಲು ಇಲ್ಲವೆ ನಂತರ ಅನಿಷ್ಟವಾದ ನಿಂದೆಯನ್ನು, ಅಸಹನೆಯನ್ನು ಸಹಿಸಿಕೊಳ್ಳಬೇಕಾಗುತ್ತಿದೆಯಲ್ಲವೇ? ಜೀವನ ದಲ್ಲಿ ಜ್ಞಾನದ ಬೆಳಕನ್ನು ಹರಡಲು ಹೊರಟ ಸಾಕ್ರೇಟೀಸನು ವಿಷಪ್ರಾಶನ ಮಾಡಬೇಕಾಯಿತು. ವಿಶ್ವ ಬಾಂಧವ್ಯವನ್ನು ಬೋಧಿಸಿದ ಯೇಸುಕ್ರಿಸ್ತನು ಶಿಲುಬೆಗೇರಬೇಕಾಯಿತು.

ನಮ್ಮ ಪುರಾಣ-ಇತಿಹಾಸಗಳಲ್ಲಿಯೂ ಇದಕ್ಕೆ ಸಾಕಷ್ಟು ನಿದರ್ಶಗಳು ಇವೆ. ಕೌರವರ ದುಷ್ಟ ಶಕ್ತಿ ಯನ್ನು ಎದುರಿಸಿದನಂತರವೇ ಪಾಂಡವರು ಜಯಶೀಲರಾದರು. ಪಾಂಡವರು ಅನುಭವಿಸಿದ ಅನಿಷ್ಟಕ್ಕೆ ಮಿತಿಯಿ ದೆಯೇ? ರಾಮಚಂದ್ರ ಸೀತಾದೇವಿಯರ ಗೋಳಿನ ಅರ್ಥವಾದರೂ ಇದೇ. ಮಾನವರ ಕಲ್ಯಾಣವನ್ನೇ ಸಾಧಿಸಲು ಮುಂದಾಗಿದ್ದ ಕಲ್ಯಾಣದ ಬಸವಣ್ಣನವರ ಕಹಿ ಅನುಭವವವೂ ಈ ಮಾತಿಗೆ ನಿದರ್ಶನವಾಗಿದೆ

ಇಂದಿನ ಜೀವನದಲ್ಲಿ ಹೊರಹೊಮ್ಮಿದ ದುಷ್ಟ ಶಕ್ತಿಗಳನ್ನು ತಾವೇ ಮುಂದಾಗಿ ನುಂಗಬೇಕೆಂದು. ಶ್ರೀಅರವಿಂದರು ದೇಹತ್ಯಾಗ ಮಾಡಿರಬಹುದಲ್ಲವೇ? ಅರ್ಥಾತ್, ಅನಿಷ್ಟವನ್ನು ನಾವಾಗಲಿ, ನಮ್ಮ ಪರವಾಗಿ ಇತರರಾಗಲಿ, ಅನುಭವಿಸಲೇಬೇಕೆಂಬುದು ಸುಸ್ಪಷ್ಟವಿದೆ. ಮಾನವನ ವಿಕಾಸ ಮುಂದುವರಿದಾಗ, ದೈವೀಚೇತನವನ್ನು ಮಾನವನು ಹೆಚ್ಚಾಗಿ ಪಡೆದಾಗ ಅನಿಷ್ಟದ ಅಂಶ ದೂರವಾಗಿ ಎಲ್ಲವೂ ಶಿವಮಯ ವಾದೀತು.

ಸತ್ಯವು ಅಸತ್ಯವನ್ನು ಎದುರಿಸಬೇಕಾಗಿ ಬಂದಾಗ, ಚೇತನಕ್ಕೂ ಅಚೇತನಕ್ಕೂ ಘರ್ಷಣೆ ಯೊದಗಿದಾಗ ಅನಿಷ್ಟವು ತಲೆದೋರುತ್ತಿದೆ. ಸುತ್ತಲೂ ಸತ್ಯವೇ ಪಸರಿಸಿದಾಗ, ಅಸತ್ಯಕ್ಕೆ ಎಡೆ ಉಳಿಯಲಾರದು. ಶಿವ, ಸತ್ಯ ಇವೆರಡೂ ನೆಲೆಗೊಳ್ಳಲು ದೈವೀ ಚೈತನ್ಯವು ಮಾನವ ಭೂಮಿಗೆ ಇಳಿದು ಬರಬೇಕು. ವಿಕಾಸವು ಪೂರ್ಣತೆಯಾದಾಗಲೇ ಅದು ಸಾಧ್ಯ. ಅದು ಬರುವ ವರೆಗೆ ಅಸತ್ಯ, ಅನಿಷ್ಟ ಗಳನ್ನು ನಾವು ಎದುರಿಸದೆ ನಿರ್ವಾಹವಿಲ್ಲ.

## ಅನಿಷ್ಟನಿವಾರಣೆಯ ಉಪಾಯ

ಅಚೇತನವು ಪ್ರಾಣದ ಚೇತನವಾಗಿ ಮಾರ್ಪಾಟುಹೊಂದುತ್ತಿರುವಾಗ ಮೇಲುಪದರಿನಲ್ಲಿ ಕೆಲವೊಂದು ಅಚೇತನದ ಭಾಗ ಉಳಿದಿರುತ್ತದೆ. ಅಂತೆಯೇ ಅಸತ್ಯ, ಅನಿಷ್ಟಗಳು ತಲೆದೋರುತ್ತಿವೆ. ಪ್ರಾಣದ ಭಿನ್ನತಾ ಭಾವಕ್ಕೂ ಅಚೇತನದ ಅಂಶಕ್ಕೂ ನಡೆಯುವ ಘರ್ಷಣೆಯೇ ಅವುಗಳ ಹುಟ್ಟಿಗೆ ಕಾರಣ. ಅರ್ಥಾತ್ ಅಚೇತನದ ಅಂಶವನ್ನು ಪೂರ್ಣವಾಗಿ ತೊಡೆದುಹಾಕಲು ಹಾಗು ಭಿನ್ನತಾ ಭಾವವನ್ನು ತೊರೆಯಲು ನಾವು ಸಮರ್ಥರಾದರೆ ಅಸತ್ಯ ಅನಿಷ್ಟಗಳನ್ನು ಹೊಡೆದೋಡಿಸಲು ನಮಗೆ ಸಾಧ್ಯವಾಗುತ್ತಿದೆ.

ಮೇಲು ಪದರಿನಲ್ಲಿ ದೋಷಯುಕ್ತ ಜಡದ ಅಂಶ ಉಳಿದಿರುವ ವರೆಗೆ ಅಂತರಾತ್ಮ ಒಳಗೆ ಉಳಿದಿರುತ್ತದೆ. ಆ ದೋಷಯುಕ್ತ ಅಂಶವನ್ನು ಅಳಿಯುವ ಹಾಗು ಅಂತರಾತ್ಮನನ್ನು ಮೇಲಕ್ಕೆ ತರುವ ಕಾರ್ಯದಲ್ಲಿ ನಾವು ನಿರತರಾಗಬೇಕು. ವಿಕಾಸದ ಕ್ರಮದ ಪ್ರಕೃತಿಯ ಕಾರ್ಯವೂ ಇದೇ ಆಗಿದೆ. ಅಂದರೆ ಅನಿವಾರ್ಯವಾಗಿರುವ ವಿಕಾಸಕ್ರಮದಲ್ಲಿ ನಾವೂ ಕೈಗೊಡಬೇಕಾಗುತ್ತಿದೆ. ಚೇತನವು ಸುಪ್ತವಾಗಿರುವ ವರೆಗೆ ಅಜ್ಞಾನದ ಪ್ರಭಾವ ಉಳಿಯುತ್ತಿದೆ. ಹುದುಗಿರುವ ಚೇತನವನ್ನು ಹೊರಗೆಳೆಯುವ ಹೋರಾಟದಲ್ಲಿ ಅನಿಷ್ಟವು ತಲೆದೋರಬೇಕಾದುದು ಕ್ರಮಪ್ರಾಪ್ತವಾಗಿದೆ. ಆದುದರಿಂದ ಅಸತ್ಯ, ಅನಿಷ್ಟಗಳಿಂದ ನಾವು ಎದೆಗುಂದಿ ಕುಳಿತರೆ ವಿಕಾಸಕ್ರಮಕ್ಕೆ ತಡೆಯನ್ನೊಡ್ಡಿದಂತಾಗುವುದು.

ಅಂತು ಜೀವನದಲ್ಲಿ ಅನಿಷ್ಟವು ವಾಸ್ತವ, ಅನಿವಾರ್ಯ ಎಂಬ ಸಿದ್ಧಾಂತವನ್ನು ನಾವು ಒಪ್ಪಲೇಬೇಕು. ತಾರ್ಕಿಕರು, ಸಾಧುಗಳು ಬೇರೆ ಬೇರೆ ದೃಷ್ಟಿಕೋಣಗಳಿಂದಲೂ ಇದೇ ಸಿದ್ಧಾಂತಕ್ಕೆ ಬಂದಿದ್ದಾರೆ.

## ಅನಿಷ್ಟದ ಬಗ್ಗೆ ಇತರ ಸಿದ್ಧಾಂತಗಳು

C. E. M. Joad ಎಂಬವರು ಪ್ರಸಿದ್ಧ ತಾರ್ಕಿಕರು. ಅವರು ಅನಿಷ್ಟದ ಬಗೆಗೆ ವಿವಿಧ ದೃಷ್ಟಿಗಳಿಂದ ಪರಿಶೀಲನೆ ಮಾಡಿ ಕೊನೆಗೆ ಒಪ್ಪಿದ ಸಿದ್ಧಾಂತವು ಹೀಗಿದೆ: ಅನಿಷ್ಟವು ಜೀವನದಲ್ಲಿ ಆಕಸ್ಮಾತ್ತಾಗಿ ತಲೆದೋರಿದುದಲ್ಲ. ಅದು ಮನುಷ್ಯನ ಸ್ವಭಾವದೊಂದಿಗೆ ಅಂಟಿಕೊಂಡು ಬಂದುದು. ಸಾಮಾಜಿಕ ಸಮತೆಯನ್ನು ಸಾಧಿಸುವುದರಿಂದ ಅದು ಅಳಿದುಹೋಗುವುದಿಲ್ಲ. ಮನೋವಿಶ್ಲೇಷಣಪರ ಹೊಂದಿಕೆಯಿಂದಲೂ ಅದು ಇಲ್ಲದಂತಾಗುವುದಿಲ್ಲ. ಅದು ವಿಶ್ವದಲ್ಲಿ—ಆದುದರಿಂದ ಮನುಷ್ಯನ ಸ್ವಭಾವದಲ್ಲಿ—ಸ್ವೈಜವಾದ ದೃಢವಾದ ರೀತಿಯಲ್ಲಿ ಅಂಟಿಕೊಳ್ಳುವಂತಹದು ಎಂಬುದೇ ತಾರ್ಕಿಕರ ಗುಂಪಿನ ಪ್ರತಿನಿಧಿಯಾದ ಜೋಡ್ ಅವರ ವಿಚಾರ ಸರಣಿಯಾಗಿದೆ.

ಇನ್ನು ಸಾಧುಗಳ ವಿಚಾರ ಸರಣಿಯನ್ನು ಅವಲೋಕಿಸೋಣ. Thomas A Kempius ಅವರು ಈ ಗುಂಪಿನ ಪ್ರತಿನಿಧಿಯೆನ್ನಬಹುದು. ಅವರ ಉಕ್ತಿಯೊಂದು ಹೀಗಿದೆ: 'ಮಗೂ, ಏನು ನಿನ್ನ ಗೊಣಗಾಟ? ದುಷ್ಟಶಕ್ತಿಗಳನ್ನು ಎದುರಿಸಿ ನಾನು (ಕ್ರೈಸ್ತ) ಹಾಗು ಇತರ ಸಾಧುಗಳು ಅನುಭವಿಸಿದ ಕಷ್ಟದೊಂದಿಗೆ ಹೋಲಿಸಿ ನೋಡಿದರೆ ನಿನ್ನ ಬವಣೆ ಎಷ್ಟರದು? ನೀನೇನು ರಕ್ತವನ್ನು ಸುರಿಸಿದೆಯಾ?' ಎಂಬ ಪ್ರಶ್ನೆಯ ನಂತರ 'ನೀನು ಅನಿಷ್ಟವನ್ನು ಎದುರಿಸಿ ದುಃಖವನ್ನು ಅನುಭವಿಸಲು ತಪ್ಪಿಸಿದರೆ ನೀನು ಸಿಂಹಾಸನ (ಅಖಂಡಾನಂದ)ಕ್ಕೆ ಎರವಾಗುತ್ತೀ.' ಎಂಬ ನಿರ್ಣಯವನ್ನು ಹೇಳಿದ್ದಾರೆ. ಅನಿಷ್ಟವನ್ನು ಎದುರಿಸಬೇಕು; ಬವಣೆ ಬಡಬೇಕು; ಅಂದರೇನೇ ಕೇವಲಾನಂದ ಸಾಧ್ಯನೆಂದು ಸಾಧುಗಳು ಸಾರಿದ್ದಾರೆ. ನನಗೆ ಕೇವಲಾನಂದವು ಬೇಕಾಗಿಲ್ಲವೆಂದಾಗಲಿ, ಅನಿಷ್ಟವನ್ನು ತಪ್ಪಿಸಿಕೊಳ್ಳುವೆನೆಂದಾಗಲಿ ಹೇಳುವ ತರ್ಕದ ಸರಣಿ ವ್ಯರ್ಥವಾದುದು. ತರ್ಕಪ್ರಚಂಡರೆನಿಸುವ ಜೋಡ್ ಅವರ ವಿಚಾರ ಸರಣಿಯನ್ನು ಈ ಮೊದಲೇ ಅವಲೋಕಿಸಲಾಗಿದೆ. ತಾರ್ಕಿಕರಂತೆ ಸಾಧುಗಳೂ ಕೂಡ ಅನಿಷ್ಟವು ಅನಿವಾರ್ಯವೆಂದೇ ಹೇಳಿದ್ದಾರೆ.

ಈ ಸಿದ್ಧಾಂತವನ್ನು ಇನ್ನೊಂದು ಪಾರ್ಶ್ವದಿಂದಲೂ ಅವಲೋಕಿಸಬಹುದು. ಅಂತಹ ಪಾರ್ಶ್ವವನ್ನು ಪ್ರತಿಪಾದಿಸುತ್ತ ಉಯಿಲ್ಯಮ್ ಜೇಮ್ಸ್ ಎಂಬವರು – What evidently appears as evil must be good in the making. ಅ–ನಿಷ್ಟವೆಂದು ಸಕೃದ್ದರ್ಶನಕ್ಕೆ ತೋರುವುದೆಲ್ಲ ಇಷ್ಟವಾದುದರ ಪೂರ್ವ ಸಿದ್ಧತೆಯೆಂದು ಅಭಿಪ್ರಾಯ ಪಡುತ್ತಾರೆ. ಇಂತಹ ಮನೋಭಾವವನ್ನು ಬದಲಿಸಿ

ಕೊಳ್ಳಬಲ್ಲವರು ಜೀವನದಲ್ಲಿ ಸದಾನಂದಿಗಳಾಗಿಯೇ ಇರಬಲ್ಲರು. ವ್ಹಿಟ್‌ಮನ್ ಎಂಬ ಸುಪ್ರಸಿದ್ಧ ಸಾಹಿತಿಯ ಜೀವನ ಹಾಗೂ ಸಾಹಿತ್ಯಕೃತಿಗಳು ಇದಕ್ಕೆ ಉತ್ತಮ ನಿದರ್ಶನವೆಂದು ಹೇಳಲಾಗುತ್ತಿದೆ. ವ್ಹಿಟ್‌ಮನ್ನನು ಜೀವನದಲ್ಲಿ ಸದಾ ಸುಖಿಯಾಗಿಯೇ ಇದ್ದುದರಿಂದ ಅವನಿಗೆ ಅನಿಷ್ಟವೆಂಬುದು ಗೋಚರ ವಾಗಲೇ ಇಲ್ಲ. ಇದರಿಂದ ಕೆಲವರ ಜೀವನದಲ್ಲಿ ಅನಿಷ್ಟವೇ ಇಲ್ಲವೆಂದು ಅರ್ಥವಲ್ಲ. ಇರುವ ಅನಿಷ್ಟ ವನ್ನು ಇಷ್ಟವೆಂದು ಭಾವಿಸುವ ಮನೋವೃತ್ತಿಗೇ ಇಲ್ಲಿ ಮಹತ್ವವಿದೆ.

ಭಗವದ್ಗೀತೆಯಲ್ಲಿಯ ಸಂದೇಶ ಹೀಗಿದೆ : ದುಃಖೇಷ್ವನುದ್ವಿಗ್ನಮನಾಃ ಸುಖೇಷು ವಿಗತಸ್ಪೃಹಃ: (ದುಃಖದಲ್ಲಿ ಅನುದ್ವಿಗ್ನಮನ, ಸುಖದಲ್ಲಿ ವಿಗತಸ್ಪೃಹ). ಶ್ರೀ ಅರವಿಂದರ ಪೂರ್ಣಯೋಗ ದರ್ಶನದಲ್ಲಿ The way of Equality ಎಂಬ ಮಾತು ಮತ್ತೆ ಮತ್ತೆ ಬರುತ್ತಿದೆ. ಅದು ಸಮತಾಭಾವದ ಮಾರ್ಗ. ಸುಖ, ದುಃಖ, ನಿಂದೆ, ಸ್ತುತಿ, ಐಶ್ವರ್ಯ, ಅಭಾವಗಳಲ್ಲಿ ಸಮಭಾವದ ಮನೋವೃತ್ತಿಯನ್ನಿಟ್ಟು ಕೊಳ್ಳುವುದೇ ಅದರ ಲಕ್ಷಣ. ಇಂತಹ ಸಮಭಾವವು ಜೀವನದಲ್ಲಿಯ ಅನಿಷ್ಟವನ್ನು ಎದುರಿಸಲು ಶ್ರೇಷ್ಠವಾದ ಹಾದಿಯಾಗಿದೆ.

ಸಮತಾಭಾವವನ್ನು ನಾವು ಬಲಿಸಿಕೊಂಡರೆ ಜೀವನದಲ್ಲಿಯ ಅನಿಷ್ಟವು ನಮ್ಮನ್ನು ಬಾಧಿಸಲಾರದು. ಸಾಧುಸಂತರು ಇನ್ನೂ ಒಂದು ಹೆಜ್ಜೆ ಮುಂದುವರಿದು ಅನಿಷ್ಟವನ್ನೇ ಬೇಡಿಕೊಂಡದ್ದೂ ಉಂಟು. ಹೂವಿ ನಂತೆ ಮೃದುವಾದ ಮನಸ್ಸಿನ ಕಠೋರ ಬೇಡಿಕೆಯೊಂದು ಹೀಗಿದೆ:

'ಅರ್ಥವನರ್ಥವ ಮಾಡಿ ಕೋಳಾಹಳಂಗೈವುತ್ತಿರಲಿ. ಹುಟ್ಟಿದ ಮಕ್ಕಳ ನವಖಂಡವ ಮಾಡಿ ಕಡಿವುತ್ತಿರಲಿ. ಮುಟ್ಟಿದ ಸ್ತ್ರೀಯ ಮುಂದೆ ಅಭಿಮಾನಗೊಂಡು ನೆರೆವುತ್ತಿರಲಿ. ಇಂತೀ ತ್ರಿವಿಧವು ಹೊರ ಗಣವು ಇನ್ನೆನ್ನಂಗದ ಮೇಲೆ ಬರಲಿ. ಹಿಡಿಖಂಡವ ಕೊಯ್ಯಲಿ. ಇಕ್ಕುವ ಶೂಲ ಪ್ರಾಪ್ತಿಸಲಿ. ಹಾಕೊಂ ದೆಸೆ ಹನ್ನೊಂದೆಸೆಯಾಗಿ ಮಾಡುತಿರಲಿ. ಮತ್ತೆಯೂ ಲಿಂಗಾರಾಧನೆ ಮಾಡುವೆ.'

ಇಷ್ಟೆಲ್ಲ ಅನಿಷ್ಟವನ್ನು ಎದುರಿಸುವುದು ಏತಕ್ಕಾಗಿ ? ಇದರ ಉತ್ತರವನ್ನು ಬಸವವಾಣಿಯಿಂದಲೇ ಅರಿತುಕೊಳ್ಳೋಣ.

'ಕರಗಿಸಿ ಎನ್ನಮನದ ಕಾಳಿಕೆಯ ಕಳೆಯಯ್ಯಾ. ಒರೆಗೆ, ಬಣ್ಣಕ್ಕೆ ತಂದೆನ್ನ ಪುಟವಿಟ್ಟು ನೋಡಯ್ಯಾ. ಕಡಿಹಕ್ಕೆ, ಬಡಿಹಕ್ಕೆ ತಂದೆನ್ನ ಕಡಿಯಾಣಿಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹಯ್ಯಾ.'

ವಿಶ್ವಾತ್ಮನ ದಯೆಯ ಬಲದಿಂದ ನಾವು ಎಂತಹ ಅನಿಷ್ಟವನ್ನೂ ಎದುರಿಸಬಹುದು. ಇಲ್ಲವೆ ಅನಿಷ್ಟವೇ ವಿಶ್ವಾತ್ಮನ ಕೃಪೆಯ ಸಂಪಾದನೆಯ ಸಾಧನವೂ ಆದೀತು.

'ಸಂಕಟ ಬಂದಾಗ ವೆಂಕಟರಮಣ' ಎಂಬುದೊಂದು ಮಾತು ಪ್ರಚಲಿತನಿದೆ. ಅದನ್ನಿಷ್ಟು ಹಿಗ್ಗಿಸಿ ಸಂಕಟ ಬಂದಾಗಲೇ ವೆಂಕಟ ರಮಣನ ಪ್ರಾಪ್ತಿ ಎಂದೂ ಹೇಳಬಹುದು. ವೆಂಕಟರಮಣನ ಪ್ರಾಪ್ತಿಯಾಗುವಂತಿದ್ದರೆ ಜೀವನದಲ್ಲಿಯ ಸಂಕಟಗಳು ನಮಗೆ ಸ್ವಾಗತಾರ್ಹವೇ ಆಗಬೇಕಷ್ಟೇ.

## ಪೂರ್ಣಯೋಗದ ಉತ್ತರ

ಜೀವದಲ್ಲಿಯ ಅನಿಷ್ಟವನ್ನು ಕುರಿತು ಈ ವಿವೇಚನೆಯಲ್ಲಿ ಶ್ರೀ ಅರವಿಂದರ, ಮಾತೆಯವರ ವಿಚಾರ ಸರಣಿಯನ್ನು ಅಳವಡಿಸಿಕೊಳ್ಳಲಾಗಿದೆ. ಬೇರೆ ಬೇರೆ ಪಾರ್ಶ್ವಗಳಿಂದ ಆ ವಿಚಾರ ಸರಣಿಯನ್ನು ವಿವೇಚಿ ಸುವಾಗ ಬೇರೆ ಸೂಕ್ತಿಗಳನ್ನೂ ಬಳಸಿಕೊಳ್ಳಲಾಗಿದೆ.

Delight is existence, delight is the secret of creation, delight is the root of birth, delight is the cause of remaining in existence, delight is the end of birth and that into which creation ceases. ಎಂಬ ಶ್ರೀ ಅರವಿಂದರ ವಾಣಿಯಲ್ಲಿ ಆನಂದವೇ ಸೃಷ್ಟಿಕಾರ್ಯದ ರಹಸ್ಯ,–ಜನನದ, ಇರುವಿಕೆಯ, ಮರಣದ ಗುರಿಯೆಂಬ ಸೂತ್ರವಿದೆ. ಹೀಗಿದ್ದರೂ ಜೀವನದಲ್ಲಿ, ಕೆಡುಕು ನೋವುಗಳು ತುಂಬಿದಂತೆ ನಮಗೆ ತೋರುವುದೇಕೆ? ಶ್ರೀ ಅರವಿಂದರ ಉತ್ತರವನ್ನೇ ನೋಡೋಣ:

Pain of mind and body is a device of Nature, that is to say, of Force in her works, meant to subserve a definite transitional end in her upward evolution .

ದೇಹದ, ಮನದ ಯಾತನೆಯು ಪ್ರಕೃತಿಯ ಒಂದು ತಂತ್ರ. ಒಂದು ನಿರ್ದಿಷ್ಟ, ತತ್ಕಾಲಿಕ ಗುರಿಯನ್ನು ಸಾಧಿಸುವಲ್ಲಿ, ಮಾನವನ ಊರ್ಧ್ವ ವಿಕಾಸವನ್ನು ಸಾಧಿಸುವಲ್ಲಿ ಪ್ರಕೃತಿಯ ಶಕ್ತಿಯು ತನ್ನ ಕಾರ್ಯದಲ್ಲಿ ಈ ತಂತ್ರವನ್ನು ಅನಿವಾರ್ಯವಾಗಿ ಬಳಸುವಂತಿದೆ. ಆದರೆ ಪ್ರಕೃತಿಯ ಈ ತಂತ್ರದಿಂದಲೇ ನಾವು ಬಂಧಿತರಾಗಬೇಕಾಗಿಲ್ಲ. ಇದರಿಂದ ಬಿಡುಗಡೆ ಪಡೆಯುವ ಹಾದಿಯೂ ಇದೆ. ಅದನ್ನು ಶ್ರೀ ಅರವಿಂದರು ಹೀಗೆ ಹೇಳಿದ್ದಾರೆ :

But if we learn to live within, we infallibly awaken to this presence within us which is our more real self, a presence profound, calm, joyous and puissant of which the world is not the master.

ನಾವು ಅಂತರ್ಮುಖವಾಗಬೇಕು. ನಮ್ಮ ನಿಜವಾದ ಅಂತಸ್ಸತ್ತ್ವವನ್ನರಿಯಬೇಕು. ನಮ್ಮ ಅಂತರಾತ್ಮ ಘನವಾದದ್ದು, ಶಾಂತವಾದುದು, ಆನಂದಮಯವಾದುದು ಶಕ್ತಿಯುತವಾದುದು. ಅದನ್ನು ಬಾಹ್ಯಪ್ರಪಂಚವು ಆಳಲಾರದು. ಬಾಹ್ಯಪ್ರಪಂಚಕ್ಕೆ ಅಧೀನವಾಗುವುದು ನಮ್ಮ ಬಾಹ್ಯಜೀವನವು ಮಾತ್ರ. ನಮ್ಮ ಸುಖದ ದುಃಖದ ಅನಿಸಿಕೆಗಳ ಮೂಲ ಈ ಬಾಹ್ಯಪ್ರಪಂಚದಲ್ಲಿ ಮಾತ್ರ ಇವೆ. ಅದನ್ನು ಮೀರಿ ನಾವು ಒಳಗೆ ಇಳಿಯಬಲ್ಲೆವಾದರೆ ಎಲ್ಲವೂ ಆನಂದಮಯವಾಗಲು ಸಾಧ್ಯವಿದೆ. Pain is in the nature of nervous and physical recoil from a dangerous and harmful recoil. Its office begins when life with its fraility and imperfect possession of matter enters on the scene; it grows with the Mind and life. ಯಾತನೆಯ ಅನುಭವ ನಮ್ಮ ಪ್ರಾಣ, ಮನಗಳಿಗೆ ಸಂಬಂಧಿಸಿದ್ದು. ಜಡದ ಅಪರಿಪೂರ್ಣತೆಗೆ ಹೊಂದಿಕೊಂಡದ್ದು. ಅಚೇತನದಿಂದ ಜಡವು ಚೇತನದ ವಿಕಾಸವನ್ನು ಪಡೆಯುವಾಗ ಅದು ಕಳಚಿಹೋಗಲೇಬೇಕು. ಯಾತನೆಯ ಅನುಭವವು ನಮಗೆ ಅನಿಷ್ಟವಾಗಿ ತೋರುವುದು. ಅಚೇತನದ ಜಡವೇ ನಾವೆಂದು ತಿಳಿದುಕೊಳ್ಳುವ ವರೆಗೆ ಆ ಅನುಭವವು ನಮ್ಮನ್ನು ಬಾಧಿಸುವುದು. ಜಡದ ಆಚೆಗೆ ಹೊರಟು ನಾವು ಅಂತರಾತ್ಮನನ್ನು ನಿರುಕಿಸಿದಾಗ ಅದನ್ನು ತೊಡೆದು ಹಾಕಲು ಸಾಧ್ಯವಿದೆ.

But if and when mind and man become capable of being free, unegoistic, in harmony with all other beings and with the play of the universal forces the use of and office of suffering diminishes its '*raison de'tre*' must finally cease to be................its eventual elimination must be an essential point in the destined conquest of the soul over subjection to matter and egoistic limitation in mind.

ಮಾನವನೂ ಅವನ ಮನಸ್ಸೂ ಸ್ವತಂತ್ರವಾದಾಗ, ಹೆಮ್ಮೆಯನ್ನಳಿದಾಗ, ಉಳಿದೆಲ್ಲ ಜೀವಿಗಳೊಂದಿಗೆ ವಿಶ್ವದ ಶಕ್ತಿಗಳೊಂದಿಗೆ ಸಮರಸ ಹೊಂದಿದಾಗ ಯಾತನೆಯ ಪ್ರಯೋಜನ, ಕಾರ್ಯ ಅಳಿಯತೊಡಗುವುದು. ಅದರ ಮುಖ್ಯ ಕಾರಣವು ಕೊನೆಯದಾಗಿ ಇಲ್ಲದಂತಾಗುವದು. ಮನಸ್ಸಿನ ಹೆಮ್ಮೆಯ ಮಿತಿ, ಹಾಗು ಜಡ ಇವುಗಳ ಆಧೀನತೆಯುಳಿದು ಆತ್ಮದ ಬರಲಿರುವ ಜಯದ ಹಾದಿಯನ್ನೇ ಯಾತನೆಯ ಅನುಭವದ ಕೊನೆ ಎತ್ತಿ ತೋರುವದು. ವಿಕಾಸ ಕ್ರಮದ ನಿರ್ದಿಷ್ಟ ಗುರಿಯದು. ಅಂತಹ ಗುರಿಯತ್ತ ಸಾಗಿದೆ ಶ್ರೀ ಅರವಿಂದರ ಪೂರ್ಣಯೋಗ.

— ಸ. ಸ. ಮಾಳವಾಡ

ನಿನ್ನ ವಿಶ್ವಾಸವನ್ನು ಅಚಲವಾಗಿರಿಸಿದರೆ ಹಾಗೂ ನಿನ್ನ ಹೃದಯವನ್ನು ನನಗೆ ಸದಾ ತೆರೆದಿಟ್ಟರೆ ಬೇಕಾದಂಥ ದೊಡ್ಡ ಕುತ್ತುಗಳೂ ಕೂಡಾ ನಿನ್ನ ಇರುವಿಕೆಯನ್ನು ಹೆಚ್ಚು ಹೆಚ್ಚು ಪೂರ್ಣಗೊಳಿಸುವದಕ್ಕೆ ನೆರವಾಗುತ್ತವೆ. ೧೯-೪-೩೭

* *

ನಿನಗೆ ನನ್ನ ಉಪದೇಶವು ಹೀಗಿದೆ:— ತಳಮಳಕ್ಕೆ ಅನುವು ಕೊಡಬೇಡ. ಅಂದರೆ ತಳಮಳವು ನಿನ್ನನ್ನು ಬಿಟ್ಟು ಓಡಿ ಹೋಗುವದು. ತಳಮಳವು ಪ್ರಗತಿಗೆ ಎಳ್ಳಷ್ಟೂ ಅವಶ್ಯವಿಲ್ಲ. ಸ್ಥಿರವಾದ ಹಾಗೂ ಉಲ್ಹಾಸಯುಕ್ತ ಚಿತ್ತದ ಸಮತೆಯಲ್ಲಿಯೇ ಅದ್ಭುತ ಪ್ರಗತಿಯಾಗುವದು. ೧೦-೮-೩೭

* *

ಒಂದು ತಪ್ಪು ಮಾಡಿದಾಗ ಅದನ್ನು ಯಾವಾಗಲೂ ಪ್ರಗತಿಯ ಸಾಧನವೆಂದು ಉಪಯೋಗಿಸಬೇಕು. ಒಮ್ಮೆ ಆವಶ್ಯಕ ಬದಲಾವಣೆಯ ಅರಿವು ಆದಮೇಲೆ ಆ ತಪ್ಪು ಹಾಗೂ ಅದರ ಕಾರಣವು ಮಾಯವಾಗುವವು. ಅದರ ಪುನರಾವೃತ್ತಿಯಾಗಕೂಡದು. ೬-೪-೩೭

* *

ಇರಬೇಕಾದ ಪರಿಸ್ಥಿತಿಯು ಇರದಿದ್ದಲ್ಲಿ ಚಿಂತೆಯನ್ನು ಮಾಡಿದರೆ ಅದು ಸುಧಾರಿಸುವದಿಲ್ಲ. ಅಚಲವಾದ ವಿಶ್ವಾಸವೇ ಶಕ್ತಿಯ ಮೂಲ. ೧೧-೧೧-೩೬

* *

ನಿಜ. ನಾವು ಈ ಭೂಮಿಯ ಮೇಲೆ ಸಾಧಿಸಬೇಕಾದ ಧ್ಯೇಯವನ್ನನುಲಕ್ಷಿಸಿದರೆ ಈ ಕ್ಷುಲ್ಲಕ ಬಾಹ್ಯ ಸಂಗತಿಗಳಿಗೆ ಎಳ್ಳಷ್ಟೂ ಮಹತ್ವವಿಲ್ಲ. ೨೯-೯-೩೭

—ಶ್ರೀ ತಾಯಿಯವರು

# ಶ್ರೀ ಅರವಿಂದ - ದರ್ಶನ

## ( ಸಂಕ್ಷಿಪ್ತ ಅವಲೋಕನ )

### [ ೧ ]

ನಮ್ಮ ದೇಶದಲ್ಲಿ ವರ್ಷಕ್ಕೊಂದು ಪವಿತ್ರದಿನ, ನಾವು ಸೂರ್ಯದೇವನಿಗೆ ನಮಸ್ಕಾರ ಮಾಡಿ ವಿಧಿಪೂರ್ವಕವಾಗಿ ಧೂಪದೀಪ ತೋರುತ್ತೇವೆ. ಅದು ನಮ್ಮ ಪೂಜೆ. ಎಲ್ಲ ಬೆಳಕಿನ ಉಗಮವಾದ ಜಾಜ್ವಲ್ಯಮಾನ ಸೂರ್ಯಕಾಂತಿಯನ್ನು ನಮ್ಮ ದೃಷ್ಟಿಯಲ್ಲಿ ನಿಚ್ಚಳವಾಗಿ ಕಾಣಲು ಅದು ಒಂದು ಪ್ರಯತ್ನವೆಂದು ಯಾರೂ ಯೋಚಿಸುವುದಿಲ್ಲ ಹಾಗೇ ಶ್ರೀ ಅರವಿಂದರ ಉಜ್ವಲ ಉಪದೇಶಗಳಿಗೆ ನಾವು ಎರಗುತ್ತೇವೆ. ಅವರ ಉಪದೇಶದ ಮುಖ್ಯ ವಿಷಯದಲ್ಲಿ ಮನಸ್ಸಿಟ್ಟು ಅದನ್ನು ವ್ಯಕ್ತಮಾಡುವುದೇ ನಮ್ಮ ನಿವೇದನವೆನ್ನುತ್ತೇವೆ. ಇದೂ ನಮ್ಮ ಪೂಜೆಯ ಒಂದು ಭಾಗ; ಅತಿ ಸ್ಪಷ್ಟವಾದ ನಿಃಸಂಶಯವಾದ ಮಾತನ್ನು ಇನ್ನಿಷ್ಟು ಸ್ಪಷ್ಟಗೊಳಿಸುವ ಅಸಾಧ್ಯ ಯತ್ನವಲ್ಲ. ಹಾಗೆ ಮಾಡುವುದು ಸಾಕಷ್ಟು ಅಸಂಗತ. ಇಷ್ಟೇ ಯಾಕೆ, ಸತ್ಯವಾಗಿ ಎಲ್ಲ ಜ್ಞಾನದ ಉಗಮ ಮತ್ತು ಆಧಾರವಾದ ಆ ವಸ್ತುವನ್ನು ಇನ್ನೇನು ತಿಳಿಸುವುದಿದೆ ?

ಹಾಗಾದರೆ ಯೋಗ ಮತ್ತು ಅದರಲ್ಲಿ ಅಡಕವಾದ ತತ್ವಗಳನ್ನು ಕುರಿತು ಪೋಣಿಸಿ ಸ್ವಲ್ಪದರಲ್ಲಿ ಹೇಳೋಣ. ಇದನ್ನು ಮಾಡುವುದೆಂದರೆ ಎಲ್ಲ ಪ್ರಕೃತವಾದ ಪ್ರಶ್ನೆಗಳನ್ನು ವಿಹಂಗಮ ದೃಷ್ಟಿಯಿಂದ ನೋಡಿ ಅವುಗಳ ಯೋಗ್ಯ ಸ್ಥಾನವನ್ನು ಗುರುತಿಸಿ, ಮನುಷ್ಯ ಹೃದಯದ ಶೋಧನೆಗಳಿಗೂ ಮನಸ್ಸಿನ ಉನ್ನತವಾದ ನಿಲುಕಿಗೂ ಆತ್ಮದ ಸುದೀರ್ಘವಾದ ಯಾತ್ರೆಗೂ ಅದರ ಮಹತ್ವವೇನೆಂಬುದನ್ನು ಅರಿತು ಸವಿದಂತೆಯೆ ಸರಿ. ಇಷ್ಟರಲ್ಲಿ ಪ್ರಶ್ನೆಗಳಲ್ಲಿ ಹಿರಿಯ ಪ್ರಶ್ನೆ, ಗುರಿಗಳಲ್ಲಿ ಹಿರಿಯ ಗುರಿಯನ್ನು ಎತ್ತುವೆವು. ಅದರಲ್ಲಿ ಎಲ್ಲ ಪ್ರಶ್ನೆಗಳು, ಎಲ್ಲ ಗುರಿಗಳು ಬಂದು ಲೀನವಾಗುತ್ತವೆ.

ನಾವು ಸಾಗುವುದು ಯಾವ ಗುರಿಯತ್ತ ? ಈ ದರ್ಶನದಲ್ಲಿ ಎತ್ತಿ, ಚರ್ಚಿಸಿ, ಉತ್ತರಕೊಡಲಾದ ಪ್ರಮುಖ ಪ್ರಶ್ನೆಯಾವುದು ? ಯಾವ ಪ್ರಮಾಣದಿಂದ ಈ ದರ್ಶನವನ್ನು ಪರೀಕ್ಷಿಸಿ ಗ್ರಾಹ್ಯವೆಂದು ಸ್ವೀಕರಿಸಬೇಕು ? ಇದಕ್ಕೂ ಇತರ ದರ್ಶನಗಳಿಗೂ ಭೇದ ತೋರುವ ಲಕ್ಷಣಗಳಾವು ? ಈ ಗುರಿಯನ್ನು ಮುಟ್ಟಲು ಸಾಧನವೇನು ? ಈ ಪ್ರಯತ್ನಕ್ಕೆ ಅರ್ಹತೆ ಹೇಗೆ ದೊರೆಯುತ್ತದೆ ?

ಈ ದರ್ಶನದಲ್ಲಿ, ಕೇವಲ ಪ್ರಥಮಾವಸ್ಥೆಯದಾಗಿ ಕಡಿಮೆತರದ್ದಾದರೂ ನಮ್ಮ ಪ್ರತ್ಯಕ್ಷ ಜೀವನದ ಭೌತಿಕ ತಳಹದಿಯನ್ನು ಸತ್ಯವೆಂದು ನಾವು ಒಪ್ಪಿಕೊಳ್ಳುತ್ತೇವೆ. ಸೃಷ್ಟಿಯ ಕ್ರಮಬದ್ಧವಾದ ಚಲನೆ

ಯಲ್ಲಿರುವ ಮೇಲಿನ ಮತ್ತು ಕೆಳಗಿನ ತರಗತಿಗಳಿಗೆ ಅನುಗುಣವಾಗಿ ಹೆಚ್ಚಿನ ಮತ್ತು ಕಡಿಮೆಯ ಸತ್ಯಗಳು ಇದ್ದೇ ಇರುತ್ತವೆ. ಭೌತ ಪ್ರಪಂಚವಲ್ಲಿಯ ಮಾನ್ಯವಾದ ಇಂದಿನ ವಿಜ್ಞಾನದ ಪದ್ಧತಿಗಳನ್ನು ಅರಿತು ಅವು ನೀಡಿದ ಜ್ಞಾನಕ್ಕೆ ನಾವು ಬೆಲೆ ಕೊಡುತ್ತೇವೆ. ಹೀಗೆ ಭೌತವಿಜ್ಞಾನದ ನ್ಯಾಯವಾದ ಹಕ್ಕು ಬಾಧ್ಯತೆಯನ್ನೂ ಬೆಲೆಯನ್ನೂ ನಾವು ಗೊತ್ತುಪಡಿಸಬಹುದಾದರೂ ದ್ರವ್ಯವೇ ಕೇವಲ ಅಸ್ತಿತ್ವ ವೆಂದು ಆ ವಿಜ್ಞಾನದ ನಿರ್ಣಯಗಳ ಮೇಲೆ ಒಂದು ತತ್ವಜ್ಞಾನವನ್ನೆ ಕಟ್ಟಿದಾಗ ತನ್ನ ಎಲ್ಲೆಯನ್ನು ಅದು ಮೀರಿ ಹೋಗುತ್ತದೆ. ಅಲ್ಲದೆ, ಶರೀರವಿಜ್ಞಾನ, ಮಿದುಳಿನ ಮತ್ತು ನರಗಳ ನಿರೀಕ್ಷಣೆ ಇವುಗಳ ಬಲದ ಮೇಲೆ ಮನೋವಿಜ್ಞಾನವನ್ನು ಆಧರಿಸುವುದೆಂದರೆ ಆಕ್ರಮಣಶೀಲವಾದ ಅಜ್ಞಾನವೇ ಸರಿ. ದ್ರವ್ಯವೇ ಕೊನೆಯ ಸತ್ಯವೆಂದೂ ಸೂಕ್ಷ್ಮತರವಾದ ಆಂತರಜೀವನದ ಸಂಗತಿಗಳನ್ನೆಲ್ಲ ಬಾಹ್ಯವಿಷಯ ಪ್ರಪಂಚದಲ್ಲಿಯ ಸಾಧನಸಾಮಗ್ರಿಯಿಂದ ಅರ್ಥವಿಸಬಹುದೆಂದೂ ಗ್ರಹಿಸಿ ಆತ್ಮ ಮತ್ತು ಮನಸ್ಸಿನ ವ್ಯಾಸಂಗವನ್ನು ಮಾಡಲೆಳಸುವುದು ದೊಡ್ಡ ತಪ್ಪು. ಭೂತವಿಜ್ಞಾನವನ್ನು ಮೀರಿದ ಸತ್ಯಗಳನ್ನು ಪರೀಕ್ಷಿಸಲು ಒಪ್ಪಿದ ಅಜ್ಞಾನಕ್ಕೆ ಅಂಟಿಕೊಂಡು ಇಂದಿನ ವಿಜ್ಞಾನ ಮತ್ತು ತತ್ವಜ್ಞಾನಗಳು ತಾವು ಮಾಡಲೊಪ್ಪದ ವಿಷಯವನ್ನು ಅಲ್ಲಗಳೆಯುತ್ತ ಹೋಗುವುದು ದುರ್ದೈವದ ಸಂಗತಿಯಲ್ಲವೇ ?

ಆದರೂ ಶ್ರೀ ಅರವಿಂದರು ಹೇಳುವಂತೆ ವಿಜ್ಞಾನದ ನಿಷ್ಠುರ ಪದ್ಧತಿಯಿಂದ ನಾವು ಪ್ರಯೋಜನ ಹೊಂದಬಹುದು. ಅದರಲ್ಲಿ ದೃಢವಾದ ನಿಷ್ಠೆಯಿಂದ ಅದರ ಭೌತಸಾಧನಗಳನ್ನು ಸ್ವೀಕರಿಸದಿದ್ದರೂ ಅದರ ಸೂಕ್ಷ್ಮನಿರೀಕ್ಷಣೆ, ಪ್ರಯೋಗ ಇವುಗಳಿಂದ ಸಾರ್ವತ್ರಿಕವಾಗಿ ಅನುಭವಿಸಲಾರದ ಯಾವುದನ್ನೂ ಸತ್ಯವೆಂದು ಸಿದ್ಧಾಂತಗೊಳಿಸದೆ ಭೌತಕ್ಕೆ ಅತೀತವಾದ ಸತ್ಯಗಳನ್ನು ಕಾಣಬಲ್ಲೆವು. ಯಾಕಂದರೆ ಬೌದ್ಧಿಕ ಧೈರ್ಯ ಮತ್ತು ಸತ್ಯನಿಷ್ಠೆಯಿಂದ ಶಾಸ್ತ್ರೀಯ ವಿಚಾರಪದ್ಧತಿಯು ತನ್ನ ಪರೀಕ್ಷಣೆಯ ದಾರಿಗಳನ್ನು ಗೊತ್ತುಮಾಡಿಕೊಂಡಿದ್ದು ತಾನೇ ನಿರ್ಮಾಣ ಮಾಡಿದ ಜ್ಞಾನದ ಚೌಕಟ್ಟು ವಿಸ್ತಾರಗೊಳ್ಳಲು ಆ ದಾರಿಗಳಿಂದ ಹೊರಬೀಳದೆ ಗತಿಯಿಲ್ಲ.

ಯಾವೊಂದು ದರ್ಶನದ ಮಹತ್ವವೇನು, ಅದರ ಸಿದ್ಧಾಂತಗಳ ಪ್ರಾಮಾಣ್ಯವನ್ನು ತಿಳಿಯುವ ಅಳತೆಗೋಲು ಯಾವುದು ಎಂಬುದನ್ನು ಆರಂಭಕ್ಕೆ ಯೋಚಿಸುವ ಮಾನವನಿಗಾಗಿ ದಿವ್ಯ ಜೀವನದ ದರ್ಶನ ಮತ್ತು ಸಾಧನ ಎಂಬುದೇ ಶ್ರೀ ಅರವಿಂದರ ಉಪದೇಶದ ವಿಷಯವಾಗಿದೆ. ಪ್ರಾಚೀನ ಋಷಿಗಳಂತೆ ಅರವಿಂದರಿಗೆ ತತ್ವಜ್ಞಾನವೆಂದರೆ ಮನುಷ್ಯನ ಆಳವಾದ ಪ್ರಜ್ಞೆ ಕಂಡುಹಿಡಿದ ಅಂತಿಮ ಸತ್ಯಗಳನ್ನು ಬುದ್ಧಿಗೊಪ್ಪುವಂತೆ ಹೇಳುವ ಬುದ್ಧಿಯ ಪ್ರಯತ್ನ. ಜೀವನದ ಮೂಲತತ್ವಗಳನ್ನು ಅರಿಯುವ ಯತ್ನದಲ್ಲಿ ಮನಸ್ಸು ರಚಿಸಿದ ತಾತ್ವಿಕ ಮಂದಿರ ಮಾತ್ರವಾಗುವಂಥ ಬೌದ್ಧಿಕ ದರ್ಶನದಿಂದ ನಮಗೇನು ಉಪಯೋಗವಿಲ್ಲ. ಅದು ಜ್ಞಾತ ಜ್ಞೇಯ ಸಂಗತಿಗಳಿಗೆ ಅನುಸರಿಸಿ ಇರದಿದ್ದರೆ, ಅನುಭವವೇದ್ಯವಾಗುವಂತೆ ಅದರ ತತ್ವಗಳಿರದಿದ್ದರೆ, ಶ್ರೇಷ್ಠವಾದ ದರ್ಶನವೂ ಬರೀ 'ಬುದ್ಧಿಯ ಪರಿಪಾಕ ಸುಮನ'; ಸತ್ಯ-ಸಂಗತಿಗಳಿಂದ ದೂರವಾಗಿದ್ದು ಜೀವಂತ ಸತ್ಯವೆಂದು ಗ್ರಾಹ್ಯವಾಗದಿರುವ ಮನೋರಚನೆಯ ಜೇಡಬಲೆಯಾಗುವುದು ತಪ್ಪಿದರೆ ನಮ್ಮ ಪುಣ್ಯ. ಈ ಕಾರಣಕ್ಕಾಗಿ ಎಲ್ಲ ಹಿಂದೀದರ್ಶನಗಳ ರೀತಿಯಲ್ಲಿ ಜೀವಂತ ಸತ್ಯಗಳ ಆಧಾರದ ಮೇಲೆ ನಿಂತ ದರ್ಶನಗಳಿಗೆ ನಾವು ಪ್ರಾಶಸ್ತ್ಯಕೊಡುತ್ತೇವೆ. ಈ ಸತ್ಯಗಳನ್ನು ಯೋಗ್ಯತಾವಂತರು ಸಾಧನೆಮಾಡಿ ಅರಿತುಕೊಂಡು ಮನಗಾಣಬಹುದು. ಇದೇ ಕಾರಣಕ್ಕಾಗಿ ಸಾಮಾನ್ಯವಾಗಿ ಎಲ್ಲ ಪಾಶ್ಚಾತ್ಯದರ್ಶನಗಳಿಗೆ ನಾವು ಕಡಿಮೆ ಮಹತ್ವವನ್ನು ಕೊಡುತ್ತೇವೆ. ಯಾಕಂದರೆ ಅವು ನಮ್ಮ ಬುದ್ಧಿಗೆ ಒಪ್ಪಿದರೂ ಒಂದು ರೀತಿ ವಿಚಾರಪ್ರಪಂಚದಲ್ಲಿ ಸಮಾಧಾನ ಮಾಡಿದರೂ ಸತ್ಯ ಸಂಗತಿಗಳಿಗೂ ಅವಕ್ಕೂ

ಹೊಂದಿಕೆ ಇಲ್ಲದಿರಬಹುದು. ಅಂತರ್ಬೋಧದ ಕೆಲವಂಶವಿದ್ದರೂ ಜೀವನದಲ್ಲಿ ಅನುಭವ ಸಿದ್ಧಿಗೂ ಜೀವಂತ ಜ್ಞಾನದಲ್ಲಿ ಸಮಾವೇಶಕ್ಕೂ ನಿಷ್ಫಲವಾದ ದರ್ಶನಗಳಿಗೆ ಹೀಗೇ ಗೌಣಸ್ಥಾನವಿದೆ.

ವಿಶ್ವಜೀವನ ಮತ್ತು ಅದನ್ನು ಮೀರಿದ ಸ್ಥಿತಿ, ಅವೆರಡರ ಆದಿಮೂಲ ಇವುಗಳೊಡನೆ ಮನುಷ್ಯನ ಸಂಬಂಧವೇನು ಎಂಬ ಪ್ರಶ್ನೆಯನ್ನು ಶ್ರೀ ಅರವಿಂದರ ದರ್ಶನವು ಇದಿರಿಸುತ್ತದೆ. ಯಾವೊಂದು ಸಾಧನದಿಂದ ಶಕ್ತಿಯಿಂದ ತಾಳೆ ಹಾಕಿ ನೋಡಬಹುದಾದ ಉತ್ತರಗಳನ್ನು ಈ ದರ್ಶನವು ಸಲ್ಲಿಸುತ್ತದೆ. ಆ ಸಾಧನ, ಶಕ್ತಿ ಇವು ಮನುಷ್ಯನಲ್ಲಿ ಸಹಜಾತವಾಗಿದ್ದರೂ ಜಾಗೃತವಾಗದೆ ವಿಕಾಸಗೊಳ್ಳದೆ ಇರಬಹುದು. ಯಾರು ತಮ್ಮ ಸದ್ಯದ ನೆಲೆದಾಟಿ ಸಾಗಬೇಕೆಂಬ ಒತ್ತಾಸೆಯುಳ್ಳವರೋ ಯಾರಿಗೆ ತಮ್ಮ ವಿಚಾರ-ಭಾವನೆ ಮತ್ತು ಪ್ರತ್ಯಕ್ಷ ಜೀವನಗಳ ಆಚೆ ಹೋಗುವ ಹಂಬಲಿರುವುದೊ ಅಂಥವರಲ್ಲಿ ಆ ಶಕ್ತಿಯನ್ನು ಜಾಗೃತಗೊಳಿಸಬಹುದು. ಸಲ್ಲಿಸಲಾದ ಉತ್ತರವು ವ್ಯಾವಹಾರಿಕ, ಅಂತೇ ಗ್ರಾಹ್ಯವಾದದ್ದು. ಅಂದರೆ ಏನೋ ಕೆಲವು ಗೃಹಿಕೆಗಳನ್ನು ಮಾಡಿಕೊಂಡು ಹೀಗಿದ್ದರೆ ಹೀಗಿರಬಹುದು ಎಂಬ ಹುಡುಕಾಟದ ಅನಮಾನ ಫಲವಾದ ದರ್ಶನವದಲ್ಲ. ಉನ್ನತಪ್ರಜ್ಞೆಗೆ, ಸತ್ಯದ ವಿಶಾಲದೃಷ್ಟಿಗೆ, ಬದುಕಿನ ಮೂಲಸತ್ಯದ ಆಳವಾದ ಅನುಭವಕ್ಕೆ ಲಭ್ಯವಾದ ಸಾಮಗ್ರಿ ಮತ್ತು ಸತ್ಯ-ಸಂಗತಿಗಳ ಆಧಾರದ ಮೇಲೆ ಅದನ್ನು ಕ್ರಮಬದ್ಧಗೊಳಿಸಿದೆ. ಕವಿಗಳೂ ದೇಶಾಭಿಮಾನಿಗಳೂ ಆದ ಶ್ರೀ ಅರವಿಂದರು ಮೊದಲೆಂದೂ ದಾರ್ಶನಿಕರಾಗಿರಲಿಲ್ಲ, ಆಗಬೇಕೆಂದು ಹೆಣಗಲೂ ಇಲ್ಲ. ಆದರೆ ಸಾಧನೆಯಲ್ಲಿ ತಾವು ಕಂಡುಹಿಡಿದು ಅನುಸರಿಸಿದ ಕೆಲವು ಯೋಗಮಾರ್ಗಗಳ ಫಲವಾಗಿ ಉನ್ನತ ಪ್ರಜ್ಞೆ ಅವರಲ್ಲಿ ಉದಯವಾಯಿತು. ನಿಜವಾದ ಜ್ಞಾನದ ವಿಶಾಲ ಪ್ರದೇಶಗಳು ಗೋಚರವಾದವು. ಆಗ ಪಂಡಿತರಾದ ಅವರು ಸತ್ಯದರ್ಶನಗಳಿಗೆ ಅನುಗುಣವಾಗಿ ಒಂದು ವಿಚಾರ ವ್ಯವಸ್ಥೆಯನ್ನು ಸುಲಭವಾಗಿ ರಚಿಸಿದರು. ಪ್ರಾಚೀನ ಭಾರತದಲ್ಲಿ ಒಳ್ಳೇ ಕ್ರಮಬದ್ಧವಾದಂಥ ಮತ್ತು ಎಲ್ಲ ಕಾಲ-ದೇಶದ ಆಧ್ಯಾತ್ಮಿಕ ಜ್ಞಾನಕ್ಕೆ ಮೇಳವಾಗುವಂಥ ಸತ್ಯವನ್ನೇ ಅವರು ಕಂಡರು.

ಈ ದರ್ಶನದಲ್ಲಿ, ಸೃಷ್ಟಿಯೆಲ್ಲ ನಿತ್ಯ, ಅನಂತವಾದ ಸಚ್ಚಿದಾನಂದದ ಅಭಿವ್ಯಕ್ತಿಯೆಂಬ ಸನಾತನ ಸತ್ಯದ ಘೋಷಣೆಯಿಂದಲೆ ನಾವು ಮೊದಲು ಮಾಡುತ್ತೇವೆ. ಅದು ಅಭೇದ್ಯವಾದರೂ ಚಿತ್ತಿನ ಸಹಜ ಶಕ್ತಿಯ ಮೂಲಕ ಅಭಿವ್ಯಕ್ತವಾಗುವುದರಲ್ಲಿ ತನ್ನ ಸತ್ತಿನ ತಾರತಮ್ಯವನ್ನು ಹೊಂದುತ್ತದೆ, ಪ್ರಜ್ಞಾವಸ್ಥೆಗಳಲ್ಲಿ ಸೋಪಾಧಿಕವಾಗುತ್ತದೆ, ಜೀವನದ ಮೂಲ ಐಕ್ಯಕ್ಕೆ ಹೊರತಾಗದ ಆನಂದದ ವಿವಿಧ ಅಂಶಗಳಲ್ಲಿ ಭಿನ್ನವಾಗಿ ಗೂಢವಾಗಿ ಇರುತ್ತದೆ. ಹಾಗು ಗಾತ್ರ, ಗುಣ ಎಷ್ಟೇ ಇರಲಿ ಎಲ್ಲ ಅಭಿವ್ಯಕ್ತಿ ತನ್ನ ಸಮಷ್ಟಿಯಲ್ಲಿ ಏಕಮೇವಾದ್ವಿತೀಯ ಅನಂತವನ್ನು ಕೊನೆಗಾಣಿಸಲಾರದೆಂಬ ಸತ್ಯವನ್ನು ನಾವು ಅರಿತು ಸ್ವೀಕರಿಸುತ್ತೇವೆ. ಅದರ ಹೊರಗಡೆ ಯಾವುದೂ ಇಲ್ಲ, ಇದ್ದುದಾಗಿ ಬಗೆಯಲಾರೆವು. ಆದರೆ ಅದರಲ್ಲಿಯ ಅನಂತದ ಅನಂತತೆಯನ್ನೂ ವಿರಾಟದ ವಿಶಾಲತೆಯನ್ನೂ ಒಂದು ಹಲವಾದದ್ದರ ಸಂಪತ್ತಿ, ಪೂರ್ಣತೆ, ಸಮಾನತೆಯನ್ನೂ ಎತ್ತಿ ತೋರಿಸುತ್ತ ಎಲ್ಲ ಅಭಿವ್ಯಕ್ತಿ ನಡೆಯುತ್ತದೆ.

ನಾವೆಲ್ಲ ಯಾವುದರ ಅಂಶವಾಗಿರುವೆವೋ ಅಂಥ ಈ ಸೃಷ್ಟಿ ಅಪೂರ್ಣ, ಪ್ರಗಮನಶೀಲ. ಅಂತೇ ಆಗಬೇಕಾಗಿದ್ದುದು ಇನ್ನೂ ಆಗದಂಥದು ಎಂಬ ಮಾತಿನಿಂದ ನಾವು ಹೊರಡುತ್ತೇವೆ. ಈ ಅಭಿವ್ಯಕ್ತಿ ಹೇಗೋ ಪರಾಪ್ರಜ್ಞೆಯಿಂದ ಇಲ್ಲವೆ ಅದಕ್ಕೆ ವಿರುದ್ಧವಾಗಿ ವಿಶ್ವರೂಪದಲ್ಲಿ ಪ್ರಕಟವಾದ ಆಕಸ್ಮಿಕ ತೋರಿಕೆಯಲ್ಲ; ಆದರೆ ಅದು ಅರ್ಥವುಳ್ಳ ಸೃಷ್ಟಿ, ಒಂದು ಉದ್ದೇಶವುಳ್ಳ ಸಂಕಲ್ಪಿತವಾದ ಚಲನೆ; ಸಾಂತದ ಪರಿಸ್ಥಿತಿಯಲ್ಲಿ ಅನಂತವು ತನ್ನನ್ನು ಕಂಡುಕೊಳ್ಳುವ, ಪೂರ್ಣತೆಗಾಗಿ ಸಾಗಿದ ಒಂದು ವಿಧಿ ವಿಧಾನ. ಇಲ್ಲಿ ಭೂಮಿಯ ಮೇಲೆ ಎಷ್ಟೇ ಅಪೂರ್ಣವಾಗಿದ್ದರೂ ಮನುಷ್ಯನೂ ಪ್ರಗತಿಪರನಾಗಿದ್ದಾನೆ.

ಅವನ ತೋರ್ಪಡೆಗೆ ಅರ್ಥವಿದೆ, ಅದು ಸೋದ್ದೇಶವಾಗಿದೆ ನಮ್ಮ ತಿಳಿವಳಿಕೆಗೆ ಎಲ್ಲಿಯಾದರೂ ಹಿನ್ನಡೆ ಕಂಡರೆ, ಅದು ನಿಯಮವಲ್ಲ, ಅಪವಾದ; ಅಥವಾ ಹಾಗಿದ್ದರೂ ಅದಕ್ಕೆ ಒಂದು ನಿಶ್ಚಿತ ಹೇತುವಿದೆ, ಇಮ್ಮಡಿಯಾದ ಪ್ರಯತ್ನ ಬಲದಿಂದ ಹೊಂದುವ ಶೀಘ್ರಪ್ರಗತಿಯ ಗುರಿಯಿದೆ. ಪ್ರಗತಿಯ ಪ್ರೇರಣೆ ಸಾರ್ವತ್ರಿಕವಾದುದು. ಮುಂದುವರಿಯುತ್ತ ಹೋಗಿ ಸದ್ಯಕ್ಕಿಂತ ಎತ್ತರವಾಗಿ ಬೆಳೆಯಬೇಕೆಂಬ ವಿರಾಟ ಪ್ರೇರಣೆಯ ಒತ್ತಡಕ್ಕೆ ಒಳಗಾಗಲು ಒಪ್ಪದಿರುವುದು ಅಸಾಧ್ಯವಲ್ಲದಿದ್ದರೂ ಮನುಷ್ಯನಿಗೆ ಕಷ್ಟಸಾಧ್ಯ.

## [ ೨ ]

ಮನುಷ್ಯ ಜೀವನದ ಯಾತ್ರೆಯ ಧ್ಯೇಯ–ಸ್ವರೂಪವನ್ನು ತಿಳಿಯಲು ಸೃಷ್ಟಿಕ್ರಮದ ಬುಡದಲ್ಲಿರುವ ತತ್ವವನ್ನು ನೆನೆಯುವುದು ಅಗತ್ಯ. ಉನ್ನತ, ಮುಕ್ತ ಮತ್ತು ವಿಶಾಲತರವಾದ ಜೀವನದತ್ತ ಮಾನವ ಪ್ರಗತಿಯನ್ನು ಉಂಟುಮಾಡುವ ಎಲ್ಲ ತರದ ತತ್ವಗಳು ಆ ಮುಖ್ಯ ತತ್ವವನ್ನು ಅವಲಂಬಿಸಿವೆ. ಈ ಸೃಷ್ಟಿ ಸಚ್ಚಿದಾನಂದ ಸ್ವರೂಪ ಬ್ರಹ್ಮನಿಂದ ಆಕಸ್ಮಿಕ ಹಾರಿಕೆಯಾಗಿ ಬಂದುದಲ್ಲ; ಸರ್ವ ಶಕ್ತವಾದ ಸ್ವಸತ್ತೆಗೆ ಸಹಜವಾದ ನಿರ್ಮಾಣ ಶಕ್ತಿಯೆಂಬ ಪರಮಾತ್ಮನ ಅಮೇಯ ಸಾಮರ್ಥ್ಯದಿಂದ, ಪರಾಪ್ರಜ್ಞೆಯ ಬಲದಿಂದ, ಗತಿಪರವಾದ ತತ್ವದ ಪ್ರಕಾಶನದಿಂದ ಒಂದು ವರ್ಗೀಕೃತವಾದ ಅಭಿವ್ಯಕ್ತವಾಗಿದೆ. ಹೀಗಾಗಿ ವಿಶ್ವಾತೀತವಾದ ದಿವ್ಯಸತ್ತೆ, ಪೂರ್ಣತೆಯ ಉನ್ನತ ಕೋಶಗಳಿಂದ ಆರಂಭವಾಗಿ ಅನೇಕ ಅವಸ್ಥೆಗಳಲ್ಲಿ ಹಾಯ್ದು, ಕೆಳಗಿನ ಮಟ್ಟದವಾದ ಮನಸ್ಸು, ಪ್ರಾಣ ಮತ್ತು ದ್ರವ್ಯ ಈ ಕೋಶಗಳ ವರೆಗಿನ ಅನೇಕ ಮೆಟ್ಟಲುಗಳು ಈ ಸೃಷ್ಟಿಯಲ್ಲಿರುತ್ತವೆ. ಎಲ್ಲಿ ಜಡದ್ರವ್ಯವು ಮುಖ್ಯತತ್ವವಾಗಿ ಕೇವಲ ಸತ್ತೆಯಾಗಿ ತೋರುವುದೊ, ಎಲ್ಲಿ ಜಡದಲ್ಲಿ ಪ್ರಾಣವು ಪ್ರಕಟವಾಗುವದೊ ಅಂಥ ಈ ಇಳೆಯಲ್ಲಿ ಅಚೇತನ ಸೃಷ್ಟಿಯು ನಿಯಮವಾಗಿದ್ದು ಸಚೇತನವು ಅಪವಾದದಂತೆ ತೋರುತ್ತದೆ. ಮತ್ತು ಮನಸ್ಸು ಸಹ ಸಚೇತನ ದ್ರವ್ಯದಲ್ಲಿ ಪ್ರಕಟವಾಗುವಲ್ಲಿಯೂ ಅದೇ ರೀತಿ ಅಪವಾದವಾಗುವುದು. ಯಾಕಂದರೆ ಜಡದ ಅಪಾರಸಮುದ್ರದಲ್ಲಿ ಒಂದು ಗುಳ್ಳೆಯಂತೆ ಅದೃಶ್ಯವಾಗುವ ಪ್ರಾಣದ ಪಾಡನ್ನೇ ಮನಸ್ಸೂ ಅನುಭವಿಸುವಂತೆ ಕಾಣುವುದು.

ಆದರೆ ಮನುಷ್ಯನು ಸಚೇತನ ದ್ರವ್ಯದಲ್ಲಿದ್ದ ಬರೀ ಮನಸ್ಸಲ್ಲ, ಆದರೆ ಮನಸ್ಸಿನ ಕೋಶದಲ್ಲಿರುವ ಚೇತನ, ಆತ್ಮ. ತನ್ನ ಭೂಮಿಯ ಮೇಲಿನ ಇರುವಿಕೆಯಲ್ಲಿ ತನಗೆ ತೋರಿದಂತೆ ಬಳಸಲು ಅವನಿಗೆ ಒಂದು ಪ್ರಾಣ, ಒಂದು ದೇಹವಿದೆ.

ಅವನಿಗೆ ತೋರಿದಂತೆ ಆರಿಸಲು ಅವನು ಸ್ವತಂತ್ರನೇ? ಆರಿಸುವ ಸ್ವಾತಂತ್ರ್ಯವೆಲ್ಲಿದೆ? ಅವನ ಭೌತಜೀವನವನ್ನೂ ಪ್ರಾಣಚಲನೆಗಳನ್ನೂ ಮನೋವ್ಯಾಪಾರಗಳನ್ನೂ ನಿರ್ಣಯಿಸುವ ನಿಯಮಗಳು ಸುಸ್ಪಷ್ಟವಾಗಿರುವಾಗ, ಈ ಆಯ್ಕೆಯ ಸ್ವಾತಂತ್ರ್ಯವೆಂಬುದು ಭ್ರಮೆಯಲ್ಲವೇ? ನಿಜ. ನೀನು ಬರೀ ಸಚೇತನ ದ್ರವ್ಯವಾದಾಗ ಮತ್ತು ನಿನ್ನ ಮನಸ್ಸು, ಅದರ ವ್ಯಾಪಾರಗಳು ಆಧಿಭೌತಿಕ ಮತ್ತು ಬಾಹ್ಯ ಜೀವನದಲ್ಲಿ ತಲ್ಲೀನವಾದಾಗ ನಿಜವಾದ ಸ್ವಾತಂತ್ರ್ಯವಿಲ್ಲ. ಆದರೆ ಮನಸ್ಸಿನ ಆಚೆ ಮೇಲಿನಿಂದ ಹಾಗೂ ಹಿಂದಿನಿಂದ ಅದಕ್ಕೆ ಆಧಾರವಾದ ಆತ್ಮವಿದೆ. ಜೀವನದ ಕೆಳಗಿನ ಈ ರೂಪಗಳ ನಿಯಮಗಳಿಗೆ ಅದು ಒಳಪಟ್ಟಿಲ್ಲ. ಅದು ನಿಜವಾಗಿ ಸ್ವತಂತ್ರವಾಗಿದೆ. ಆದರವನೇ ನೀನು. ನಿನ್ನ ಜೀವನದ ಕೇಂದ್ರದಲ್ಲಿ ನೀನು ಅದೇ ಆಗಿರುವೆ. ಆತ್ಮವು ನಿತ್ಯವಾಗಿ ಮುಕ್ತ, ಆದರ ಕ್ರತು ಮುಕ್ತ. ಎಲ್ಲ ಪ್ರಾಣಿಗಳು ಅಧೀನವಾಗಿರುವ ಪ್ರಕಟನೆಯ ಪರಿಸರಗಳನ್ನು ಉಂಟುಮಾಡಿದ್ದು ಒಂದೇ ಒಂದಾದ ಮುಕ್ತಕ್ರತು, ಸ್ವತಂತ್ರ ಸಂಕಲ್ಪ. ಹಾಗಾದರೆ ವ್ಯಕ್ತಿಯ ಇಲ್ಲವೆ ವಿಶ್ವದ ಭೌತ, ಪ್ರಾಣಿಕ ಮತ್ತು ಮಾನಸಿಕ ತರಗತಿಗಳಲ್ಲಿ ಕೆಳ

ಕೆಳಗೆ ಪ್ರತಿಯೊಂದು ನಿಯಮಬದ್ಧವಾಗಿದೆ, ನಿರ್ಣೀತವಾದ ನಿಯಮಗಳನ್ನು ಪಾಲಿಸುತ್ತದೆ. ಆದರೆ ಮೇಲೆ ಮೇಲೆ ಹೋದಂತೆ ಈ ಅನಿವಾರ್ಯವಿಧಿಯು ತನ್ನ ಬಿಗಿವನ್ನು ಕಳೆದುಕೊಂಡು ಆತ್ಮದ ಮುಕ್ತಕ್ರತುವಿನಲ್ಲಿ ಕ್ರಮೇಣ ಲೀನವಾಗುತ್ತದೆ. ಇಹದಲ್ಲಿ ಮನುಷ್ಯನಿಗೆ ಇಚ್ಛಾಸ್ವಾತಂತ್ರ್ಯವಿಲ್ಲೆಂಬುದು ನಿಜ, ಆದರೂ ಹೆಜ್ಜೆ ಹೆಜ್ಜೆಗೆ ಆಯ್ಕೆಯ ಸ್ವಾತಂತ್ರ್ಯಭಾವದಿಂದ ಅವನು ಪ್ರೇರಿತನಾಗುತ್ತಾನೆ. ಈ ಸ್ವಾತಂತ್ರ್ಯಭಾವವು ನಿಜವಾಗಿ ಮೇಗಡೆಯಲ್ಲಿಯ ಆತ್ಮದ ಸ್ವತಂತ್ರ ಸಂಕಲ್ಪದ ಪ್ರತಿಬಿಂಬ, ಪ್ರತಿನಿಧಿ. ತನ್ನ ಯೋಗ್ಯತೆಯನ್ನು ಅರಳಿಸಿ ಮನುಷ್ಯನು ಒತ್ತಡದ ಬಾಳಿನಿಂದ ಆತ್ಮದ ಶ್ರೇಷ್ಠ ಸ್ವಾತಂತ್ರ್ಯಕ್ಕೆ ಹೋಗಿ ಮುಟ್ಟುವಂತೆ ಬೆಳೆಯುವ ಪರಿಸರಗಳನ್ನು ಆ ಸಂಕಲ್ಪವು ನಿರ್ಣಯಿಸಿದೆ. ಇಲ್ಲಿ ಇಚ್ಛಾ ಸ್ವಾತಂತ್ರ್ಯವು ಭ್ರಮೆಯಾಗಿರಬಹುದು, ಆದರೆ ಅದರ ಪ್ರತ್ಯಕ್ಷಭಾವವು ಭ್ರಮೆಯಲ್ಲ. ಯಾವೊಂದು ಕೆಲಸವನ್ನು ಮಾಡಲು ಇಲ್ಲವೆ ಮಾಡದಿರಲು ಇರುವ ಸ್ವಾತಂತ್ರ್ಯ ಭಾವ, ಒಂದಿಲ್ಲ ಇನ್ನೊಂದು ಬಗೆಯಾಗಿ ಆರಿಸುವ ಸಾತಂತ್ರ್ಯಭಾವ ಎಂಬುದು ನಿಶ್ಚಿತಗುರಿಯ ಕಡೆಗೆ ಮನುಷ್ಯಜೀವ ಪ್ರಗತಿಹೊಂದುವುದಕ್ಕೆ ಸಹಾಯ ಮಾಡಲೆಂದು ಪ್ರಕೃತಿ ಹೂಡಿದ ಯುಕ್ತಿಯಾಗಿದೆ. ಬೇರೆ ರೀತಿಯಾಗಿ ಹೇಳುವುದಾದರೆ, ಇಲ್ಲಿ ಸ್ವತಂತ್ರ ಸಂಕಲ್ಪವೇನೂ ಇಲ್ಲದಿದ್ದರೂ ಸ್ವಾತಂತ್ರ್ಯದ ಪ್ರತ್ಯಕ್ಷ ಭಾವವು ಮನುಷ್ಯನು ಯಾವುದಕ್ಕೆ ಪರಾಧೀನನಾಗಿರುವನೋ ಆ ನಿಯತಿಯದೇ ಒಂದು ಭಾಗವಾಗಿರುತ್ತದೆ. ಇದು ಆಯ್ಕೆಗೆ ಕ್ಷೇತ್ರವನ್ನು, ಪ್ರಗತಿಗೆ ಅವಕಾಶವನ್ನು ಬಿಟ್ಟುಕೊಡುತ್ತದೆ. ಆದರಿಂದ ಎತ್ತರದ ಮಟ್ಟಕ್ಕೆ ಏರುತ್ತ ಹೋಗಲು ಮನುಷ್ಯನು ಪ್ರೇರಿತನಾಗುವನು. ಯಾವುದರ ಸ್ವೇಚ್ಛೆ ಮತ್ತು ಪೂರ್ಣ ಜ್ಞಾನದಲ್ಲಿ ಅಭಿವ್ಯಕ್ತಿಯಲ್ಲಿಯ ಸೋಪಾಧಿಕ ಜೀವನದ ಉದ್ದೇಶವು ಸಫಲವಾಗುವುದೋ ಆ ಪರಮಾತ್ಮ ಪದವಿಯತ್ತ ಹೆಚ್ಚು ಹೆಚ್ಚಾಗಿ ಮನುಷ್ಯ ಜೀವವು ಎಳೆತ ಪಡೆಯುವುದು.

ಆದ್ದರಿಂದ ಆಧ್ಯಾತ್ಮಿಕ ಜೀವನದಲ್ಲಿ ನಮ್ಮ ಪ್ರಗತಿಯ ಮಾರ್ಗವನ್ನು ಆರಿಸಿ, ಗುರಿಯನ್ನು ಗೊತ್ತುಪಡಿಸಿ, ಸಾಧನವನ್ನು ದೊರಕಿಸಿ ನಮ್ಮ ದಾರಿಯುಗುಂಟ ನಡೆಯಬಹುದು. ಆಧ್ಯಾತ್ಮಿಕ ಜೀವನದಲ್ಲಿ ಒಂದೇ ಒಂದು ಮಾರ್ಗವಿಲ್ಲ. ಆದರ್ಶದತ್ತ ಹೋಗಲು ಅನೇಕ ದಾರಿಗಳಿವೆ. ಅಂತಿಮ ಸತ್ಯವು ಅನೇಕ ಮುಖವಾಗಿದೆ; ಗೋಲಾಕಾರವಾಗಿದ್ದು ಹಲವು ಮುಖಗಳನ್ನು ತೋರಿಸುತ್ತ, ಪ್ರಜ್ಞೆ, ಬಲ, ಆನಂದ, ಜ್ಞಾನ, ಸಂಕಲ್ಪ, ಸ್ವಸತ್ತೆಯ ಹರ್ಷ ಈ ಮೊದಲಾದವುಗಳ ಮೂಲ ಶಕ್ತಿಗಳ ವ್ಯಂಜನದಲ್ಲಿ ವಿವಿಧವಾಗಿದೆ. ಹೇಗೋ ಹುಟ್ಟಿಬಂದ ಇಲ್ಲವೆ ಬಿಟ್ಟುಬಿಡದೆ ನಿತ್ಯದಲ್ಲಿ ತಿರುತಿರುಗಿ ಬರುವ ಇಲ್ಲವೆ ತಥ್ಯವಿಲ್ಲದೆ ನಾಮ ರೂಪದ ತೋರಿಕೆಯಾಗಿರುವ ಅಥವಾ ನೋಡುವ ಪ್ರಜ್ಞೆಯ ಅಗಾಧ ವಿಕೃತಿ ಪ್ರಭಾವದಿಂದ ಉಂಟಾದ ಮಾಯೆಯಾದ ಕೆಡುಕೆಂದು ಈ ಲೋಕವನ್ನು ನೀನು ಕಂಡರೆ ಆಗ ನಡೆನುಡಿಗಳಲ್ಲಿ ಅದನ್ನು ತಪ್ಪಿಸಿ ಅದರಿಂದ ಮೊಗತಿರುವಿ ಆಚೆಯ ಸತ್ಯದಲ್ಲಿ ಆಶ್ರಯ ಹೊಂದಬೇಕು ಇಲ್ಲವೆ ಸಾಧ್ಯವಿದ್ದಾಗ ನಿನ್ನಲ್ಲಿಯೆ ಅದನ್ನು ಕಂಡು, ಜಗನ್ಮಾಯೆಯ ಜಾಲದಲ್ಲಿ ಬೀಳದೆ ಅದರಲ್ಲಿಯೆ ಹೆಚ್ಚೆಚ್ಚು ತನ್ಮಯವಾಗಲು ಎಚ್ಚರವಾಗಿರಬೇಕು.

ಆದರೆ ಈ ಸೃಷ್ಟಿ, ದೇವನ ಅಭಿವ್ಯಕ್ತಿ, ತನ್ನಷ್ಟಕ್ಕೆ ಕೆಡುಕಲ್ಲ, ಇದಕ್ಕೆ ಒಂದು ಅರ್ಥವಿದೆ ಹಾಗೂ ಮನುಷ್ಯನು ತನ್ನ ತೋರಿಕೆಯ ಮತಿಗೆ ತೋರಿದಂತೆ ಅಲ್ಲ, ಅದು ಇದ್ದಂತೆ ನೋಡುವ ಶಕ್ತಿಯನ್ನು ತನ್ನ ಮೇಲಣ ನಡೆಯಲ್ಲಿ ಬೆಳಿಸಿಕೊಂಡಾಗ ಮಾನವ ಪ್ರಜ್ಞೆಗೆ ಅದು ಪ್ರಕಟವಾಗುತ್ತದೆ ಎಂಬುದನ್ನು ನೀನು ಒಪ್ಪಿದರೆ, ಆಗ ಈ ಲೋಕದಲ್ಲಿ ಕೆಡುಕಾದುದನ್ನು ಗೆದಿಯಲೂ ಅದನ್ನು ಸ್ವೀಕರಿಸಿ ಅದರಲ್ಲಿಯ, ನೀನು ಮತ್ತು ಉಳಿದೆಲ್ಲರಲ್ಲಿಯ ದಿವ್ಯತೆಯನ್ನು ಅನುಭವಿಸಲೂ ಆ ಮೂಲಕ ಜೀವನದ ಉತ್ಕೃಷ್ಟ ಉದ್ದೇಶವನ್ನು ಕೈಗೂಡಿಸಿ ಮಾಯೆ, ಜಾಲ, ಹೆಸರಿಲ್ಲದ ಕೇಡು ಎಂದು ಮುಂತಾದ ಹೆಸರಿನಿಂದ ತ್ಯಜಿಸದೆ ಇರಲೂ ಒಂದು ದಾರಿ ದೊರೆಯುತ್ತದೆ.

ಈ ಸ್ಥಿತಿಯನ್ನೊಪ್ಪಿದರೆ, ನಾವು ಎಂಬುದಾಗಿ ವಾಡಿಕೆಯಾಗಿ ಕರೆಯುವವೆಲ್ಲ ಭೌತ ಪ್ರಪಂಚದ ಭಾಗವಾದ ಶರೀರವೆಂಬ ಜಡಾಂಶಗಳಿಂದಲೂ ಪ್ರಾಣ ಮತ್ತು ಅದರ ಚಟುವಟಿಕೆಗಳಿಂದಲೂ ಅಹಂಕಾರ ನಿಷ್ಠ ವ್ಯಕ್ತಿಜೀವನದ ಸುತ್ತು ತಿರುಗುವ ಮನಸ್ಸಿನಿಂದಲೂ ಕೂಡಿದ ಸಮಿಶ್ರವಸ್ತುವಾಗಿದೆ. ಭೌತ ಪ್ರಪಂಚ ದಿಂದ ಸ್ಥೂಲ ಶರೀರವು ತನ್ನ ಅಸ್ತಿತ್ವವನ್ನು ಸಂಪಾದಿಸಿದಂತೆ ಪ್ರಾಣ ಪ್ರಪಂಚಕ್ಕೆ ವ್ಯಕ್ತಿಗತಪ್ರಾಣವು ಸಮ್ಮಂಧಪಟ್ಟಿದು; ವಿಶ್ವಚಿತ್ತದ ಅಂದವಾದ ವ್ಯಕ್ತಿಚಿತ್ತಕ್ಕೂ ಅದೇ ಮಾತು ಸರಿಹೋಗುತ್ತದೆ. ಹೀಗೆ ನಮ್ಮ ಪ್ರಾಣ ಮನಗಳ ವ್ಯಾಪಾರಗಳೊಂದಿಗೆ ನಮ್ಮ ಶರೀರವನ್ನು ವಿಶಾಲವಾದ ಬಗೆಯಲ್ಲಿ ನೋಡಲಾಗಿ, ಯಾವುದು ನಿಜವಾಗಿ ವಿಶ್ವಶರೀರ, ವಿಶ್ವಪ್ರಾಣ, ವಿಶ್ವಚಿತ್ತ ಇವುಗಳ ಕೇವಲ ಅಂಶಭೂತವಾದುದೋ ಅದನ್ನು ನಾವು ನಾವೆಂದು ಒಂದುಗೊಳಿಸಿ ನಾವು ಕರೆಯುತ್ತೇವೆ. ಈ ತಪ್ಪಾದ ಭಾವನೆ–ವಿಚಾರಗಳು ಮತ್ತು ಅವನ್ನವ ಲಂಬಿಸಿದ ದೃಷ್ಟಿ ಮತ್ತು ಕಾರ್ಯಗಳು ವೈಯಕ್ತಿಕ ಜೀವದ ವಿಕಾಸ ಮಾರ್ಗದಲ್ಲಿ ಅವಶ್ಯಕ ಕೆಡುಕಾದ ಅಹಂಕಾರ ನಿರ್ಮಾಣದ ಮೂಲಕ ಆಗಿರುತ್ತದೆ. ಈ ಅಂಹಕಾರವನ್ನು ಅಜ್ಞಾನದ ಎಲ್ಲ ರಚನೆಗಳಂತೆ ನಷ್ಟಗೊಳಿಸಬಹುದು. ಅಥವಾ ನಿಜವಾದ ವ್ಯಕ್ತಿಯಾದ ಚೈತನ್ಯ ಸ್ವರೂಪಕ್ಕೆ ಏರುವಂತೆ ಪರಿಶುದ್ಧಗೊಳಿಸಿ ಪರಿವರ್ತಿಸಬಹುದು. ಯಾಕಂದರೆ ವ್ಯಕ್ತಿಯ ಯಥಾರ್ಥವಾದ ಅಭಿವ್ಯಕ್ತಿಯನ್ನು ವಿಕಾರಗೊಳಿಸುವ ಅಹಂಕಾರದ, ನಿತ್ಯಸ್ಥಿತಿಯು ನಿಜವಾದ ವ್ಯಕ್ತಿಮತ್ತ್ವಗೆ ಬೇಕಾಗಿಲ್ಲ. ಹಾಗೆ ನೋಡಿದರೆ ವ್ಯಕ್ತಿತ್ವವೆಂಬುದು ವಿಶ್ವಾತ್ಮದ ಒಂದು ಮುಖ. ಎಂದಮೇಲೆ ಅಭಿವ್ಯಕ್ತಿಗಾಗಿ ಅಹಂಕಾರದ ಆವಶ್ಯಕತೆಯನ್ನು ಮೀರಿ ಬೆಳೆದ ವ್ಯಕ್ತಿಯೇ ಸರಿ. ಅವನ ನಿಜವಾದ ವ್ಯಕ್ತಿತ್ವವು ಕೆಳಪದರುಗಳಲ್ಲಿಯೂ ಸರ್ವಾತ್ಮವಾದರೆ, ತನ್ನ ಮನಸ್ಸು ವಿಶ್ವಮನದ ಕೂಡ ಒಂದೆಂದು ಅನುಭವಿಸಿದರೆ, ತನ್ನ ಪ್ರಾಣ ವಿರಾಟ ಪ್ರಾಣದೊಡನೆ ಏಕವಾದರೆ, ತನ್ನ ಶರೀರವೂ ಸಹ ಭೌತ ಪ್ರಪಂಚದಲ್ಲಿಯ ಜಡದ್ರವ್ಯಸಾರದ ಸಂಗ್ರಹ-ಅಭಿವ್ಯಕ್ತಿಯಿಂದಾದರೆ ಅಹಂಕಾರದ ಅಗತ್ಯವೇನು? ಇದು ಹೀಗಾಗುವುದು ಸರಿಯೇ. ಯಾಕಂದರೆ ವೈಯಕ್ತಿಕ ಜೀವದ ಅಹಂಕಾರ ನಿಷ್ಠ ವಾದ ರೂಪ ರಹಿತವಾದ ರಚನೆಯ ಸ್ಥಳದಲ್ಲಿ, ತನ್ನ ಜ್ಞಾನ, ಜ್ಯೋತಿ, ಸುತ್ತೆಲ್ಲ ಬೆಳಕು ಬೀರುವ ಶಕ್ತಿ ಜೀವನದ ಆತ್ಮಾನಂದ, ವ್ಯಕ್ತಿ ಜೀವನದಲ್ಲಿಯ ಸ್ವಾನಂದ ಇವುಗಳಲ್ಲಿ ಅಡಕವಾದ ವೈಭವದೊಡನೆ ದಿವ್ಯ ವ್ಯಕ್ತಿ ತನ್ನ ನೆಲೆಯನ್ನು ಸ್ಫುಟವಾಗಿ ಸ್ಥಾಪಿಸಿರುತ್ತದೆ.

ಇದು ಹಾಗಾದರೆ ಶರಣಾಗತಿಯ ಸಮರ್ಥನೆ. ಏನೆಂದರೆ ಯಾವುದು. ಸತ್ಯವಾಗಿ ದೇವನ ಒಡ ವೆಯೋ ಅದನ್ನು ನೀನವನಿಗೆ ಅರ್ಪಿಸುವೆ, ನಿನ್ನದಲ್ಲದ್ದನ್ನು ತ್ಯಾಗಮಾಡಿ ನೀನು ಇದನ್ನು ಮಾಡುವುದಿಲ್ಲ. ಯಾವುದು ನಿನ್ನದಾಗಿರಲಿಲ್ಲ, ನಿನ್ನದಾಗದು ಅದನ್ನು ನಿನ್ನದೆಂದು ಯಾವ ಬುದ್ಧಿಯ ಮೂಲಕ ನೀನು ಬೇಡಿದೆಯೊ ಅದನ್ನು ನೀನು ತ್ಯಾಗ ಮಾಡಿ ಅರ್ಪಣಮಾಡುವೆ. ನೀನು ತ್ಯಾಗ ಮಾಡುವದೇನಂದರೆ ಅಜ್ಞಾನ ಮತ್ತು ಅಹಂಕಾರ ಹಾಗೂ ಅವರೊಡನೆ ಎಲ್ಲ ಅಹಂಕೃತ ಮೋಹಗಳ ಸೊತ್ತು, ಕ್ಷುದ್ರ, ಆಸೆ, ಪ್ರಾಣದ ತಪ್ಪು ತಪ್ಪಾದ ತಾಮಸಿಕ ಚಲನೆಗಳು, ಮನಸ್ಥಿತಿ ವಿಕೃತ ದೃಷ್ಟಿ ಮತ್ತು ಸಂಕುಚಿತ ನೋಟ ಇವುಗಳನ್ನು ನೀನು ಈ ತ್ಯಾಗಕ್ಕೇ ಪ್ರತಿಯಾಗಿ ಪಡೆಯುವುದೇನಂದರೆ ಅಹಂತೆಯ ಸ್ಥಾನದಲ್ಲಿ ದೇವತ್ವ, ದಿವ್ಯವ್ಯಕ್ತಿಯ ಬಳಿಯಿರುವ ವಿಶ್ವಶಕ್ತಿಗಳ ಅಭಿವ್ಯಕ್ತಿ-ಸಮರಸ ಸಾಧನೆಗಾಗಿ ದಿವ್ಯ ಶಕ್ತಿ ಮತ್ತು ಸಂಕಲ್ಪಗಳು, ಈ ಪ್ರಪಂಚವೆಲ್ಲ ಚಿದ್ವಸ್ತುವಿನ ಪ್ರಕಟನೆಯೆಂದೂ ಅಂತಿಮಸತ್ಯದ ಮೂರ್ತಸ್ವರೂಪವೆಂದೂ ಇತರ ಜೀವಗಳೆಂದರೆ ನಿನ್ನವೇ ಇತರ ಆತ್ಮಗಳೆಂದೂ ನೀನೆಂದು ಕರೆದುಕೊಳ್ಳುವುದೆಲ್ಲ ಆತನ ಅನಂತಸಾನ್ನಿಧ್ಯದ ಪ್ರಕಟನೆಯಲ್ಲಿ ನಿನ್ನದೇ ಪರವಸ್ತುವಿನ ಒಂದು ಕೇಂದ್ರ, ಒಂದು ಮುಖ ಒಂದು ಅಂಶ, ಒಂದು ತೋರ್ಪಡೆ ಯೆಂಗೂ ಅರಿಯುವ ದಿವ್ಯ ಪ್ರಜ್ಞೆ ಮತ್ತು ಜ್ಞಾನ.

ನೀನು ಪರಿಮಿತಸತ್ತೆಯುಳ್ಳ ಅಲ್ಪ ಅಹಂಕಾರನಿಷ್ಠ ಜೀವವಿನ್ನಾಗಿರದೆ ದಿವ್ಯಜೀವನದಲ್ಲಿ ಪರಿವರ್ತನ ಹೊಂದಿ. ದಿವ್ಯವ್ಯಕ್ತಿಯು ನಿನ್ನ ಸಮಗ್ರಜೀವನ ಮತ್ತು ವ್ಯಾಪಾರಗಳನ್ನು ತನ್ನ ವಶಕ್ಕೆ ತೆಗೆದುಕೊಳ್ಳುವ ಕಾರಣ, ಯಾವು ಮೊದಲು ನಿನ್ನ ಸ್ವಂತದ ವ್ಯವಹಾರಗಳಾಗಿದ್ದವೊ ಅವಕ್ಕೆ ವಿಶ್ವಸ್ವರೂಪ ಬರುತ್ತದೆ; ವಿಶ್ವಚಾಲಕರಾದ ದೇವತೆಗಳು ಈ ಮಾರ್ಪಾಡನ್ನು ನಿನ್ನಲ್ಲಿ ಉಂಟುಮಾಡಿ ಅಜ್ಞಾನಶಕ್ತಿಗಳಿಂದ ಅಪ್ರತಿಹತವಾಗಿ ನೇರವಾಗಿ ತಮ್ಮ ಕಾರ್ಯದಲ್ಲಿ ತೊಡಗಿ ನಿನ್ನಲ್ಲಿಯ ದೇವನನ್ನು ಸೇವಿಸುತ್ತಾರೆ. ನಾವಿಲ್ಲಿ ಚಿತ್ರಿಸಿದ ಆದರ್ಶ ಸಿದ್ಧಿಗೋಸ್ಕರ, ತನ್ನ ಆಲೋಚನೆಯ ಮೇರೆಗೆ ಆಧ್ಯಾತ್ಮಿಕ ಧ್ಯೇಯವನ್ನು ಸಾಧಿಸುವುದಕ್ಕಾಗಿ, ಮನುಷ್ಯನು ಯಾವುದೇ ಮಾರ್ಗದಿಂದ ಹೋಗಲಿ, ನೇರವಾದ ಉಪಾಯವು ಮನುಷ್ಯನ ಕೈಯಲ್ಲಿಲ್ಲವೆಂದು ಸ್ಪಷ್ಟವಾಗಿದೆ. ಯಾಕಂದರೆ ಸಾಮಾನ್ಯವಾಗಿ ಮನುಷ್ಯನು ದೇವರ ಕಡೆಗೆ ಹೊರಳಿ ದೇವನಿಷ್ಠವಾಗಿ ಬಾಳುವುದಕ್ಕಿಂತ ನಮ್ಮ ಸಮಸ್ಯೆ ಬೇರೆ ಸ್ವರೂಪದ್ದಾಗಿದೆ. ದೇವನೇ ತನ್ನ ಸರ್ವಶಕ್ತಿಯಲ್ಲಿ ಈ ಜಗತ್ತನ್ನು ಸೃಷ್ಟಿಸಿ ಅದರೊಡನೆ ನಮ್ಮ ಸಮಸ್ಯೆಯನ್ನೂ ಹುಟ್ಟಿಸಿರುವನಾದ್ದರಿಂದ ಅದಕ್ಕೆ ಉತ್ತರಕೊಡುವ ಕೆಲಸವಾದರೂ ದೇವನದೇ, ದಿಟವಾಗಿ ಅವನು ನಮಗೆ ಸಲಕರಣೆಗಳನ್ನು ಒದಗಿಸಿ ನಮ್ಮ ವಿಮೋಚನೆಯನ್ನು ನೆರವೇರಿಸುತ್ತಾನೆ, ಅಂದರೆ ಅಜ್ಞಾನದ ಸೆರೆಮನೆಯಿಂದ ನಮ್ಮನ್ನು ಬಿಡುಗಡೆಗೊಳಿಸಿ ಅಂಧಕಾರದ ಆಚೆ. ಸುರಕ್ಷಿತವಾಗಿ ನಮ್ಮನ್ನು ವೈಭವಪೂರ್ಣವಾದ ಪರಾಸತ್ಯದ ಸೂರ್ಯಲೋಕಕ್ಕೆ ಕರೆದೊಯ್ಯುವನು. ಅದರಿಂದ ನಮ್ಮ ಜೀವನವನ್ನು ತನ್ನ ಜ್ಯೋತಿ, ತನ್ನ ಜ್ಞಾನ, ತನ್ನ ಶಕ್ತಿ, ತನ್ನ ಆನಂದ ಇವುಗಳಿಂದ ತುಂಬುವುದೇ ಅವನ ಆಶಯ ಇದೆಲ್ಲವೂ ಯಾತಕ್ಕಾಗಿ ಎಂದರೆ ಒಂದು ವಿಶ್ವವಿಶಾಲ ಉದ್ದೇಶದ ಪರಿಪೂರ್ತಿಗಾಗಿ. ಇದಕ್ಕೆ ನಮ್ಮ ಸ್ವಂತದ ಮುಕ್ತತೆ, ಸತ್ಯಪ್ರಜ್ಞೆಲ್ಲಿಯು ನಮ್ಮನ್ಯಾಯವಾದ ಸ್ಥಾನದ ಪುನಃಪ್ರಾಪ್ತಿ ಇವು ಅನುಷಂಗಿಕ ಅಪರಿಹಾರ್ಯ. ನಮ್ಮಲ್ಲಿ ಉಳಿದವುಗಳಿಗಿಂತ ಹೆಚ್ಚು ವಿಕಾಸ ಹೊಂದಿದ ಯಾವುದೇ ಭಾಗವನ್ನೆತ್ತಿ ಇಲ್ಲವೆ ಕೆಲವನ್ನು ಅಥವಾ ಎಲ್ಲವನ್ನು ಆಯ್ದು, ತನ್ನ ಬಗೆಯಲ್ಲಿಯೇ, ನಾವು ಆರಿಸಿದ ರೀತಿಯಲ್ಲಿಯೇ ಎಂದಲ್ಲ, ನಮಗೆ ದಾರಿತೋರಿಸಬಲ್ಲನು. ಅಂತರಜೀವನವನ್ನು ಕಟ್ಟಲು, ವಿಶ್ವಪ್ರಕಟನೆಯ ಅದ್ಭುತರಹಸ್ಯಗಳ ಪರಿಚಯವನ್ನು ಮಾನವನಿಗೆ ಮಾಡಿಕೊಡಲು, ಮಹಾಯೋಜನೆಯ, ಶ್ರೇಷ್ಠ ಉದ್ದೇಶದ ಪ್ರಕಟನ ಮಾಡಲು, ದೇವನು ಉಪಯೋಗಿಸುವ ಸಾಧನಸಾಮಗ್ರಿ ಯಾವುದೇ ಇರಲಿ, ಮನುಷ್ಯನ ಪರವಾಗಿ ಇರಬೇಕಾದ ಒಂದು ಪೂರ್ವಭಾವಿಯಾದ ಪರಿಸರವು ಸಾಮಾನ್ಯವಾಗಿ ಇರುತ್ತದೆ. ಅದೆಂದರೆ ದೇವನಿಗಾಗಿ ಮಾನವನಾದುದರ ತ್ಯಾಗಸಿದ್ಧತೆ. ಪರಾತ್ಪರದ ವಿಷಯದಲ್ಲಿ ಆಕಾಂಕ್ಷೆಯ ಶಕ್ತಿಜ್ವಾಲೆಯಾಗಿ ಇಲ್ಲವೆ ದಿವ್ಯಸಂಕಲ್ಪ, ದಿವ್ಯಪ್ರಜ್ಞೆಗಳೊಡನೆ ಒಂದಾಗುವ ದೃಢಸಂಕಲ್ಪವಾಗಿ ಇಲ್ಲವೆ ಶರಣಾಗತಿಯ ಭಾವದಿಂದ ದೇವನಲ್ಲಿ ಸಂಪೂರ್ಣ ಸಮರ್ಪಿತವಾದ ಜೀವನವಾಗಿ ಅದು ತೋರುತ್ತದೆ. ಏಕಕಾಲಕ್ಕೆ ಇವುಗಳಲ್ಲಿ ಯಾವುದೊಂದರ, ಕೆಲವದರ ಇಲ್ಲವೆ ಎಲ್ಲದರ ಮೂಲಕವಾಗಿ ದೇವನು ಮನುಷ್ಯ ಜೀವನದಲ್ಲಿಯ ತನ್ನ ಉದ್ದೇಶಸಿದ್ಧಿಗಾಗಿ ಸಾಧನೆಯನ್ನು ನೇರವಾಗಿ ತನ್ನ ಅಂಕೆಯಲ್ಲಿ ತೆಗೆದುಕೊಳ್ಳುವನು.

—ಶ್ರೀ. ಟಿ. ವಿ. ಕಪಾಲಿಶಾಸ್ತ್ರಿಗಳು

# ಶ್ರೀ ಮಾತೆಯವರ ಧ್ಯಾನ - ಪ್ರಾರ್ಥನೆಗಳು

ಫೆಬ್ರುವರಿ ೮, ೧೯೧೩

ಹೇ ಪ್ರಭು, ನೀನೇ ನನ್ನ ಆಶ್ರಯ, ನನ್ನ ಭಾಗ್ಯ ನನ್ನ ಬಲ–ಆರೋಗ್ಯ–ಆಶೆ–ಧೈರ್ಯಗಳೆಲ್ಲ ನೀನೇ. ನೀನು ಪರಮಶಾಂತಿ ಪರಿಶುದ್ಧ ಆನಂದ ಹಾಗೂ ಸಂಪೂರ್ಣ ಪ್ರಸನ್ನತೆ. ನನ್ನ ಇಡೀ ಜೀವವು ಮೇರೆಯಿಲ್ಲದ ಕೃತಜ್ಞತೆ ಹಾಗು ಸತತವಾದ ಭಕ್ತಿಯಿಂದ ನಿನಗೆ ಸಾಷ್ಟಾಂಗವೆರಗುತ್ತಿದೆ; ನನ್ನ ಭಕ್ತಿ-ಭಾವನೆಯು ನನ್ನ ಹೃದಯ-ಮನಗಳಿಂದ ಊರ್ಧ್ವಾಭಿಮುಖವಾಗಿ ಭಾರತವರ್ಷದ ಸುಗಂಧಮಯ ಧೂಪದಂತೆ ನಿನ್ನ ಬಳಿಸಾರುತ್ತಿದೆ.

ಜನರಲ್ಲಿ ನಾನು ನಿನ್ನ ದೂತನಾಗಿರುವಂತೆ ಕರುಣಿಸು ; ಅಂದರೆ ಅಣಿಯಾದವರು ನೀನು ನನಗೆ ನಿನ್ನ ಅನಂತ ಕರುಣೆಯಲ್ಲಿ ದಯಪಾಲಿಸಿದ ದಿವ್ಯಾನಂದವನ್ನು ಸವಿಯಬಹುದು. ನಿನ್ನ ಶಾಂತಿಯು ಪೃಥ್ವಿಯನ್ನು ಆಳಲಿ.

ಡಿಸೆಂಬರ ೫, ೧೯೧೩

ಶಾಂತಿ ನಿಶ್ಚಲನೀರವತೆಗಳಲ್ಲಿ ಪರಮಾತ್ಮನು ಪ್ರಕಟನಾಗುವನು. ನಿನ್ನ ಚಿತ್ತವು ಯಾವ ಕಾರಣದಿಂದಲೂ ಕದಡದಿರಲಿ; ಅಂದರೆ ಪರಮಾತ್ಮನು ಪ್ರಕಟನಾಗುವನು. ಎಲ್ಲ ಪರಿಸ್ಥಿತಿಯಲ್ಲಿ ಪೂರ್ಣ ಸಮತೆಯನ್ನು ತಾಳು ಅಂದರೆ ಆ ಪರಮ ಸತ್ಯವು ಗೋಚರಿಸುವುದು............ಅಹುದು ನಿನ್ನನ್ನು ಅರಸುವುದರಲ್ಲಿ ಅತ್ಯಧಿಕವಾದ ತೀವ್ರತೆ ಮತ್ತು ಪ್ರಯತ್ನಗಳನ್ನು ವ್ಯಕ್ತಮಾಡಬಾರದು. ಆ ತೀವ್ರತೆ–ಪ್ರಯತ್ನಗಳೇ ನಿನ್ನೆದುರು ಒಂದು ಆವರಣವಾಗಿ ಪರಿಣಮಿಸುವುವು. ನಿನ್ನನ್ನು ನೋಡಲು ಅಪೇಕ್ಷಿಸಬಾರದು, ಏಕೆಂದರೆ ಅದು ನಿನ್ನ ಶಾಶ್ವತ ಸಾನ್ನಿಧ್ಯವನ್ನು ಮರೆಮಾಡುವ ಒಂದು ಮಾನಸಿಕ ಕಳವಳವಾಗಿ ಉಳಿಯುವುದು. ಪರಿಪೂರ್ಣವಾದ ಶಾಂತಿ ಪ್ರಸನ್ನತೆ ಸಮತೆಗಳಲ್ಲಿ ನೀನು ಹೇಗೆ ಎಲ್ಲವೂ ಆಗಿರುವೆಯೋ ಹಾಗೆ ಎಲ್ಲವೂ ನೀನೆ ಎಂದು ಬೋಧೆಯಾಗುವುದು. ಇಂಥ ಅತಿ ಪರಿಶುದ್ಧವೂ ಸ್ಥಿರವೂ ಆದ ವಾತಾವರಣದಲ್ಲಿ ಸ್ಪಂದನ ಲವಲೇಶವೂ ನಿನ್ನ ಪ್ರಕಟನೆಗೆ ಅಡ್ಡಿಯಾಗುವುದು. ಆತುರವಿಲ್ಲ, ಚಂಚಲತೆಯಿಲ್ಲ, ಉದ್ವೇಗವಿಲ್ಲ,–ಪೃಥಕ್ಕರಣ ಬಾಹ್ಯರೂಪಪರಿಜ್ಞಾನಚಾಪಲ್ಯವನ್ನು ತೊರೆದರೆ,–ನೀನು ನಿನ್ನ ಹೊರತು ಮತ್ತಾವುದಿಲ್ಲ. ನಿಃಸಂದೇಹವಾಗಿ ನೀನೆಲ್ಲೆಲ್ಲಿಯೂ ಇರುವೆ. ಏಕೆಂದರೆ ಎಲ್ಲವೂ ಪವಿತ್ರವಾದ ಶಾಂತಿ, ಮತ್ತು ಪುಣ್ಯಮಯವಾದ ನೀರವತೆಗಳಾಗಿ ಪರಿಣಮಿಸುವುವು. ಮತ್ತು ಈ ಸ್ಥಿತಿಯೇ ಎಲ್ಲ ಧ್ಯಾನಗಳಿಗೂ ಮಿಗಿಲು.

ಡಿಸೆಂಬರ ೧, ೧೯೧೩

ಆತುರವಿಲ್ಲದೆ, ಚಂಚಲತೆಯಿಲ್ಲದೆ, ಮತ್ತೊಂದು ಆವರಣವು ಕಳಚಿ ಮಿಲನವು ಮತ್ತೂ ಪೂರ್ಣವಾಗುವುದನ್ನು ನಾನು ನಿರೀಕ್ಷಿಸುತ್ತಿರುವೆನು. ಈ ಆವರಣವು ಸಣ್ಣ ಪುಟ್ಟ ನ್ಯೂನತೆ ಮತ್ತು ಅಗಣಿತ ಆಸಕ್ತಿಗಳ ಸಂಕಲನವಾಗಿದೆ ಎಂಬುದನ್ನು ನಾನು ಬಲ್ಲೆ. ಇನೆಲ್ಲ ಹೇಗೆ ಮಾಯವಾದಾವು? ನಿದಾನವಾಗಿ, ಅಸಂಖ್ಯ ಅಲ್ಪಪ್ರಯತ್ನಗಳ ಹಾಗು ಒಂದು ಗಳಿಗೆಯೂ ತಡವರಿಸದ ಜಾಗರೂಕತೆಯ ಪರಿಣಾಮವಾಗಿಯೋ, ಅಥವಾ ಹಠಾತ್ತಾಗಿ ನಿನ್ನ ಸರ್ವಶಕ್ತಿಯುತ ಪ್ರೇಮದ ಜ್ಞಾನೋದಯದ ಮೂಲಕವಾಗಿಯೊ? ನನಗಾವುದೂ ತಿಳಿಯದು, ಈ ಪ್ರಶ್ನೆಯನ್ನು ಸಹ ನಾನು ವಿಚಾರಿಸುವುದಿಲ್ಲ. ಸಾಧ್ಯವಾದಷ್ಟು ಎಚ್ಚರದಿಂದಿದ್ದು, ನಾನು ಕಾಯುವೆ. ನಿನ್ನ ಇಚ್ಛೆಯ ಹೊರತು ಯಾವುದೂ ಇರುವದಿಲ್ಲವೆಂಬ ಭರವಸೆ ನನಗಿದೆ. ನೀನೊಬ್ಬನೇ ಕರ್ತಾರನು, ನಾನು ಉಪಕರಣ ಮಾತ್ರ. ಮತ್ತೂ ಪರಿಪೂರ್ಣ ಆವಿಷ್ಕರಣಕ್ಕೆ ಉಪಕರಣವು ಸಿದ್ಧವಾದಾಗ, ಆವಿಷ್ಕರಣವು ತಾನಾಗಿಯೇ ಸಂಭವಿಸುವುದು.

ಈಗಾಗಲೇ ನಿನ್ನ ಘನ ಸಾನ್ನಿಧ್ಯವನ್ನು (ತೆರೆಯಮರೆಯಿಂದ) ಪ್ರಕಟಿಸುವ ಹರ್ಷದ ಅವ್ಯಕ್ತ ಸ್ವರಮೇಳವು ತೆರೆಯಮರೆಯಿಂದ ಕೇಳಬರುತ್ತಿದೆ.

ಅಕ್ಟೋಬರ ೨೫, ೧೯೧೪

ಹೇ ಪ್ರಭು, ನಿನ್ನನ್ನು ಉದ್ದೇಶಿಸುವ ನನ್ನ ಅಭೀಪ್ಸೆಯು ಒಂದು ಸುಂದರತಮ ಗುಲಾಬಿಯ ಆಕಾರವನ್ನು ತಳೆದಿದೆ– ಅದು ಸುಸಮಂಜಸವೂ, ಪ್ರಫುಲ್ಲವೂ, ಪರಿಮಳಭರಿತವೂ ಆದ ಗುಲಾಬಿಯಾಗಿದೆ. ಅದನ್ನೇ ನಿನಗೆ ಅರ್ಪಣೆಯ ರೂಪದಲ್ಲಿ ನನ್ನೆರಡೂ ಕೈಗಳಿಂದ ನೀಡುತ್ತಿದ್ದೇನೆ. ನೀಡಿ ಬೇಡಿಕೊಳ್ಳುತ್ತಲಿದ್ದೇನೆ: ನನ್ನ ತಿಳಿವಳಿಕೆ ಸಂಕುಚಿತವಾಗಿದ್ದರೆ ಅದನ್ನು ವಿಸ್ತರಿಸು; ನನ್ನ ಜ್ಞಾನವು ಅಸ್ಪಷ್ಟವಾಗಿದ್ದರೆ, ಅದನ್ನು ಬೆಳಗಿಸು; ನನ್ನ ಹೃದಯವು ಉತ್ಸಾಹಹೀನವಾಗಿದ್ದರೆ, ಅದನ್ನು ಪ್ರಜ್ವಲಿಸು; ನನ್ನ ಪ್ರೀತಿಯು ಅಲ್ಪವಾಗಿದ್ದರೆ, ಅದನ್ನು ತೀವ್ರಗೊಳಿಸು; ನನ್ನ ಮನೋಭಾವಗಳು ಅಜ್ಞಾನ ಅಹಂಕಾರಗಳಿಂದ ಕೂಡಿದ್ದರೆ ಅವುಗಳಿಗೆ ಸತ್ಯದ ಸಂಪೂರ್ಣ ಅರಿಕೆ ಮಾಡಿಕೊಡು. ಹೀಗೆ ನಿನ್ನಲ್ಲಿ ಬೆಸಗೊಳ್ಳುವ 'ನಾನು' ಹೇ ಪ್ರಭು, ಸಾವಿರಾರು ಜೀವಿಗಳಲ್ಲಿ ಹೆಸರಿಲ್ಲದೆ ಬೆರೆತ ಒಂದು ಕ್ಷುದ್ರ ವ್ಯಕ್ತಿವಿಶೇಷವಲ್ಲ; ಅದು ಉತ್ಸಾಹಪೂರಿತ ಗತಿಯಲ್ಲಿ ನಿನ್ನನ್ನೇ ಅಭೀಪ್ಸೆಗೊಳ್ಳುವ ಇಡೀ ಸೃಷ್ಟಿಯಾಗಿದೆ.

ನನ್ನ ನಿಧಿಧ್ಯಾಸದ ಸಂಪೂರ್ಣ ನೀರವತೆಯಲ್ಲಿ ಎಲ್ಲವೂ ಅನಂತವಾಗಿ ವಿಶಾಲವಾಗುವುದು. ಮತ್ತು ಆ ನೀರವತೆಯ ಪರಿಪೂರ್ಣ ಶಾಂತಿಯಲ್ಲಿ ನಿನ್ನ ಜ್ಯೋತಿಯ ದೇದೀಪ್ಯಮಾನ ವೈಭವದಲ್ಲಿ ನೀನು ಕಾಣಿಸಿಕೊಳ್ಳುವೆ.

ಮಾರ್ಚ ೧೯, ೧೯೧೪

ಹೇ ಪ್ರಭುವೇ, ಸನಾತನ ಗುರುವೇ, ನಿನ್ನನ್ನು ನಾವು ನಿರ್ದೇಶಿಸಲಾರೆವು, ಅರಿಯಲಾರೆವು. ಆದರೂ ಪ್ರತಿಕ್ಷಣವೂ ಹೆಚ್ಚು ಹೆಚ್ಚಾಗಿ ಪಡೆಯಲು ಬಯಸುವೆವು. ಬುದ್ಧಿಯನ್ನು ಬೆಳಗಿಸು, ನಮ್ಮ ಹೃದಯಗಳನ್ನು ಪ್ರಕಾಶಿಸು, ಚೇತನವನ್ನು ಪರಿವರ್ತನಗೊಳಿಸು. ಪ್ರತಿಯೊಬ್ಬರಿಗೂ ಸತ್ಯ ಜೀವನದಲ್ಲಿ

ಆಸಕ್ತಿ ಉಂಟಾಗಲಿ. ಅಹಂಕಾರ ಅದರ ಜೊತೆಯಲ್ಲಿ ಬರುವ ದುಃಖ ವೇದನೆಗಳಿಂದ ಪಾರಾಗಿ, ಎಲ್ಲ ಶಾಂತಿ ಸುಖಗಳಿಗೆ ಆಗರವಾಗಿರುವ ನಿನ್ನ ಶುದ್ಧವಾದ ದೈವೀ ಪ್ರೇಮವನ್ನು ಆಶ್ರಯಿಸಲಿ. ನಿನ್ನಿಂದ ತುಂಬಿದ ನನ್ನ ಹೃದಯವು ಅನಂತ ವೈಶಾಲ್ಯವನ್ನು ಪಡೆಯುವಂತೆ ತೋರುವುದು. ನಿನ್ನ ಸಾನ್ನಿಧ್ಯದಿಂದ ಜ್ಞಾನವನ್ನು ಪಡೆದ ನನ್ನ ಬುದ್ಧಿಯು ಅತಿಶುಭ್ರವಾದ ವಜ್ರದಂತೆ ಹೊಳೆಯುವುದು. ನೀನು ಪವಾಡ ಮಹಿಮೆಯುಳ್ಳ ಐಂದ್ರಜಾಲಕ. ಎಲ್ಲವನ್ನೂ ರೂಪಾಂತರಿಸುವೆ. ವಿಕಾರದಿಂದ ಸೌಂದರ್ಯವನ್ನೂ ಕತ್ತಲಿನಿಂದ ಬೆಳಕನ್ನೂ ಕೆಸರಿನಿಂದ ತಿಳಿನೀರನ್ನೂ ಅಜ್ಞಾನದಿಂದ ಜ್ಞಾನವನ್ನೂ, ಅಹಂಕಾರದಿಂದ ದಯೆಯನ್ನೂ ಆವಿರ್ಭವಿಸುವೆ. ನಿನ್ನಲ್ಲಿ, ನಿನ್ನಿಂದ, ನಿನಗಾಗಿ ನಾವು ಬಾಳುವೆವು. ಹಾಗು ನಿನ್ನ ಶಾಸನವೇ ನಮ್ಮ ಜೀವನದ ಪರಮ ಪ್ರಭು.

ಎಲ್ಲೆಲ್ಲಿಯೂ ನಿನ್ನ ಇಚ್ಛೆಯು ಸಲ್ಲಲಿ. ಜಗತ್ತಿನಲ್ಲೆಲ್ಲಾ ನಿನ್ನ ಶಾಂತಿಯು ರಾರಾಜಿಸಲಿ.

ನವೆಂಬರ ೨೪, ೧೯೩೧

ಹೇ ನನ್ನ ಪ್ರಭುವೇ, ನನ್ನ ಪ್ರೀತಿಯ ಸ್ವಾಮಿಯೇ, ನಿನ್ನ ಕಾರ್ಯಸಿದ್ಧಿಗಾಗಿ ನಾನು ಅಗಾಧವಾದ ಜಡದ ಆಳದಲ್ಲಿ ಮುಳುಗಿರುವೆನು. ಅಚೇತನ ಮತ್ತು ಅನೃತಗಳ ಭೀಕರತೆಯನ್ನು ನನ್ನ ಅಂಗುಲಿಯಿಂದ ಸ್ಪರ್ಶಿಸಿದ್ದೇನೆ. ಘನ ತಿಮಿರದ ಹಾಗು ವಿಸ್ಮೃತಿಯ ಸ್ಥಾನವನ್ನೇ ನಾನು ಮುಟ್ಟಿರುವೆನು. ಆದರೆ ನನ್ನ ಹೃದಯದಲ್ಲಿ **ನೆನಹು** ಹುದುಗಿತ್ತು. ನನ್ನ ಹೃದಯಾಂತರಾಳದಿಂದ ನಿನ್ನ ಸಾನ್ನಿಧ್ಯವನ್ನು ತಲಪಬಹುದಾದ ಕೂಗು ಹೊರಹೊಮ್ಮಿತು : "ಪ್ರಭುವೇ, ಪ್ರಭುವೇ, ಎಲ್ಲೆಲ್ಲಿಯೂ ನಿನ್ನ ಶತ್ರುಗಳು ಜಯಶೀಲರಾಗಿರುತ್ತಾರೆ; ಅನೃತವು ಲೋಕವನ್ನು ಆಳುತ್ತಿದೆ; ನಿನ್ನ ಹೊರತು ಬಾಳು ಸಾವೇ, ಸತತ ನರಕವೇ. ಸಂಶಯವು ಆಶೆಯ ಜಾಗೆಯನ್ನು ಆಕ್ರಮಿಸಿದೆ, ವಿರೋಧ ಬುದ್ಧಿಯು ನಮ್ರತೆ ವಿಧೇಯತೆಗಳನ್ನು ಹೊರ ತಳ್ಳಿವೆ; ಶ್ರದ್ಧೆಯು ಸೋತಿದೆ; ಕೃತಜ್ಞತೆಯು ಇನ್ನೂ ಜನಿಸಿಲ್ಲ. ಕಣ್ಣಿಲ್ಲದ ಉದ್ರೇಕ–ಉದ್ವಿಗ್ನತೆಗಳು, ಸಂಹಾರಕ ಪ್ರವೃತ್ತಿಗಳು, ಮತ್ತು ಅಪರಾಧಿಯಾದ ದೌರ್ಬಲ್ಯವು ಎಲ್ಲೆಲ್ಲಿಯೂ ಹಬ್ಬಿ ನಿನ್ನ ಪ್ರೀತಿಯ ಮಧುರ ಶಾಸನದ ಉಸಿರಡಗಿಸಿವೆ. ಪ್ರಭುವೇ, ನಿನ್ನ ಶತ್ರುಗಳು ಗೆಲ್ಲಲು ನೀನು ಆಸ್ಪದ ಕೊಡುವೆಯಾ ? ಅನೃತ, ವಿಕೃತಿ , ಯಾತನೆಗಳು ಗೆಲ್ಲಬಹುದೇ ? ಪ್ರಭುವೇ ಜಯಿಸಲು ಆಜ್ಞಾಪಿಸು; ಜಯವು ಸಿದ್ಧ. ನಾವು ಅನರ್ಹರೆಂದು ನಾನು ಬಲ್ಲೆನು; ಜಗತ್ತು ಇನ್ನೂ ಸಿದ್ಧವಿಲ್ಲವೆಂಬುದನ್ನೂ ಬಲ್ಲೆ. ನಿನ್ನ ಕೃಪೆಯಲ್ಲಿ ಸಂಪೂರ್ಣ ಶ್ರದ್ಧೆಯನ್ನಿಟ್ಟು ನಾನು ನಿನಗೆ ಮೊರೆ ಇಡುವೆ. ನಿನ್ನ ಕೃಪೆಯು ನಮ್ಮನ್ನು ಕಾಪಾಡುವುದೆಂದು ನಾನು ನಂಬಿದ್ದೇನೆ."

ಹೀಗೆ ನನ್ನ ಪ್ರಾರ್ಥನೆಯು ನಿನ್ನೆಡೆಗೆ ಧಾವಿಸಿತು. ನೆಲೆಹತ್ತದ ಆಳದಿಂದ ನಾನು ನಿನ್ನನ್ನು ನಿನ್ನ ಜ್ಯೋತಿರ್ಮಯ ವೈಭವದಲ್ಲಿ ಕಂಡೆನು. ನೀನು ಪ್ರತ್ಯಕ್ಷವಾಗಿ ನನಗೆ ಅಭಯವನ್ನಿತ್ತೆ : ಅಧೀರತೆ ಬೇಡ, ಸ್ಥೈರ್ಯವಿರಲಿ. ವಿಶ್ವಾಸ ತಳೆ— **ನಾ ಬರುವೆ.**

—ಹ. ಮ. ಬಬಲೇಶ್ವರ
—ಅ. ವೆಂಕಪ್ಪಶಾಸ್ತ್ರಿ
(ಅನುವಾದಕರು)

# ತಾಳ್ಮೆ

## (ಮಾತುಃಶ್ರೀಯವರ ಅಮೃತವಾಣಿ)

(ಇದೇ ವರ್ಷ ಪ್ರಕಟವಾದ ಶ್ರೀ ತಾಯಿಯವರ 'Words of the Mother' ಗ್ರಂಥದ ೭ನೆಯ ಪ್ರಕರಣವಿದು; ಇದರಲ್ಲಿ ತಾಳ್ಮೆ-ಸ್ತುತಿಗಾಗಿ ಪ್ರಾಣದ ಹಸಿವು-ಪರಿವರ್ತಿತ ಪ್ರಾಣದ ಲಕ್ಷಣಗಳು ಎಂಬ ಮೂರು ಅಂಶಗಳ ವಿವೇಚನೆಯಿದೆ)

## ತಾಳ್ಮೆಯೇ ಮಂತ್ರವಾಗಲಿ !

ತಾಳ್ಮೆಯೇ ನಿಮ್ಮ ಮನನ ಮಂತ್ರವಾಗಲಿ. ನಿಮ್ಮಲ್ಲಿಯ ಪ್ರಾಣಶಕ್ತಿಗೆ, ಅಂದರೆ ನಿಮ್ಮ ಪ್ರಾಣಮಯ ಶರೀರಕ್ಕೆ ಒಂದು ಸಂಗತಿಯನ್ನು ಚೆನ್ನಾಗಿ ಕಲಿಸಿರಿ. ಅದಾವುದೆಂದರೆ, ಮಹತ್ಕಾರ್ಯಗಳನ್ನು ಸಾಧಿಸಹೊರಟಾಗ ಒದಗಲೇಬೇಕಾದ ಎಲ್ಲ ಬಗೆಯ ಸ್ಥಿತಿ ಸಂಕಷ್ಟಗಳನ್ನು ಸಹಿಸಬೇಕಲ್ಲದೆ ದೂರುತ್ತಲಿರ ಬಾರದು. ಈ ದೇಹವೆಂಬುದು ಬಹು ಸಹನಶೀಲ ಸೇವಕನಂತಿದೆ. ಇದು ದೇಶ-ಕಾಲ-ಪರಿಸ್ಥಿತಿಗಳ ಆಘಾತವನ್ನು ನೊಗಕ್ಕೆ ಹೆಗಲು ನೀಡುವ ಮೂಕ ಪ್ರಾಣಿಯಂತೆ ಬಾಗಿ ಬಲು ತಾಳ್ಮೆಯಿಂದ ಸಹಿಸುತ್ತದೆ. ಆದರೆ ಪ್ರಾಣಮಯ ಶರೀರವು ಸರ್ವತ್ರ ಸದಾ ಗೊಣಗುತ್ತ ಕಳವಳಪಡುತ್ತಲೇ ಇರುವದು. ಪ್ರಾಣವು ದೇಹಕ್ಕೆ ಕೊಡುವ ಉಪಟಳಕ್ಕೆ ಎಲ್ಲೆಯೇ ಇಲ್ಲ. ಪ್ರಾಣದ ದಬ್ಬಾಳಿಕೆಯಲ್ಲಿ ದೇಹವು ಜರ್ಜರಿತವಾಗಿ ಹೋಗಿದೆ. ಪಾಪ, ಈ ಬಡ ದೇಹವನ್ನು ಪ್ರಾಣವು ತನಗೆ ಬೇಕುಬೇಕಾದಂತೆ ಹಿಂಡಿ ಹಿಂಡಿ ವಿದ್ರೂಪ ಗೊಳಿಸುತ್ತದೆ. ಎಲ್ಲವೂ ತನ್ನ ತರಲ ಮನೋಲಹರಿಗನುಸರಿಸಿಯೇ ರೂಪಗೊಳ್ಳಬೇಕೆಂದು ಪ್ರಾಣದ ದುರಾಗ್ರಹ. ಆದರೆ ಪ್ರಾಣವು ತನ್ನ ಈ ತರಲ ಮನಸುಖವೃತ್ತಿಯ ಬೇಕುಬೇಡಗಳ ದುರಾಗ್ರಹವನ್ನು ತೊರೆದು, ತಿಕ್ಕಿ ಮುಕ್ಕುವ ಹೊತ್ತು ಬಂದಾಗಲೂ ತೂಕ ತಪ್ಪದ ಹಾಗೆ ಇರಲು ಕಲಿಯಬೇಕು. ಇದೇ ಸಹನೆಯ ಸಾರಸರ್ವಸ್ವವಾಗಿದೆ. ಯಾರಾದರೂ ನಿಮ್ಮೊಡನೆ ಒರಟಾಗಿ ನಡೆದುಕೊಂಡಾಗ, ಇಲ್ಲವೆ ನಿಮ್ಮ ಕೋಟಲೆಗಳನ್ನು ಹೋಗಲಾಡಿಸಬಹುದಾದ ಯಾವದೊಂದು ಒಡವೆ ಸಿಕ್ಕದಿರುವಾಗ–ಗೊಂದಲಗೆಟ್ಟು ಹರಿದಾಡದೆ, ನಗೆಮೊಗದಿಂದ ತಾಳಿಕೊಳ್ಳಬೇಕು. ಯಾವುದರಿಂದಲೂ ನೀವು ಒಂದು ಎಳ್ಳಮೊನೆಯಷ್ಟೂ ವಿಚಲಿತರಾಗಕೂಡದು. ಪ್ರಾಣವು ತನ್ನ ಕ್ಷುದ್ರ ಆಕಾಂಕ್ಷೆಗಳನ್ನು ಅದೆಷ್ಟೇ ಗುರುಗಂಭೀರವಾಗಿ ಮಂಡಿಸಲು ಹವಣಿಸಿದರೂ, ಅವುಗಳ ಅಗತ್ಯತೆಯ ಬಗೆಗೆ ಅದೆಷ್ಟೇ ಅತಿರಂಜಿತವಾಗಿ ವರ್ಣಿಸಿದರೂ, ಇದಾವುದನ್ನೂ ಲೆಕ್ಕಿಸದೆ ಒಂದು ಕ್ಷಣ ತಡೆದು ವಿಚಾರಿಸಿ ನೋಡಿರಿ. ಆಗ ಲೋಕದೊಳಗಿನ ಇನ್ನುಳಿದ ಅನೇಕರಿಗಿಂತ ನಿಮ್ಮ ಪಾಡು ಅದೆಷ್ಟೋ ಒಳ್ಳೆಯದೆಂದೂ ನೀವೇ ನೆಮ್ಮದಿವಂತರೆಂದೂ ನಿಮಗೆ ಖಂಡಿತ ಕಂಡುಬರುವದು. ಕಳೆದ ಮಹಾಯುದ್ಧದಲ್ಲಿ ಹೋರಾಡಿದ ಸೈನಿಕರು ಅದೆಂತಹ ಕಷ್ಟ ನಿಷ್ಠುರಗಳನ್ನು ಸಹಿಸಬೇಕಾಯಿತೆಂಬು ದನ್ನು ತುಸು ನೆನೆದು ನೋಡಿರಿ. ಆ ಬಗೆಯ ಭವಣೆಗಳನ್ನು ಭೋಗಿಸುವ ಸಂದರ್ಭವೇ ಒಂದು ವೇಳೆ ಬಂದಿದ್ದರೆ ನಿಮಗೆ ತಿಳಿಯುತ್ತಿತ್ತು—ನಿಮ್ಮ ಅತೃಪ್ತಿ, ನಿಮ್ಮ ಲಾಲಸೆ ಅದೆಷ್ಟು ಹುಡುಗಾಟದ್ದು ಹಾಗು

ಹುರುಳಿಲ್ಲದ್ದು ಎಂಬುದು. ಹೀಗೆ ಹೇಳಿದಾಕ್ಷಣಕ್ಕೆ ಸಂಕಷ್ಟಗಳನ್ನು ಬೇಕೆಂದೇ ಹುಡುಕಿಕೊಂಡು ಹೋಗ ಬೇಕು ಎಂದರ್ಥವಲ್ಲ. ನಿಮ್ಮ ಜೀವನದಲ್ಲಿ ಕಾಣಿಸಿಕೊಳ್ಳುವ ಸಂಣ ಪುಟ್ಟ ತೊಂದರೆಗಳನ್ನು ನೀವು ಸಹಿಸಿಕೊಳ್ಳಲು ಕಲಿಯಬೇಕೆಂದಿಷ್ಟೇ ನನ್ನ ಅಭಿಪ್ರಾಯ.

ಸಹನೆ ಇಲ್ಲದೆ ಅದೆಂದಾದರೂ ಅದಾವುದೇ ಮಹತ್ಕಾರ್ಯ ಸಿದ್ಧಿಸಿದ್ದುಂಟೆ? ಮಹಾಪುರುಷರ ಜೀವನ ಚರಿತ್ರಗಳನ್ನು ಅಭ್ಯಸಿಸಿ ನೋಡಿರಿ. ಪ್ರಾಣದ ದುರ್ಬಲ-ಕ್ಷುದ್ರ ಚಾಪಲ್ಯಗಳ ದಾಳಿಯನ್ನು ತಡೆಗಟ್ಟಲು ಅವರು ಬೆಣಚುಗಲ್ಲಿನ ಗೋಡೆಗಳಾಗಿ ನಿಂತದ್ದು ಕಂಡುಬರುವದು. ಇಂದಿನ ಯುಗದಲ್ಲಿ ಸಹ ಸಭ್ಯತೆಯ ನಿಜವಾದ ಅರ್ಥವೇನು ಗೊತ್ತೆ? ಪ್ರಾಣದಲ್ಲಿ ಉಂಟಾದ ಸಹನಶೀಲತೆಯ ಮೂಲಕ ಈ ದೇಹವನ್ನು ಸ್ವಾಧೀನಪಡಿಸಿಕೊಳ್ಳುವದೇ ನಿಜವಾದ ಸಭ್ಯತೆ-ಸಜ್ಜನಿಕೆ. ಬಾಳುವೆಯ ನಾನಾ ಮುಖರಂಗ ಗಳಲ್ಲಿ ಹೆಜ್ಜೆ ಹೆಜ್ಜೆಗೂ ಎದ್ದುನಿಲ್ಲುವ ಅಡೆತಡೆಗಳನ್ನು,—ಸಾಹಸವೃತ್ತಿಯಿಂದ, ಕ್ರೀಡಾಲೋಲ ಭಾವದಿಂದ, ಲೋಕೈಕವೀರನ ಧೈರ್ಯದಿಂದ ತಾಗುವ ಎದೆಗಾರಿಕೆ ಬೇಕು. ಈ ಗುಣಗಳೆಂದರೆ ಆದರ್ಶ ಸಹನೆಯ ಪ್ರತೀಕ ಗಳೇ ಆಗಿವೆ. ಶಾಸ್ತ್ರೀಯ ಸಂಶೋಧನಗಳು ಸಹ ಸಿದ್ಧಾಂತವಾಗಿ ಬೆಳೆದು ನಿಲ್ಲಬೇಕಾದರೆ, ಮೊದ ಮೊದಲು ಲೆಕ್ಕವಿಲ್ಲದ ಕಠಿಣ ಪ್ರಯೋಗಗಳನ್ನೂ ಮತ್ತೆ ಮತ್ತೆ ಒರೆದೊರೆದು ನೋಡುವ ನಿರೀಕ್ಷಣೆಗಳನ್ನೂ ಅವಲಂಬಿಸಬೇಕಾಗಿ ಬರುವದು. ಎಂದ ಮೇಲೆ, ನಮ್ಮ ಆಶ್ರಮದಲ್ಲಿ ನಾವು ಕೈಕೊಂಡ ಅದ್ವಿತೀಯ ಅಮೋಘ ಕಾರ್ಯದಲ್ಲಿ ಸಹಿಷ್ಣುತೆ ಎಂಬುದು ಎಷ್ಟಾದರೆ ಸಾಕಾದೀತು? ಅದ್ದರಿಂದ ನಿಮ್ಮ ಪ್ರಾಣ ಪ್ರತಿಭಟಿಸಿ ನಿಂತಾಗಲೆಲ್ಲ ಕೂಡಲೆ ಅದರ ತಲೆ ಕುಕ್ಕಿಬಿಡಬೇಕು; ಏಕೆಂದರೆ, ದೇಹವು ಪ್ರತಿಭಟಿಸಿದಾಗ ವಿವೇಕವೆಂಬುದು ಯುಕ್ತಾಯುಕ್ತತೆಯನ್ನು ಸಮಾಲೋಚಿಸಿ ಎಚ್ಚರಿಕೆ ಹೇಳಲುಂಟು. ಆದರೆ ಪ್ರಾಣದ ಮಾತು ಹಾಗಲ್ಲ, ಅದಕ್ಕೆ ಒಳ್ಳೆಯ ಪೆಟ್ಟುಗಳೇ ತಕ್ಕ ಮದ್ದು. ಪ್ರಾಣವು ದೂರಿದಾಕ್ಷಣವೇ ಅದನ್ನು ಗುದ್ದಿ, ಮಿದ್ದಿ ಹಿಡಿತದಲ್ಲಿ ಡಿರಿ: ಹಾಗಲ್ಲದೆ ಅದರ ಕ್ಷುದ್ರವೃತ್ತಿಯಿಂದ ಬಿಡುಗಡೆ ಹೊಂದುವ ಬೇರೆ ದಾರಿಯೇ ಇಲ್ಲ. ಬೆಳಕು-ಸತ್ಯ ಗಳನ್ನು ಕೋರುವುದನ್ನು ಬಿಟ್ಟು, ಕ್ಷುದ್ರ ಪ್ರಾಣವು ಅವಿವೇಕದಿಂದ, ಸಾಮೂಹಿಕ ಸೌಕರ್ಯಗಳಿಗೂ ವಿಷಯೋಪಭೋಗಗಳಿಗೂ ಇಲ್ಲದ ಬೆಲೆಗೊಟ್ಟು ಅವಕ್ಕಾಗಿ ಹಂಬಲಿಸುತ್ತದೆ.

## ಸ್ತುತಿಗಾಗಿ ಪ್ರಾಣದ ಹಸಿವು

ಪ್ರಾಣಕ್ಕೆ ಪದೇ ಪದೇ ಬೇಕಾಗುವದು ಆತ್ಮಸ್ತುತಿ, ಕೀಳ್ಗೈದು ಟೀಕಿಸಿ ವಿಮರ್ಶಿಸಿದ್ದನ್ನು ಪ್ರಾಣವು ಸರ್ವಥಾ ಸಹಿಸದಿಷ್ಟೇ ಅಲ್ಲ, ಅದನ್ನು ಅದು ತೀವ್ರವಾಗಿ ತಿರಸ್ಕರಿಸುತ್ತದೆ. ಆದರೆ ಇದು ಉಪಯೋಗ ದ್ದಲ್ಲ. ತನಗಾದ ವಿರೋಧ-ಪ್ರತಿರೋಧಗಳನ್ನು ಪ್ರಾಣವು ಸ್ವೀಕರಿಸಲು ಸಿದ್ಧವಿರಬೇಕಲ್ಲದೆ ಅವನ್ನು ಅತ್ಯಂತ ತಾಳ್ಮೆಯಿಂದ ಸಹಿಸಿಕೊಳ್ಳಲೂ ಬೇಕು. ಸ್ತೋತ್ರವಾಕ್ಯಗಳಿಗೆ ಮನಸೋತು ಅಹಂಕಾರ ತೃಪ್ತಿಯಲ್ಲಿ ಮೈಮರೆತು ಬಿಡುವದು ತುಂಬ ವಿಘಾತಕವಾದದ್ದು. ಇಷ್ಟೇ ಅಲ್ಲ. ಈ ದಿಶೆಯಲ್ಲಿ ಸಾಗಿದ ಒಂದೊಂದು ಚಲನವೂ ಅಸತ್ಯಲೋಕದ ಅಧಿಪತಿಗಳಿಗೆ ನೀಡಿದ ಒಂದೊಂದು ಆಹುತಿಯಾಗಿ ಪರಿಣಮಿಸುವದೆಂಬದ್ದು ನೆನಪಿನಲ್ಲಿಡಿರಿ. ಪ್ರಾಣ ಶಕ್ತಿಯ (Life-force) ಸೂಕ್ಷ್ಮಲೋಕವೊಂದಿದೆ. ನಮ್ಮ ಪ್ರಾಣಮಯ ಶರೀರಕ್ಕೆ ಈ ಸೂಕ್ಷ್ಮ ಲೋಕದ ಜೀವಿಗಳ ಸಂಪರ್ಕವಿರುತ್ತದೆ. ಈ ಜೀವಿಗಳು ತಮ್ಮ ಭಕ್ತರ ಪೂಜಾ-ನೈವೇದ್ಯಗಳಿಂದಲೆ ಬದುಕುತ್ತಾರೆ, ಪರಿಪುಷ್ಟರಾಗುತ್ತಾರೆ. ಎಂದೇ ಈ ಜೀವರು, ಹೊಸ ಹೊಸ ಧರ್ಮಸಂಥಗಳಿಗೆ ಸ್ಫೂರ್ತಿಕೊಡುತ್ತ ಅವನ್ನು ಪ್ರಚೋದಿಸುತ್ತ ತಮ್ಮ ತೋಷಕ್ಕೂ ಸ್ತುತಿಪಾಠಕ್ಕೂ ಪೂಜೆ ನೈವೇದ್ಯಗಳ ಸಮಾರೋಹಕ್ಕೂ ಕೊರತೆ ಬರದಂತೆ ಸದಾ ಯತ್ನಿಸುತ್ತಿರುತ್ತಾರೆ. ಇದೇ ಬಗೆಯಾಗಿ ನಮ್ಮ ಪ್ರಾಣಮಯ ಶರೀರ ಹಾಗೂ

ಅದರ ಹಿಂದಿದ್ದ ಪ್ರಾಣಾವೇಗಗಳು (Vital forces) ಸಹ ಪುಷ್ಟಗೊಳ್ಳುವವು. ಅರ್ಥಾತ್ ಹೆರರ ಸ್ತುತಿ–ಪಾಠ–ಪ್ರಶಂಸೆಗಳನ್ನು ಉಂಡುಂಡು ತಮ್ಮ ಅವಿದ್ಯೆ–ಅಜ್ಞಾನಗಳನ್ನು ತುಂಬಾ ಹೆಚ್ಚಿಸಿಕೊಳ್ಳುವವು. ಆದರೆ ಒಂದು ಮಾತನ್ನು ನೀವು ತಪ್ಪದೆ ನೆನಸಿನಲ್ಲಿಡಿರಿ,—ತನ್ನಂತೆ ಅಜ್ಞಾನಿಯಾಗಿದ್ದು ತನ್ನಂತೆಯೇ ಅವಿದ್ಯೆಯ ಒಂದೇ ಮಟ್ಟದಲ್ಲಿ ನಿಂತವರ ಸ್ತುತಿಪ್ರಶಂಸೆಗಳಿಗೂ ಬೆಲೆಯಿಲ್ಲ, ಟೀಕೆ ನಿಂದೆಗಳಿಗೂ ಬೆಲೆಯಿಲ್ಲ. ಇವುಗಳು ಎಷ್ಟೇ ದಂಭಗಂಭೀರ ಉಗಮಗಳಿಂದ ಹೊರಹೊಮ್ಮಿದ್ದರೂ ಅವು ಸರ್ವಥಾ ಜೊಳ್ಳು, ಟೊಳ್ಳು. ದುರ್ಭಾಗ್ಯದ ಸಂಗತಿಯೆಂದರೆ, ಲೋಭವಿಹ್ವಲವಾದ ಪ್ರಾಣಮಯ ಶರೀರವು, ಅಧಮರೂ ಅಯೋಗ್ಯರೂ ಶ್ವಪಚರೂ ಸರಿಸಿದ ದುರ್ಗಂಧಪೂರ್ಣ ಪ್ರಶಂಸಾನ್ನವನ್ನೂ, ಬಯಸಿ ಅದನ್ನು ಸಹ ತನ್ನ ಆಶೆಬುರುಕ ನಾಲಿಗೆ ಚಾಚಿ ಎಳೆದುಕೊಂಡು ಬಿಡುವದು.

ಪ್ಯಾರಿಸ ಪಟ್ಟಣದಲ್ಲಿ ಜರಗುವ ವಾರ್ಷಿಕ ಕಲಾಪ್ರದರ್ಶನದ ಉದ್ಘಾಟನದ ಪ್ರಸಂಗವೀಗ ನನ್ನ ನೆನಪಿಗೆ ಬರುತ್ತದೆ. ಆ ಕಾಲಕ್ಕೆ ಪ್ರಜಾರಾಜ್ಯದ ಅಧ್ಯಕ್ಷನು ವರ್ಣಚಿತ್ರಗಳನ್ನೆಲ್ಲ ಅವಲೋಕಿಸುತ್ತ ಇದು ನಿಸರ್ಗ ಚಿತ್ರವೆಂದೂ ಇದು ಭಾವಚಿತ್ರವೆಂದೂ ಅಮೋಘವಾದ ಆವಿಷ್ಕಾರ ಮಾಡಿದವರ ಹಾಗೆ ಉದ್ಗರಿಸುತ್ತ, ರಸಚಿತ್ರದ ರಹಸ್ಯವನ್ನು ತಾನಲ್ಲದೆ ಇನ್ನಾರು ಬಲ್ಲರೆಂಬ ಹೆಮ್ಮೆಯಿಂದ, ಅಸಾರ ವಚನಗಳಿಂದ ವ್ಯಾಖ್ಯಾನಿಸುತ್ತ ಸಾಗುತ್ತಿರುತ್ತಾನೆ. ಅವನ ಆ ವ್ಯಾಖ್ಯಾನವು– ಆ ಅಭಿಪ್ರಾಯವು ಅದೆಷ್ಟು ಅಪ್ರಸ್ತುತ—ಅಯೋಗ್ಯವೆಂಬುದು ಆ ಕಲಾವಿದರಿಗೆ ಚೆನ್ನಾಗಿ ಗೊತ್ತು. ಆದರೂ ಅವರ ಪ್ರತಿಭೆಯ ಬಗ್ಗೆ ಆ ಅಧ್ಯಕ್ಷನು ಒಡನುಡಿದ ಪ್ರಶಸ್ತಿಯನ್ನು ಉಲ್ಲೇಖಿಸುವ ಸುಸಂಧಿಯನ್ನು ಅವರೆಂದೂ ಕಳೆದುಕೊಳ್ಳುವದಿಲ್ಲ. ಏಕೆಂದರೆ, ಹೀಗಿದೆ ಮಾನವನ ಪ್ರಾಣಮಯ ಶರೀರದ ಕೀರ್ತಿಕಾಮುಕ ವೃತ್ತಿ.

## ಪರಿವರ್ತಿತ ಪ್ರಾಣದ ಲಕ್ಷಣಗಳು

ಸತ್ಯವು ಸರಿಯೆಂದು ಒಪ್ಪಿದ ಅಭಿಪ್ರಾಯಕ್ಕೇ ನಿಜವಾದ ಬೆಲೆಯಿದೆ. ಭಗವತ್–ಸತ್ಯದ ಸಂಪರ್ಕದಲ್ಲಿ ಬಂದವರು ಯಾರಾದರೂ ಇದ್ದರೆ, ಹಾಗೂ ಅವರು ಅದನ್ನು ಅಭಿವ್ಯಕ್ತಗೊಳಿಸಬಲ್ಲರಾದರೆ ಆ ಬಗೆಯೇ ಬೇರೆ. ಅಂಥವರ ಅಭಿಪ್ರಾಯಗಳು ಕೇವಲ ಪ್ರಶಂಸಾಪರವಾಗಲಿ, ಟೀಕಾತ್ಮಕವಾಗಿಯಾಗಲಿ ಇರುವದಿಲ್ಲ. ಅವು, ದೇವರಿಗೆ ನಿಮ್ಮ ಬಗ್ಗೆ ಯಾವ ಅಭಿಪ್ರಾಯವಿದೆ ಎಂಬುದನ್ನೂ ನಿಮ್ಮ ಗುಣಯೋಗ್ಯತೆಯ ಬಗ್ಗೆ ಆತನು ಯಾವ ನೆಲೆ ಬೆಲೆ ಕಟ್ಟಿದ್ದಾನೆ ಎಂಬುದನ್ನೂ ಆ ನಿಮ್ಮ ನೆಲೆ ಬೆಲೆಯ ಮುದ್ರೆ ನಿಮ್ಮ ಪ್ರಯತ್ನಗಳಲ್ಲಿ ಹೇಗೆ ತಪ್ಪದೆ ಪ್ರತಿಬಿಂಬಿತವಾಗುವದೆಂಬುದನ್ನೂ ವ್ಯಕ್ತಪಡಿಸುತ್ತವೆ. ಆದಕಾರಣ —ಸಾಕ್ಷಾತ್ ಸತ್ಯದಿಂದ ಬಂದದ್ದನ್ನಲ್ಲದೆ ಇನ್ನಾವುದನ್ನೂ ಮನ್ನಿಸದಂತಹ ಮನೀಷೆ ನಿಮ್ಮಲ್ಲಿ ಮೂಡಲಿ. ನಿಮ್ಮ ಯೋಗ್ಯತೆಯನ್ನು ಉನ್ನತಗೊಳಿಸಲು ನೀವು ಅಗ್ನಿಯನ್ನು ಅಧಿಷ್ಠಾನಗೊಳಿಸಿರಿ. ಈ ಅಗ್ನಿಯೆಂದರೆ ಪರಿವರ್ತನಪಟುವಾದ ಆತ್ಮಜ್ಯೋತಿ. ಈ ಜ್ಯೋತಿಯು ಸದಾ ಉನ್ಮುಖವಾಗಿ ಉರಿಯುತ್ತಿರಲಿ. ಈ ಅಗ್ನಿಯು ನಾಲಗೆ ಚಾಚಿ ಉರಿದೇಳುತ್ತಲೇ ಮೊದಮೊದಲು ನಿಮಗೆ ಸಂತೃಪ್ತಿಯನ್ನು ಕೊಡುತ್ತಿದ್ದ ಅಗ್ಗದ ಹೊಗಳಿಕೆಯ ಬಗ್ಗೆ ನಿಮ್ಮಲ್ಲಿ ಒಂದು ಬಗೆಯ ಬೇಸರ ತಾನಾಗಿ ಬೆಳೆದುಬರುತ್ತದೆ .: ಇದರಂತೆ ನಿಮ್ಮ ಪ್ರಶಂಸಾವ್ಯಾಮೋಹವು ಅಪರಿವರ್ತಿತ ಸ್ವಭಾವದ ಅಧಃಪ್ರವೃತ್ತಿ ಎಂಬ ಸಂಗತಿಯೂ ತಾನಾಗಿ ತಿಳಿದುಬಿಡುತ್ತದೆ. ಈ ಅನುಭವಗಳು ಗಮನಾರ್ಹ ಅಂಶಗಳಾಗಿವೆ. ಈಗಿನ ನಿಮ್ಮ ಅಪರಿಪೂರ್ಣತೆಯನ್ನು ಸ್ಪಷ್ಟವಾಗಿ ಅಳೆದು ತೋರಿಸಿ, ಆತ್ಮಪ್ರಗತಿಯ ಮಾರ್ಗವದು ನಮ್ಮೆದುರು ಎಷ್ಟು ಅಪರಿಸೀಮವಾಗಿ ಹರಹಿಕೊಂಡಿದೆ ಎಂಬುದನ್ನು ಈ ಅಗ್ನಿಯು ನಿಮ್ಮ ಪ್ರತೀತಿಗೆ ತಂದುಕೊಡುತ್ತದೆ. ಆಗ ನಿಮ್ಮ ಮೇಲೆ ಹೆರರು ಉಸುರಿಸಿದ ಪ್ರಶಂಸಾವೃಷ್ಟಿಯು ಹೇಸಿಗೆ ಹುಟ್ಟಿಸುತ್ತದೆ. ಮೊದಲಿನ ನಿಮ್ಮ ಸ್ತುತಿಪಾಠಕ

ಪರಮಮಿತ್ರರನ್ನು ಕಂಡಾಗ ಆಗದ ಹಾಗಾಗುತ್ತದೆ. ಇದಕ್ಕೆ ಪ್ರತಿಯಾಗಿ ಎಲ್ಲ ಬಗೆಯ ಟೀಕೆ–ನಿಂದೆಗಳು ನಿಮ್ಮ ಸತ್ಯಾನ್ವೇಷಣದ ಸಾಧು ಪಥದಲ್ಲಿ ಉಪಯುಕ್ತ ಸಾಮುಗ್ರಿಯಾಗಿ ಪರಿಣಮಿಸುವವು. ಇನ್ನೊಬ್ಬರು ನಿಮ್ಮನ್ನು ದ್ವೇಷಿಸಿದರೂ ಖೇದವಾಗದು, ಅಪಮಾನವೆನಿಸದು. ಆಗ, ಏನಿಲ್ಲೆಂದರೂ, ಇವನ್ನೆಲ್ಲ ನೀವು ನಿರಾಯಾಸದಿಂದ ಧಿಕ್ಕರಿಸಿ ಬಿಡಬಲ್ಲಿರಿ; ನಿಮ್ಮನ್ನು ನೀವು ಮೀರಿ, ನಿಮ್ಮಲ್ಲಿ ಭಗವದರ್ಪಣ ಭಾವವನ್ನು ಜಾಗರಿಸುವ ಸಾಮುಗ್ರಿಗಳಾಗಿಯೂ ಇವು ಪರಿಣಮಿಸಬಹುದು.

ಆತ್ಮಾಗ್ನಿಯ ಪ್ರಭಾವದಿಂದ ಉಂಟಾದ ನಿಮ್ಮ ಪ್ರಾಣಮಯ ಶರೀರದ ಪರಿವರ್ತನೆಯ ಇನ್ನೊಂದು ಹೆಗ್ಗುರುತೆಂದರೆ, ನೀವು ನಿಮ್ಮ ಆತಂಕ–ಸಂಕಟಗಳನ್ನೆಲ್ಲ ನಗೆಮೊಗದಿಂದ ಎದುರಿಸುವಿರಿ. ಹಿಂದೆ ನಿಮ್ಮಿಂದಾದ ತಪ್ಪುಗಳಿಗಾಗಿ ಗೋಳಿಟ್ಟು ಈ ವರೆಗೆ ಹೊಂದಬೇಕಾದಷ್ಟು ಪ್ರಗತಿಯನ್ನು ಹೊಂದಿಲ್ಲವಲ್ಲ ಎಂದು ತಲೆತಗ್ಗಿಸಿ, ಚೂಡಾಚ್ಯುತ (crest-fallen) ಮನೋಭಾವದಿಂದ, ಉರುಟು ಲಂಗೋಟಿ ಹಾಕಿ ಬೂದಿಬಡಕ ಬೈರಾಗಿಗಳಾಗಿ ಕೂಡಬೇಕೆಂದೂ ನಿಮಗನಿಸದು. ನಿಮ್ಮನ್ನು ಮುಸುಕಬಂದ ಔದಾಸೀನ್ಯ-ವಿಷಾದಗಳನ್ನು, ಲೀಲಾಜಾಲವಾಗಿ ನಗುನಗುತ್ತಲೇ ಚದುರಿಸಿಬಿಡುವಿರಿ. ನೂರು ನೂರು ತಪ್ಪುಗಳು ನಿಮ್ಮಿಂದ ಘಟಿಸಿದರೂ ನೀವಾಗ ಲೆಕ್ಕಿಸುವದಿಲ್ಲ—ಲೆಕ್ಕಿಸಬೇಕಾಗಿಲ್ಲ. ನಿಮ್ಮ ಚ್ಯುತಿಗಳನ್ನು ನಗುನಗುತ್ತಲೇ ಗುರುತಿಸಿ, ಮತ್ತೆ ಈ ಚ್ಯುತಿಯಾಗದಂತೆ ನೀವು ನಗುನಗುತ್ತಲೇ ಸಹಜವಾಗಿ ನಿರ್ಧರಿಸಿ ಬಿಡುವಿರಿ. ನಿಮ್ಮ ವಿಷಣ್ಣತೆಗೂ ಮ್ಲಾನಭಾವಕ್ಕೂ ಪ್ರತಿಕೂಲ ಶಕ್ತಿಗಳೇ ಕಾರಣ. ನಿಮ್ಮನ್ನು ಮ್ಲಾನ ವಿಷಾದ ಸಾಗರದಲ್ಲಿ ಮುಳುಗಿಸಿದಾಗಿದ್ದ ಸಂತೋಷ ಸಮಾಧಾನಗಳು ಆ ಶತ್ರುಶಕ್ತಿಗಳಿಗೆ ಇನ್ನಾವಾಗಲೂ ಇರುವದಿಲ್ಲ. ವಿನಯ ಒಂದು ಬಗೆಯಾದರೆ ವಿಷಾದದ ಬಗೆಯೇ ಬೇರೆ. ವಿನಯವು ದಿವ್ಯವೃತ್ತಿಯಾದರೆ ವಿಷಾದವು ಕರಾಳ ತಾಮಸ ಪಿಶಾಚ ಶಕ್ತಿಗಳ ವಿಕಟ ಅಭಿವ್ಯಕ್ತಿಯಾಗಿರುವದುಂಟು. ಆದ್ದರಿಂದ, ನಿಮ್ಮ ತೊಂದರೆಗಳನ್ನೆಲ್ಲ ಆನಂದದಿಂದ ಎದುರಿಸಿ, ದಿವ್ಯ ಪರಿವರ್ತನದ ಕಡಿದಾದ ದಾರಿಯಲ್ಲಿ ಸುತ್ತುಗಟ್ಟುವ ಅಡೆತಡೆಗಳನ್ನು, ಅಕ್ಷುಣ್ಣವಾದ ಪ್ರಸನ್ನತೆಯಿಂದಲೇ ಪ್ರತಿರೋಧಿಸಿರಿ. ಶತ್ರುವನ್ನು ಪರಾಜಯಗೊಳಿಸುವ ಅತ್ಯುತ್ತಮ ಉಪಾಯವೆಂದರೆ, ಅವನ ಸಮ್ಮುಖದಲ್ಲಿ ಉಪೇಕ್ಷೆಯಿಂದ ನಕ್ಕು ಬಿಡುವದು. ದೀರ್ಘಕಾಲ ನೀವು ಬಿಟ್ಟೂಬಿಡದೆ ಮುಗಿಬಿದ್ದು ಗುದುಮುರಿಗೆ ಹಾಕಿದರೂ ಶತ್ರುಬಲವು ಒಂದಿಷ್ಟೂ ಕುಗ್ಗದಿರ ಬಹುದು. ಆದರೆ ಆದೇ ಅವನತ್ತ ಒಮ್ಮೆ ನಕ್ಕು ನೋಡಿರಿ—ಅವನು ಕುಗ್ಗಿ ಮೆಲ್ಲಗೆ ಕಾಲ್ದೆಗೆಯು ತ್ತಾನೆ. ಆತ್ಮನಿರ್ಧಾರದ ನಗೆ, ಮತ್ತು ದೇವನಲ್ಲಿ ನಂಬುಗೆ—ಇವು ಎಂಥ ಬಲವಾದ ವ್ಯೂಹವನ್ನೂ ಭ್ರಂಶಮಾಡಬಲ್ಲ ಶಕ್ತಿಗಳಾಗಿವೆ. ಇವು ವೈರಿಯ ಪಡೆಗಳನ್ನು ತೊಡೆದು ಚದುರಿಸಿ, ಅವನ ಸೈನ್ಯಶ್ರೇಣಿ ಯಲ್ಲಿ ಕೋಲಾಹಲ ಹಬ್ಬಿಸಿ, ನಿಮ್ಮನ್ನು ಜಯೋಲ್ಲಾಸದಿಂದ ಮುನ್ನಡೆಸುತ್ತವೆ.

ಪರಿವರ್ತನ ಹೊಂದಿದ ಪ್ರಾಣವೂ ಸಾಕ್ಷಾತ್ಕಾರ ಕ್ರಮದಲ್ಲಿ ಆನಂದಪಡುತ್ತದೆ. ಇಷ್ಟೇ ಅಲ್ಲ, ಆಗ ಬಂದೊದಗುವ ಕಂಟಕಗಳನ್ನು ಉಪಭೋಗಿಸಿ ನೋಡಿಬಿಡುವಾ ಎಂಬ ಭಾವದಿಂದಲೇ ಅವನ್ನು ಬರಮಾಡಿ ಕೊಳ್ಳುತ್ತಾನೆ. ಪ್ರಾಣಕ್ಕೆ ಸತ್ಯದರ್ಶನ ಮಾಡಿಸಿದಾಗ, ಹಾಗೂ ಅದರ ನಿಮ್ಮ ಸ್ವಭಾವದಲ್ಲಿ ಚಲ್ಲಾಟ ಮಾಡುವ ಅಸತ್ಯದ ಹುಳುಕನ್ನು ಬೈಲಿಗೆಳೆದಾಗ ಅದಕ್ಕೆ ಹಿಂದೆಂದೂ ಆಗದಷ್ಟು ಆನಂದವಾಗುತ್ತದೆ. ಆಗ, ಪ್ರಾಣಕ್ಕೆ ಯೋಗದ ಅನುಷ್ಠಾನವು ಬೆನ್ನ ಮೇಲೆ ಹೊತ್ತ ಭಾರದಂತೆ ತೋರದೆ ಅದೊಂದು ಸುಖ ಕಾರಕ ಉದ್ಯಮವೇ ಆಗುವದು. ದಿವ್ಯ ಪರಿವರ್ತನವು ಕಷ್ಟ ಸಹಿಷ್ಣುತೆಯಿಂದಲೇ ಸಾಧ್ಯವೆಂದೇನಾದರೂ ಕಟ್ಟುನಿಟ್ಟು ಇದ್ದರೆ, ಪ್ರಾಣವು ಬೇಕಾದ್ದನ್ನು ಪ್ರಾಂಜಲವಾಗಿ ನಗುನಗುತ್ತ ಸಹಿಸಲು ಸಿದ್ಧವಾಗುವದು. ಮೊರಪೆ ಗೊಣಗದೆ ಹೀಗೇಕೆ ಅದು ಅತಿ ಆನಂದದಿಂದ ಸಹಿಸುವದು ಗೊತ್ತೇ? ಏಕೆಂದರೆ, ಇದೆಲ್ಲ

ಭಗವಂತನಿಗಾಗಿ. ಪರಿವರ್ತನೆ ಹೊಂದಿದ ಪ್ರಾಣಕ್ಕೆ ಜಯಸಿದ್ಧಿಯ ಬಗ್ಗೆ ಅಚಲ ವಿಶ್ವಾಸವುಂಟಾಗಿ ಬಿಡುವದು.

ಶ್ರೀ ಅರವಿಂದರು ಕೈಕೊಂಡ **ದಿವ್ಯಪರಿವರ್ತನದ** ಅತ್ಯಮೋಘ ಮಹತ್-ಕಾರ್ಯಕ್ಕೆ ಪ್ರಚಂಡ ವಿಜಯವು ಕಟ್ಟಿಟ್ಟಿದೆ ಎಂಬ ಬಗ್ಗೆ ಈ ರೂಪಾಂತರಿತ ಪ್ರಾಣಕ್ಕೆ ಒಂದು ನಿಮಿಷವೂ ಸಂದೇಹವೆನ್ನಿಸುವದಿಲ್ಲ. ಏಕೆಂದರೆ ಅದು ಅಸಂದಿಗ್ಧವಾದ ಸತ್ಯ ಸಿದ್ಧಾಂತ (Fact) ವಾಗಿದೆ. ನಾವು ಕೈಕೊಂಡ ಕಾರ್ಯದಲ್ಲಿ ಸಂದೇಹದ ನೆಳಲು ಸಹ ಸುಳಿದಾಡದು. ಇದೊಂದು ಕೇವಲ ಪ್ರಯೋಗ ಮಾತ್ರವಲ್ಲ, ಆದರೆ ಇದು ಅತಿಮಾನಸ ಶಕ್ತಿ (The Supermental)ಯ ಅಪರಿಹಾರ್ಯವಾದ ಆವಿರ್ಭಾವವಾಗಿದೆ—ಅದನ್ಯವಾದ ಪ್ರಕಟನೆಯಾಗಿದೆ. ರೂಪಾಂತರಿತ ಪ್ರಾಣಮಯ ಶರೀರಕ್ಕೆ ಭಾವೀ ವಿಜಯಶ್ರೀಯ ಪೂರ್ವದರ್ಶನವಾಗಿದೆ ಎಂದೇ ಅದು ತನ್ನ ಚಿತ್ತವನ್ನು ಪ್ರಗತಿಯತ್ತ ಉನ್ಮುಖವಾಗಿ ಇರಿಸಿದೆ; ದೇವ ವಿಜಯದ ನಿಶ್ಚಿತತೆಯಿಂದ ಉಂಟಾದ ಉತ್ಸಾಹಮೂಲಕವಾಗಿ, ಅದಕ್ಕೆ ಎಂದೂ ವಿಮುಖತೆ ಎಂಬುದೇ ಇಲ್ಲ. ಇಷ್ಟೇ ಅಲ್ಲ. ಅದು ತನ್ನಲ್ಲಿ ಸದಾ ಭಗವತ್-ಸಾನ್ನಿಧ್ಯವನ್ನು ಅನುಭವಿಸುತ್ತದೆ. ಅವಶ್ಯವಾದುದೆಲ್ಲವನ್ನೂ ಭಗವಂತನೇ ತನ್ನಲ್ಲಿದ್ದು ಮಾಡುತ್ತಾನೆಂದೂ ಶತ್ರು ನಿರೋಧಕ್ಕೆ ತನ್ನಲ್ಲಿ ತಗ್ಗುಕುಗ್ಗಿಲ್ಲದ ಕಸುವಿನ ಚಿಲುಮೆಯನ್ನು ಆತನೇ ಚಿಮ್ಮಿಸುತ್ತಾನೆಂದೂ ಕೊನೆಗೆ ಆತನೇ ತನ್ನ ಶತ್ರುಸಮುದಾಯವನ್ನು ಗೆದ್ದುಬಿಡುವನೆಂದೂ ಅದಕ್ಕೆ ಮನವರಿಕೆಯಾಗಿ ಹೋಗಿದೆ. ಎಂದ ಮೇಲೆ ಅದೇಕೆ ನಿರಾಶೆಗೊಳ್ಳಬೇಕು, ಅದೇಕೆ ದೂರಿಕೊಳ್ಳಬೇಕು ? ದಿವ್ಯ ಪರಿವರ್ತನವು ಘಟಿಸಿಯೇ ಘಟಿಸುವದು; ಅದನ್ನಾರು ತಡೆಗಟ್ಟಬಲ್ಲರು ? ಸರ್ವಸಮರ್ಥ ಪರಮಾತ್ಮನ ಮಹಾಸಂಕಲ್ಪವನ್ನು ಅದಾರು ಹದಗೆಡಿಸಬಲ್ಲರು ? ಆದ್ದರಿಂದ ಆತ್ಮಸಂದೇಶ (Diffidence) ವನ್ನೂ ದೌರ್ಬಲ್ಯವನ್ನೂ ಬಿಸುಟಿ ಬಿಡಿರಿ. ಈ ದೀರ್ಘ ಸಮರವು ಚಿರವಿಜಯವಾಗಿ ಮಾರ್ಪಡುವ ಮಹಾಮುಹೂರ್ತವು ಬೇಗ ಬರಲಿದೆ; ಆ ಮುನ್ನ ತುಸು ಹೊತ್ತು ಧೀರೋಚಿತವಾಗಿ ಸಹಿಸಿಕೊಳ್ಳುವ ಸಂಕಲ್ಪಮಾಡಿರಿ.

—ಮಾತುಃಶ್ರೀ

—ನಾರಾಯಣ ಸಂಗಮ

(ಅನುವಾದಕರು)

Life seeks for self-knowledge: it is only by the light of the spirit that it can find it.

ಪ್ರಾಣವು ಆತ್ಮಜ್ಞಾನವನ್ನು ಪಡೆಯಲು ಪ್ರಯತ್ನಿಸುವುದು; ಆದರೆ ಆತ್ಮದ ಬೆಳಕಿನಲ್ಲಿ ಮಾತ್ರ ಅದನ್ನು ಪಡೆಯಲು ಸಾಧ್ಯ.

The highest Truth is Truth of the Spirit.

ಆತ್ಮ ಸತ್ಯವೇ ಅತ್ಯುನ್ನತ ಸತ್ಯವು.

The Divine holds our hand through all and if he seems to let us fall, it is only to raise us higher.

ಎಲ್ಲ ಪ್ರಸಂಗಗಳಲ್ಲಿಯೂ ಭಗವಂತನು ನಮಗೆ ಅಭಯ ಹಸ್ತವನ್ನು ನೀಡುವನು; ನಾವು ಬೀಳಲು ಅವಕಾಶ ಕೊಟ್ಟ ಹಾಗೆ ತೋರಿದರೂ ಸಹ ನಮ್ಮನ್ನು ಉದ್ಧರಿಸುವನು.

—ಶ್ರೀ ಅರವಿಂದರು

# ಜೀವನ ಮೀಮಾಂಸೆ *

ತನ್ನನ್ನು ತಾನು ಅರಿತುಕೊಳ್ಳುವುದು ಮತ್ತು ಅಂಕೆಯಲ್ಲಿಟ್ಟುಕೊಳ್ಳುವುದು.

ಗುರಿಯಿಲ್ಲದ ಜೀವನವು ಎಂದಿಗೂ ದುಃಖಮಯ ಜೀವನವೇ ಸರಿ.

ನಿಮ್ಮಲ್ಲಿ ಪ್ರತಿಯೊಬ್ಬರಿಗೂ ಒಂದು ಗುರಿ ಇರಬೇಕು. ಆದರೆ ನಿಮ್ಮ ಜೀವನದ ಗುಣಧರ್ಮವು ನಿಮ್ಮ ಗುರಿಯ ಮೇಲ್ಮೆಯನ್ನು ಅವಲಂಬಿಸಿರುವದೆಂಬದನ್ನು ಮರೆಯದಿರಿ.

ನಿಮ್ಮ ಗುರಿಯು ಉನ್ನತ ಹಾಗು ವಿಶಾಲವೂ, ಉದಾರ ಮತ್ತು ನಿರಾಸಕ್ತವೂ ಇರಬೇಕು; ಎಂದರೆ ನಿಮ್ಮ ಜೀವನವು ನಿಮಗೂ ಎಲ್ಲರಿಗೂ ಬಹು ಅಮೂಲ್ಯವಾಗುವದು.

ನಿಮ್ಮ ಆದರ್ಶವು ಏನೇ ಇದ್ದರೂ ನಿಮ್ಮಲ್ಲಿ ನೀವು ಪೂರ್ಣತೆಯನ್ನು ಪಡೆಯುವವರೆಗೂ ನಿಮ್ಮ ಆದರ್ಶವನ್ನು ಸಂಪೂರ್ಣವಾಗಿ ನೀವು ಸಾಧಿಸಲಾರಿರಿ.

ನಿಮ್ಮ ಪೂರ್ಣತೆಯ ಮಾರ್ಗದಲ್ಲಿ ಮೊದಲ ಹೆಜ್ಜೆಯೆಂದರೆ ನಿಮ್ಮನ್ನು ನೀವು ಅರಿಯುವುದು; ಹಾಗು ನಿಮ್ಮ ಸತ್ವದ (Being) ವಿವಿಧಾಂಗಗಳನ್ನೂ ಅವವುಗಳ ವ್ಯಾಪಾರಗಳನ್ನೂ ಅರಿಯುವುದು. ಈ ವಿವಿಧ ಅಂಗಗಳನ್ನು ಒಂದರಿಂದ ಮತ್ತೊಂದನ್ನು ಬೇರ್ಪಡಿಸಲು ನೀವು ಬಲ್ಲವರಾಗಬೇಕು. ಆಗ, ನಿಮ್ಮಲ್ಲಿ ಉಂಟಾಗುವ ಚಲನೆಗಳ, ಅನೇಕ ಆವೇಗಗಳ, ಪ್ರತಿಕ್ರಿಯೆಗಳ ಮತ್ತು ನಿಮ್ಮನ್ನು ಕಾರ್ಯಪ್ರವೃತ್ತರನ್ನಾಗಿ ಮಾಡುವ ಪರಸ್ಪರ ವಿರೋಧಕ ಸಂಕಲ್ಪಗಳ ಮೂಲವನ್ನು ನೀವು ಕಂಡುಕೊಳ್ಳಬಹುದು. ಅದು ಹೆಚ್ಚು ನಿಷ್ಠೆ ಮತ್ತು ಸತತ ಪ್ರಯತ್ನಗಳನ್ನೊಳಗೊಂಡ ತತ್ಪರ ಶೋಧ. ಏಕೆಂದರೆ, ಮಾನವನ ಸ್ವಭಾವವು-ಅದರಲ್ಲಿಯೂ ಅವನ ಮಾನಸಿಕ ಸ್ವಭಾವವು—ಅವನು ಏನೇ ವಿಚಾರಿಸಿದರೂ, ಭಾವಿಸಿದರೂ, ಹೇಳಿದರೂ, ಮಾಡಿದರೂ ಅದಕ್ಕೆ ಅನುಕೂಲವಾದ ಸಮರ್ಥನೆಯನ್ನು ಕೊಡುವ ಸಹಜ ಪ್ರವೃತ್ತಿಯುಳ್ಳದ್ದಾಗಿದೆ. ಎಂದಿಗೂ ತಪ್ಪದ ವಿವೇಚನಾ ಸಾಮರ್ಥ್ಯವನ್ನು ನಮ್ಮಲ್ಲಿ ಬೆಳಸಿಕೊಳ್ಳುವುದಾದರೆ ನಾವು ಈ ಚಲನವಲನಗಳನ್ನು ಸೂಕ್ಷ್ಮವಾಗಿ ಪರಿಶೀಲಿಸಬೇಕು; ನಮ್ಮ ಅತ್ಯುನ್ನತ ಆದರ್ಶದ ನ್ಯಾಯಾಸ್ಥಾನದೆದುರು ಅವುಗಳನ್ನು ತಂದೊಡ್ಡಬೇಕು; ಅಲ್ಲಿಯ ನಿರ್ಣಯಕ್ಕೆ ತಲೆಬಾಗಲು ಸದಾ ಸಿದ್ಧರಿರಬೇಕು.

ನಮ್ಮ ಸತ್ವದ ಸತ್ಯತೆಯನ್ನು (The truth of our being) ಅರಿಯುವ ಶಕ್ತಿಯನ್ನು ಗಳಿಸುತ್ತ ಮುಂದಡಿಯಿಡುವದೇ ವಿಧಾತನು ನಮ್ಮನ್ನು ಸೃಜಿಸಿರುವದರ ಉದ್ದಿಶ್ಯ; ಅದೊಂದನ್ನೇ

* Bulletin of Physical Education, Vol ii, No 4, ನವ್ಹೆಂಬರ ೧೯೫೦ ನೆಯ ಸಂಚಿಕೆಯಲ್ಲಿ ಪ್ರಕಟವಾದ ಶ್ರೀ ತಾಯಿಯವರ "The Science of Living" ಎಂಬ ಲೇಖನದ ಅನುವಾದ

ಇಹಲೋಕದಲ್ಲಿಯು ನಮ್ಮ ಜೀವಿತದ ನಿಯೋಜಿತ ಕಾರ್ಯವೆಂದು ಇಟ್ಟುಕೊಳ್ಳಬಹುದು. ಆದ್ದರಿಂದ ಸದಾಕಾಲದಲ್ಲಿಯೂ ಸರಿಯಾದ ರೀತಿಯಲ್ಲಿಯೂ ನಮ್ಮ ಜೀವನ ಸತ್ಯಕ್ಕೆ ಬಾಧಕವಾದುವನ್ನೆಲ್ಲ ನಮ್ಮೊಳಗಿನಿಂದ ಕಿತ್ತಿ ಒಗೆಯುವದು ಹಾಗು ನಮ್ಮಿಂದ ದೂರೀಕರಿಸುವದು ನಮ್ಮ ನಿಜವಾದ ಪ್ರಗತಿಗೆ ಅತ್ಯಂತ ಆವಶ್ಯಕ ವಾಗಿವೆ. ಈ ಪ್ರಕಾರ ನಮ್ಮ ಇರವಿನ ಎಲ್ಲ ಭಾಗಗಳನ್ನೂ ಎಲ್ಲ ಘಟಕಗಳನ್ನೂ ನಮ್ಮಲ್ಲಿಯ ಚೈತ್ಯ ಕೇಂದ್ರದ (Psychic Centre) ಸುತ್ತಲೂ ಸಮರಸತೆಯಿಂದ ಹೊಂದುಗೂಡುವಂತೆ ಮಾಡಬಹುದು. ಆದರೆ ಇಂಥ ಐಕ್ಯ ಸಂಘಟನೆಯನ್ನು ಪರಿಪೂರ್ಣತೆಯು ಒಂದು ನೆಸಗೆ ತರಲು ಸಹ ಬಹಳ ಸಮಯ ಹಿಡಿಯುವದು. ಆದ್ದರಿಂದ, ಅದನ್ನು ಸಾಧಿಸಲು ನಾವು ತಾಳ್ಮೆ ಹಾಗು ಸಹನೆಗಳಿಂದ ಸನ್ನದ್ಧರಾಗಿ ನಮ್ಮ ಸಾಹಸದ ಜಯಸಿದ್ಧಿಗಾಗಿ ಅವಶ್ಯವಿದ್ದಷ್ಟು ಆಯುಷ್ಯವನ್ನು ವರ್ಧಿಸುವ ಪ್ರಥಸಿಶ್ಚಯವುಳ್ಳವರಾಗ ಬೇಕು.

ನಾವು ಈ ಶುದ್ಧೀಕರಣದ ಮತ್ತು ಐಕ್ಯಸಂಘಟನೆಯ ಕಾರ್ಯವನ್ನು ನಡೆಸುತ್ತಿರುವಂತೆಯೇ ನಮ್ಮ ಇರವಿನ ಬಾಹ್ಯ ಹಾಗೂ ಉಪಕರಣ ಭಾಗವನ್ನು ಸಹ ಪೂರ್ಣತೆಗೊಯ್ಯುವ ಬಗ್ಗೆಯೂ ಹೆಚ್ಚು ದಕ್ಷರಾಗಿರಬೇಕು. ಜೀವನದ ಮಹೋನ್ನತ ಸತ್ಯವು ಪ್ರಕಟವಾಗುವ ಸಮಯಕ್ಕೆ ನಿಮ್ಮಲ್ಲಿಯ ಮಾನಸಿಕ ಜೀವಿಯು ಸೂಕ್ಷ್ಮವೂ ಸತ್ತ್ವಯುಕ್ತವೂ ಆಗಿದ್ದರೆ ಮಾತ್ರ, ವ್ಯಕ್ತವಾಗಬೇಕಾದ ಆ ಕಲ್ಪನೆಗೆ, ಯೋಗ್ಯ ವಾದ ವಿಚಾರಸ್ವರೂಪವೊಂದನ್ನು ಪಡೆದು, ತನ್ನ ಶಕ್ತಿ ಹಾಗು ಸುಸ್ಪಷ್ಟತೆಗಳನ್ನು ಉಳಿಸಿಕೊಳ್ಳಲು ಸಾಧ್ಯವಾಗುವದು. ಈ ವಿಚಾರವು ಸಹ ಪುನಃ ಶಬ್ದಗಳಲ್ಲಿ ಪ್ರಕಟವಾಗಲೆಳಸಿದಾಗ ಅದಕ್ಕೆ ನಿಮ್ಮ ಶಬ್ದಭಾಂಡಾರವು ಸಾಕಷ್ಟು ಸಮೃದ್ಧವಾಗಿ ಗೋಚರಿಸಬೇಕು. ಇಲ್ಲವಾದರೆ ವಿಚಾರಗಳು ವಿಕೃತರೂಪ ಗೊಳ್ಳಬಹುದು. ಸತ್ಯವನ್ನು ರೂಪಿಸುವ ಈ ಸೂತ್ರವು ನಿಮ್ಮ ಎಲ್ಲ ಭಾವನೆಗಳಲ್ಲಿ, ಸಂಕಲ್ಪಗಳಲ್ಲಿ, ಕೃತಿಗಳಲ್ಲಿ ಹಾಗು ಇರವಿನ ಎಲ್ಲ ಚಲನೆಗಳಲ್ಲಿ ತುಂಬಿ ಆಳವಡಬೇಕು. ಮತ್ತು ಕೊನೆಯದಾಗಿ, ಸತತ ಪ್ರಯತ್ನದ ಫಲವಾಗಿ ಈ ಎಲ್ಲ ಚಲನೆಗಳು ಅವುಗಳ ಪೂರ್ಣತೆಯ ತುಟ್ಟತುದಿಯನ್ನು ತಲುಪಬೇಕು.

ಇದೆಲ್ಲವನ್ನೂ ಇಲ್ಲಿ ಸ್ಥೂಲವಾಗಿ ಕಾಣಿಸಿದ ಚತುರ್ವಿಧ ಸಂಯಮನದಿಂದ (four-fold discipline) ಸಾಧಿಸಬಹುದಾಗಿದೆ. ಸಂಯಮನದ ನಾಲ್ಕು ವಿಧಗಳು ಇಲ್ಲವೆ ಪದರುಗಳು ಒಂದಕ್ಕೊಂದು ವಿರೋಧಿಯಾಗಿಲ್ಲ. ಯಾರೊಬ್ಬರೂ ಅವೆಲ್ಲವನ್ನೂ ಏಕಕಾಲಕ್ಕೆ ಪಾಲಿಸಬಹುದಾಗಿದೆ. ಹಾಗೆ ಮಾಡುವದೇ ಹೆಚ್ಚು ಹಿತವು. ಅದರ ಪ್ರಥಮ ಹೆಜ್ಜೆಗೆ ನಾವು ಅಂತರ್ಮಾನಸ ಸಂಯಮನವೆಂದು (Psychic Discipline) ಕರೆಯಬಹುದು. ನಮ್ಮ ಇರವಿನ (Being) ಮಾನಸಿಕ ಕೇಂದ್ರಕ್ಕೆ 'ಅಂತರ್ಮಾನಸ'ವೆಂದು ಹೆಸರು ಕೊಡುತ್ತೇವೆ. ಅದೇ ನಮ್ಮ ಬಾಳಿನ ಮಹೋನ್ನತತಮ ಸತ್ಯದ ಆಂತರಿಕ ನೀಠವಾಗಿದೆ. ಮತ್ತು ಆ ಸತ್ಯವನ್ನರಿಯುವ ಹಾಗು ಸಾಕಾರವಾಗಿ ತೋರ್ಪಡಿಸುವ ಶಕ್ತಿ ಚೈತ್ಯಪುರುಷನ ದಾಗಿದೆ. ಆದ್ದರಿಂದ ನಮ್ಮ ಒಳಗಿರುವ ಆ ಚೈತ್ಯಪುರುಷನ ಅರಿವು ನಮಗಾಗುವದು ಬಹಳ ಮಹತ್ತ್ವದ ಸಂಗತಿಯಾಗಿದೆ. ನಾವು ಆ 'ಅಂತರ್ಮಾನಸ' ಇಲ್ಲವೆ ಚೈತ್ಯಪುರುಷನ ಇರವಿನಲ್ಲಿ ಸಮಸ್ತ ಶಕ್ತಿಗಳನ್ನು ಕೇಂದ್ರೀಕರಿಸಿ ಅಂತರ್ಮಾನಸವನ್ನು ನಮ್ಮ ನಿತ್ಯ ಜೀವನದ ಅನುಭವವಾಗಿ ಪಡೆದು, ಅದರೊಂದಿಗೆ ಸಮಗ್ರವಾಗಿ ಬೆರೆಯಬೇಕು.

ದೇಶಕಾಲಾನುಸಾರವಾಗಿ, ಈ ರೀತಿಯ ತಿಳಿವನ್ನು ಗಳಿಸುವ ಹಾಗು ತಾದಾತ್ಮ್ಯವನ್ನು ಹೊಂದುವ ವಿಷಯದಲ್ಲಿ ಅನೇಕ ಮಾರ್ಗಗಳು ಉಕ್ತವಾಗಿವೆ. ಕೆಲವು ಮಾನಸದ (Psychological) ಹಾದಿಗಳಾದರೆ ಕೆಲವು ಧಾರ್ಮಿಕವಾದವು; ಇನ್ನೂ ಕೆಲವು ಕೇವಲ ಯಾಂತ್ರಿಕ ರೀತಿಯುಳ್ಳ

ವುಗಳು. ನಿಜವಾಗಿ ನೋಡಿದರೆ ಪ್ರತಿಯೊಬ್ಬನೂ ತನಗೆ ಯೋಗ್ಯವಾದ ಪಥವನ್ನು ತಾನೇ ಕಂಡುಕೊಳ್ಳ ಬೇಕಾಗುವದು. ಮತ್ತು ಅವನಲ್ಲಿ ಅಚಲ ನಿಷ್ಠೆಯಿಂದೊಡಗೂಡಿದ ಅಭೀಪ್ಸೆಯೂ ದೃಢ ಹಾಗು ಅಪ್ರತಿ ಹತ ನಿರ್ಧಾರವೂ ಇದ್ದುವಾದರೆ,—ಹೊರಗೆ ಅಭ್ಯಾಸ ಹಾಗು ಮಾರ್ಗದರ್ಶನಗಳ ರೂಪವಾಗಿಯೂ ಒಳಗೆ ಏಕಾಗ್ರತೆ, ಧ್ಯಾನ, ಅಂತಃಪ್ರೇರಣೆ ಮತ್ತು ಅನುಭವರೂಪವಾಗಿಯೂ—ಅವನ ಅವಶ್ಯಕತೆಗನು ಗುಣವಾದ ಸಹಾಯವು ಅವನಿಗೆ ಖಂಡಿತವಾಗಿ ದೊರೆತು ಅವನು ತನ್ನ ಗುರಿಯನ್ನು ಮುಟ್ಟುವನು. ಇದಕ್ಕೆ ಒಂದು ಸಂಗತಿ ಮಾತ್ರ ಬೇಕೇಬೇಕು; ಅದೆಂದರೆ ಅರಿಯುವ ಹಾಗು ಅನುಭಾವಿಸುವ ಬಗೆಗೆ ದೃಢ ನಿರ್ಧಾರ. ಈ ಅರಿವು, ಈ ಅನುಭಾವ, ಬಾಳಿನ ಆದ್ಯ ಕಾರ್ಯ. ಈ ಅವಿರಲ್ಯ ಸೌಕ್ತಿಕವನ್ನು ಪಡೆಯಲು ಯಾವ ಕಷ್ಟ ಅನುಭವಿಸಬೇಕಾಗಿ ಬಂದರೂ ಇಷ್ಟವೇ ಸರಿ. ನೀವು ಏನನ್ನೂ ಮಾಡುತ್ತಿರಲಿ, ಯಾವದೇ ಉದ್ಯೋಗದಲ್ಲಿ ಇಲ್ಲವೆ ಕಾರ್ಯದಲ್ಲಿ ತೊಡಗಿರಲಿ,—ನೀವು ಮಾಡುವ ಪ್ರತಿಯೊಂದು ಕಾರ್ಯದ ಹಿಂದೆ, ನೀವು ಪಡೆಯುವ ಪ್ರತಿಯೊಂದು ಅನುಭವದ ಹಿಂದೆ, ನಿಮ್ಮಲ್ಲಿ ಮೂಡುವ ಪ್ರತಿಯೊಂದು ವಿಚಾರದ ಹಿಂದೆ–ನಿಮ್ಮ ಇರವಿನ ಒಳಗುಟ್ಟನ್ನು ಶೋಧಿಸಿ ಅದರೊಡನೆ ಒಂದಾಗುವ ಹಂಬಲ ನಿಮ್ಮಲ್ಲಿ ಯಾವಾಗಲೂ ಜಾಗ್ರತವಾಗಿರಲಿ.

ಈ ಆಂತರಿಕ ಶೋಧದ ಗತಿಯನ್ನು ಪೂರ್ತಿಗೊಳಿಸಲು ಮಾನಸಿಕ ವಿಕಾಸವನ್ನು ಉಪೇಕ್ಷಿಸದಿರು ವದು ಉತ್ತಮವಾದುದು. ಏಕೆಂದರೆ ಮಾನಸಿಕ ಉಪಕರಣವು ಒಳ್ಳೇ ಉಪಕಾರಕವಾಗುವಂತೆಯೇ ಬಹು ದೊಡ್ಡ ಆತಂಕವೂ ಆಗಬಲ್ಲುದು. ಪರಿಸೀಮಿತ ದೃಷ್ಟಿ, ಸಂಕುಚಿತ ತಿಳಿವಳಿಕೆ ಮತ್ತು ಜಡ ಕಲ್ಪನೆ ಇವು ಯಾವಾಗಲೂ ಮಾನವನ ಮನಸ್ಸಿನ ಹುಟ್ಟುಗುಣಗಳಾಗಿವೆ. ಅದನ್ನು ವಿಶಾಲಗೊಳಿಸಿ ಪ್ರತಿಕ್ರಿಯಾಶೀಲವನ್ನಾಗಿಯೂ ಗಂಭೀರವನ್ನಾಗಿಯೂ ಮಾರ್ಪಡಿಸಲು ಕೆಲವೊಂದು ಪ್ರಯತ್ನವು ಅವಶ್ಯಕ ವಿದೆ. ಆದ್ದರಿಂದ ಯಾವುದೇ ಸಂಗತಿಯನ್ನಾಗಲಿ ಶಕ್ಯವಿದ್ದಷ್ಟು ವಿವಿಧ ದೃಷ್ಟಿಕೋನಗಳಿಂದ ವಿಚಾರಿಸುವದು ಅತ್ಯಗತ್ಯವಾದುದು. ಈ ಸಂಬಂಧದಲ್ಲಿ ವಿಚಾರ ಕ್ರಿಯೆಗೆ ಉದಾತ್ತತೆಯನ್ನೂ ಪ್ರತಿಕ್ರಿಯಾಶೀಲತೆಯನ್ನೂ ಒದಗಿಸಿ ಕೊಡಬಲ್ಲ ಅಭ್ಯಾಸವೊಂದಿದೆ. ಅದು ಇಂತಿದೆ:– ಸುಸಂಬದ್ಧವಾದ ಒಂದು ವಿಚಾರಸರಣಿ ಯನ್ನು ಮುಂದಿಡುವದು; ಅನಂತರ ಅಷ್ಟೇ ಸುಸಂಬದ್ಧ ಮತ್ತು ತರ್ಕಶುದ್ಧ ರೀತಿಯಲ್ಲಿ ಅದಕ್ಕೆ ವಿರುದ್ಧ ವಾಗಿ ಪ್ರತಿವಾದವನ್ನು ಮಂಡಿಸುವದು. ಆ ಬಳಿಕ ಸೂಕ್ಷ್ಮವಾಗಿ ವಿಚಾರಿಸಿ ಆ ಸಮಸ್ಯೆಯನ್ನು ಪ್ರಸ್ತರಿಸ ಬೇಕು ಇಲ್ಲವೆ ಉನ್ನತ ಪ್ರಸ್ಥಾನಕ್ಕೆ ಒಯ್ಯಬೇಕು. ಅಂದರೆ ವಿಶಾಲತರವಾದ, ಉನ್ನತತರವಾದ ಹಾಗೂ ಸಮಗ್ರವಾದ ವಿಚಾರಸರಣಿಯಲ್ಲಿ ಪರಸ್ಪರ ವಿರೋಧಗಳನ್ನು ಸಮನ್ವಯಗೊಳಿಸಿದಂತಾಗುವದು.

ಇದೇ ಬಗೆಯ ಅನೇಕ ಅಭ್ಯಾಸಗಳನ್ನು ಕೈಕೊಳ್ಳಬಹುದು. ಕೆಲವು ಶೀಲವರ್ಧನೆ ಮಾಡುವವು. ಮತ್ತು ಹೀಗಾಗಿ ಒಂದನೆಯದಾಗಿ, ಮನಸ್ಸಿಗೆ ಒಂದು ರೀತಿಯ ಶಿಕ್ಷಣ ಸಿಗುವದು; ಮತ್ತು ಎರಡನೆಯ ದಾಗಿ, ನಮ್ಮ ಭಾವನೆಗಳೂ ಅವುಗಳ ಪರಿಣಾಮಗಳೂ ಹತೋಟಿಯಲ್ಲಿ ಬರುವವು. ಉದಾಹರಣೆ ಗಾಗಿ ಈ ಮಾತು: ಯಾವೊಂದು ಸಂಗತಿಯನ್ನು ಅಥವಾ ವ್ಯಕ್ತಿಯನ್ನು ತೂಗಿನೋಡಿ ನಿರ್ಣಯಕೊಡಲು ನಿಮ್ಮ ಮನಸ್ಸಿಗೆ ನೀವು ಅವಕಾಶ ಕೊಡಕೂಡದು. ಏಕೆಂದರೆ ಮನಸ್ಸು ಜ್ಞಾನಸಾಧನೆಯ ಉಪಕರಣ ವಲ್ಲ. ಜ್ಞಾನ ಗಳಿಸಲು ಅದು ಅಸಮರ್ಥವಿದೆ. ಆದರೆ ಅದಕ್ಕೆ ಜ್ಞಾನದಿಂದಲೇ ಚಲನೆ ದೊರೆಯಬೇಕು. ಜ್ಞಾನದ ಸ್ಥಾನವು ಮಾನವನ ಮನೋಲೋಕಕ್ಕಿಂತ ಎತ್ತರದಲ್ಲಿದೆ. ಶುದ್ಧಕಲ್ಪನೆಗಳ ರಾಜ್ಯಕ್ಕಿಂತಲೂ ಆಚೆಗೆ ಅದರ ವಸತಿ. ಮನಸ್ಸು ಆ ಎತ್ತರದಿಂದ ಬರುವ ಜ್ಞಾನವನ್ನು ಗ್ರಹಿಸಿ ಪ್ರಕಟಿಸಲು ಶಕ್ತವಾಗ ಬೇಕಾದರೆ ಮೊದಲು ಅದು ಮೌನವಾಗಿಯೂ ಜಾಗರೂಕವಾಗಿಯೂ ಇರುವಂತೆ ನೋಡಿಕೊಳ್ಳಬೇಕು.

ಏಕೆಂದರೆ ಮನಸ್ಸು ರಚನೆ, ಸಂಘಟನೆ ಹಾಗು ಕ್ರಿಯೆಗಳಿಗೆ ಉಪಕರಣವಾಗಿರುವದು. ಅದು ಈ ಕಾರ್ಯ ಗಳ ಮೂಲಕ ತನ್ನ ಪೂರ್ಣ ಮಹತ್ವವನ್ನೂ ನಿಜವಾದ ಉಪಯುಕ್ತತೆಯನ್ನೂ ಕಾಣುವದು.

ಚೇತನದ (Consciousness) ಪ್ರಗತಿಗೆ ಇನ್ನೊಂದು ರೀತಿಯೂ ಒಳ್ಳೇ ಸಹಾಯಕಾರಿ ಯಾಗಬಹುದು. ಯಾವೊಂದು ಸಂದರ್ಭದಲ್ಲಿ ಕೈಕೊಳ್ಳಬೇಕಾದ ಒಂದು ನಿರ್ಣಯವನ್ನು ಕುರಿತಾಗಲಿ, ನೆರವೇರಿಸಬೇಕಾದ ಒಂದು ಕಾರ್ಯವನ್ನು ಕುರಿತಾಗಲಿ ಭಿನ್ನಾಭಿಪ್ರಾಯವಾದಾಗ ಯಾರೂ ತಮ್ಮದೇ ದೃಷ್ಟಿಕೋನಕ್ಕಾಗಲಿ ಅಭಿಪ್ರಾಯಕ್ಕಾಗಲಿ ದೃಢವಾಗಿ ಅಂಟಿಕೊಳ್ಳಕೂಡದು. ತದ್ವಿರುದ್ಧವಾಗಿ ಇತರರ ದೃಷ್ಟಿಕೋನವನ್ನು ತಿಳಿಯಲು ಹವಣಿಸಬೇಕು; ಅವರ ನಿಲುವಿನಿಂದಲೂ ಸಮಸ್ಯೆಯನ್ನು ಅಳೆಯ ಬೇಕು. ಮತ್ತು ಜಗಳ ತಿಕ್ಕಾಟಗಳ ಹಾದಿಯನ್ನು ಬಿಟ್ಟು ಬಿಟ್ಟು ಉಭಯ ಪಕ್ಷಗಳಿಗೂ ಸಾಧಾರಣ ವಾಗಿ ಒಪ್ಪಿಗೆಯಾಗಬಹುದಾದ ರೀತಿಯಲ್ಲಿ ಸಮಸ್ಯೆಯ ಪರಿಹಾರ ಕಂಡು ಹಿಡಿಯಬೇಕು. ಸೌಹಾರ್ದ ಭಾವದ ಜನರಿಗೆ ಒಪ್ಪಿಗೆಯಾಗಬಲ್ಲಂಥ ಒಂದು ಮಾರ್ಗವು ಯಾವಾಗಲೂ ಇದ್ದೇ ಇರುತ್ತದೆ.

ಇಲ್ಲಿ ಪ್ರಾಣಶಕ್ತಿಯ ತರಬೇತಿಯ ಒಗ್ಗೆಯೂ ಉಲ್ಲೇಖಿಸಮಾಡಲೇಬೇಕು. ನಮ್ಮಲ್ಲಿ ಉಂಟಾ ಗುವ ಊರ್ಮಿಗಳು ಮತ್ತು ಇಚ್ಛೆಗಳು, ಉತ್ಸಾಹ ಮತ್ತು ಕ್ರೌರ್ಯ. ಪುಟಿಪುಟಿದೇಳುವ ಶಕ್ತಿಯ ರಭಸ, ಹಂಗುದೊರೆದ ಸ್ವೈರಾಸ್ಯವೃತ್ತಿ, ಮನೋವಿಕಾರಗಳು ಹಾಗು ಬಂಡು ಹೂಡುವ ಪ್ರವೃತ್ತಿ ಇವೆಲ್ಲವುಗಳ ನೆಲೆ ನಮ್ಮೊಳಗಿನ ಪ್ರಾಣಶಕ್ತಿಯ ಗುಹೆಯಲ್ಲಿದೆ. ಅದು ಬೇಕಾದುದನ್ನು ಹೂಡಬಲ್ಲುದು, ಕಟ್ಟಬಲ್ಲುದು, ಅಳವಡಿಸಿಕೊಳ್ಳಬಲ್ಲುದು; ಅದರಂತೆಯೇ ಅದು ಬೇಕಾದುದನ್ನು ಕೆಡಿಸಬಲ್ಲುದು. ಹಾಳುಮಾಡಬಲ್ಲುದು. ಮಾನವನಲ್ಲಿಯ ಅತ್ಯಂತ ದುರ್ದಮ್ಯ ಭಾಗವೆಂದರೆ ಪ್ರಾಣಶಕ್ತಿಯೇ ಎಂದೆನ್ನಬಹುದು. ಅದನ್ನು ಹಿಡಿತ ದಲ್ಲಿರಿಸಿ ನಿಯಮನಗೊಳಿಸುವದೆಂದರೆ ಬಹುಕಷ್ಟಸಾಧ್ಯವಾದ ಕೆಲಸವು. ಆದರೂ ಅದು ಸಹನಶೀಲತೆ ಯಿಂದಲೇ ಸಾಧ್ಯವು. ಸಂಪೂರ್ಣ ನಿಷ್ಠೆ ಇದಕ್ಕೆ ಮೂಲ ಸಾಮಗ್ರಿ; ನಿಷ್ಠೆಯಿರದಿದ್ದರೆ ಪ್ರತಿಯೊಬ್ಬನೂ ಪ್ರಾರಂಭದಿಂದಲೇ ತನ್ನನ್ನೇ ತಾನು ವಂಚಿಸಿಕೊಂಡು ಬಿಡುವನು. ಹಾಗು ಅವನು ತನ್ನ ಪ್ರಗತಿಗಾಗಿ ಮಾಡುವ ಪ್ರಯತ್ನಗಳೆಲ್ಲವೂ ನಿಷ್ಫಲವಾಗುವವು. ಆದರೆ ಒಮ್ಮೆ ಪ್ರಾಣಶಕ್ತಿಯನ್ನು ಒಲಿಸಿಕೊಂಡರೆಸಾಕು; ಯಾವ ಸಿದ್ಧಿಯೂ ಅಸಾಧ್ಯವೆನಿಸದು. ಯಾವ ಪರಿವರ್ತನೆಯೂ ಅಶಕ್ಯವಾಗದು. ನಿಜವಾದ ತೊಡಕು ಪ್ರಾಣಶಕ್ತಿಯ ಸಹಕಾರವನ್ನು ಸದಾ ಕಾಲವೂ ಪಡೆಯುವದರಲ್ಲೇ ಇದೆ. ಪ್ರಾಣಶಕ್ತಿ ಒಬ್ಬ ಒಳ್ಳೇ ಕೆಲಸಗಾರ. ಆದರೆ ಅದು ಬಹಳ ಸಾರೆ ತನ್ನ ತೃಪ್ತಿಗಾಗಿಯೇ ಹೆಚ್ಚು ಗಮನ ಪೂರೈಸುವದು. ಇಂಥ ವೇಳೆಯಲ್ಲಿ ಅದಕ್ಕೆ ಪೂರ್ಣ ಇಲ್ಲವೆ ಅಲ್ಪ ಅತೃಪ್ತಿಯಾದರೂ ಅದು ಸಹಿಸದೆ ಸಿಡಿಮಿಡಿಗೊಂಡು ಪೂರ್ಣವಾಗಿ ಕಾರ್ಯದಿಂದ ವಿಮುಖವಾಗುವದು. ಅದರ ಪರಿಣಾಮವಾಗಿ, ಉತ್ಸಾಹಶಕ್ತಿಯು ಅಂಶತಃ ಅಥವಾ ಪೂರ್ಣತಃ ಅಡಗಿಹೋಗಿ, ಆ ಸ್ಥಳದಲ್ಲಿ ವಸ್ತು-ವ್ಯಕ್ತಿಗಳ ಬಗೆಗೆ ಜುಗುಪ್ಸೆ, ಉತ್ಸಾಹಭಂಗ ಇಲ್ಲವೆ ಬಂಡುಗಾರಿಕೆ, ಖಿನ್ನತೆ ಮತ್ತು ಅಸಮಾಧಾನಗಳಿಗೆ ಎಡೆಗೊಡುವದು. ಇಂಥ ಸಮಯಗಳಲ್ಲಿ ನಾವು ಶಾಂತರಾಗಿದ್ದು ಕಾರ್ಯವನ್ನು ತಡೆಹಿಡಿಯಬೇಕು; ಏಕೆಂದರೆ ಜನರು ಹುಚ್ಚು ಕೆಲಸಗಳನ್ನು ಗೈಯುವದೂ ಹಾಗು ತಿಂಗಳುಗಟ್ಟಲೆ ನಿತ್ಯ ಅಭ್ಯಾಸಬಲದಿಂದ ಪ್ರಯಾಸಪೂರ್ವಕವಾಗಿ ಗಳಿಸಿದುದನ್ನೂ ಹೊಂದಿದ ಪ್ರಗತಿಯನ್ನೂ ಹಲವೇ ನಿಮಿಷಗಳಲ್ಲಿ ದುಂದುಮಾಡಿ ಪುಡಿಗೂಡಿಸುವದೂ ಇಂಥ ದಿವಸಗಳಿಗೆ ಯಲ್ಲಿಯೇ. ಯಾರು ತಮ್ಮಲ್ಲಿರುವ ಚೈತ್ಯಪುರುಷನೊಂದಿಗೆ ನಿಕಟ ಸಂಪರ್ಕವನ್ನು ಸಾಧಿಸಿರುವರೋ ಅವರಿಗೆ ಇಂಥ ಸಂಕಟಮಯ ಸಂಧಿಕಾಲಗಳು ಬಹಳ ಹೊತ್ತು ಬಾಧಿಸುವುದೂ ಇಲ್ಲ; ಹೆಚ್ಚಿನ ಆಪ ತ್ತನ್ನು ತರುವುದೂ ಇಲ್ಲ. ಏಕೆಂದರೆ ಆ ಅಂತರ್ಮಾನಸ ಶಕ್ತಿ ಅವರಲ್ಲಿ ಅಭೀಪ್ಸೆಯ ಜ್ಯೋತಿಯನ್ನು

ನಂದದಂತೆ ಪ್ರಜ್ವಲವಾಗಿರಿಸುತ್ತ, ಅಳವಡಿಸಿಕೊಳ್ಳಬೇಕಾದ ಆದರ್ಶದ ಅರಿವನ್ನು ಸದಾ ಕಾಲ ಜಾಗೃತವಾಗಿರಿಸುವದು. ಅವರು, ಆ ಅರಿವಿನ ಸಹಾಯದಿಂದ ತಮ್ಮ ಪ್ರಾಣಶಕ್ತಿಯನ್ನು, ಒಂದುಗೂಡಿದ ಮಗುವನ್ನು ನಿಯಂತ್ರಿಸುವಂತೆ ತಾಳ್ಮೆ ಹಾಗು ಸತತ ಯತ್ನಗಳಿಂದ ದಾರಿಗೆ ತಂದು, ಅದಕ್ಕೆ ಸತ್ಯವನ್ನೂ ಬೆಳಕನ್ನೂ ತೋರಿ, ತಿಳಿಹೇಳಿ—ಕ್ಷಣ ಮಾತ್ರ ಮರೆಯಾದ ಸೌಹಾರ್ದಭಾವವನ್ನು ಅದರಲ್ಲಿ ಪುನಃ ಬೆಳೆಸಬಲ್ಲರು. ಇಂಥ ಸಹನಶೀಲ ಮಧ್ಯಸ್ಥಿಕೆಯ ಫಲವಾಗಿ, ಬಂದ ಬಿಕ್ಕಟ್ಟನ್ನು ಹೊಸ ಪ್ರಗತಿಯನ್ನಾಗಿ ಮಾರ್ಪಡಿಸಿ ಗುರಿಯತ್ತ ಮತ್ತೊಂದು ಹೆಜ್ಜೆಯನ್ನಿಟ್ಟು ಮುನ್ನಡೆಯಬಹುದು. ಪ್ರಗತಿಯು ಮಂದವಾಗಿರಬಹುದು; ಮೇಲಿಂದ ಮೇಲೆ ಪತನಗಳು ಒದಗಬಹುದು; ಆದರೆ ಧೈರ್ಯಯುಕ್ತ ದೃಢ ನಿರ್ಧಾರವಿದ್ದರೆ ಒಂದಿಲ್ಲೊಂದು ದಿನ ನಾವು ಜಯಶೀಲರಾಗುವದು ನಿಶ್ಚಿತ. ಅಡೆತಡೆಗಳೆಲ್ಲವೂ ಸತ್ಯಚೇತನದ ಪ್ರಫುಲ್ಲ ಪ್ರಕಾಶದೆದುರು ಕರಗಿ ಮಾಯವಾಗಿಬಿಡುವದು ಖಂಡಿತ.

ಕೊನೆಯದಾಗಿ, ವಿವೇಕಯುಕ್ತವಾದ ಸುಸ್ಪಷ್ಟವಾದ ಶಾರೀರಿಕ ಶಿಕ್ಷಣಕ್ರಮದ ಮೂಲಕ ನಮ್ಮ ದೇಹವನ್ನು ಬಲಪಡಿಸಿಕೊಂಡು ಪ್ರತಿಕ್ರಿಯಾಶೀಲತೆಯನ್ನೂ ಅದರಲ್ಲಿ ತುಂಬಬೇಕು. ಅಂದರೆ ಸತ್ಯಶಕ್ತಿಯು ಭೌತಿಕ ಜಗತ್ತಿನಲ್ಲಿ ನಮ್ಮ ಮುಖಾಂತರ ಪ್ರಕಟವಾಗಲಿಚ್ಛಿಸಿದಾಗ ಈ ದೇಹವೊಂದು ಅದಕ್ಕೆ ತಕ್ಕ ಉಪಕರಣವಾಗುವದು.

ವಸ್ತುತಃ ದೇಹವು ಆಳಬಾರದು; ಆಳಾಗಿ ಆಜ್ಞೆ ಪಾಲಿಸಬೇಕು. ಸ್ವಭಾವತ: ಅದು ಸಾಧು, ನಂಬಿಗಸ್ತ ಸೇವಕನಾಗಿದೆ. ಆದರೆ ದುರ್ದೈವದಿಂದ ಅದಕ್ಕೆ ಎಷ್ಟೋಸಾರೆ ತನ್ನ ಒಡೆಯರಾದ ಮನಸ್ಸು-ಪ್ರಾಣಗಳನ್ನು ತೂಗಿನೋಡಿ ಸರಿಯಾಗಿ ತಿಳಿದುಕೊಳ್ಳುವದಕ್ಕೆ ಆಗುವದಿಲ್ಲ. ಆದುದರಿಂದ ಅದು ಅವುಗಳ ಆದೇಶಗಳನ್ನು ಕುರುಡನಂತೆ ಪಾಲಿಸಿ ತಾನು ಮಾತ್ರ ಸಂಕಟಕ್ಕೊಳಗಾಗಿ ತನ್ನ ಹಿತಕ್ಕೆ ತಾನೇ ಎರವಾಗುತ್ತದೆ. ಮನಸ್ಸು ತನ್ನ ಮೂಢನಂಬಿಕೆ ಮತ್ತು ಏಕಪಕ್ಷೀಯ ಸ್ವೈರ ತತ್ತ್ವಗಳಿಂದಲೂ,—ಪ್ರಾಣವು ತನ್ನ ಭಾವೋದ್ರೇಕ, ಮಿತಿಯ ಉಲ್ಲಂಘನೆ ಹಾಗು ಶಕ್ತಿಯ ಅಪವ್ಯಯಗಳಿಂದಲೂ—ದೇಹದ ಸ್ವಭಾವದ ಸಮತೋಲವನ್ನು ಅಲ್ಪಸಮಯದಲ್ಲಿ ತಪ್ಪಿಸಿಬಿಡುವವು. ಇದಲ್ಲದ ಬೇನೆ-ಬೇಸರಿಕೆ-ಬಳಲಿಕೆಗಳನ್ನು ದೇಹದಲ್ಲಿ ಉಂಟುಮಾಡುವವು. ಅದನ್ನು ಈ ದಬ್ಬಾಳಿಕೆಯಿಂದ ಮುಕ್ತಗೊಳಿಸಬೇಕು. ಇರವಿನ ಚೈತ್ಯಕೇಂದ್ರದೊಡನೆ ಸದಾ ಸಂಪರ್ಕಸಹಿತವಾದ ಐಕ್ಯವನ್ನು ಸಾಧಿಸುವದರಿಂದಲೇ ಈ ಬಿಡುಗಡೆಯು ಸಾಧಿಸುವದು. ಬಂದ ಪರಿಸ್ಥಿತಿಗೆ ಹೊಂದಿಕೊಂಡು ಹೋಗುವ ಮತ್ತು ಬಂದದ್ದನ್ನೆಲ್ಲ ಸಹಿಸಿಕೊಂಡು ಹೋಗುವ ಅದ್ಭುತ ಶಕ್ತಿಯು ದೇಹಕ್ಕುಂಟು. ನಾವು ಸಾಮಾನ್ಯವಾಗಿ ಅಪೇಕ್ಷಿಸುವದಕ್ಕಿಂತಲೂ ಅಧಿಕವಾಗಿ ಅಗಣಿತ ಕಾರ್ಯಗಳನ್ನು ಅದು ಮಾಡಬಲ್ಲುದು. ಅಜ್ಞಾನಿಗಳೂ ಸರ್ವಾಧಿಕಾರಿಪ್ರವೃತ್ತಿಯುಳ್ಳವರೂ ಆದ ಒಡೆಯರು ಅದನ್ನು ಆಳದೆ ಇರವಿನ ಕೇಂದ್ರ ಸತ್ಯವು ಅದನ್ನು ಆಳತೊಡಗಿದರೆ ಅದು ಮಾಡಬಹುದಾದ ಕೆಲಸವು ಎರಡನ್ನೂ ಆಚ್ಚರಿಗೊಳಿಸೀತು. ಶಾಂತವೂ ಗಂಭೀರವೂ ಬಲಿಷ್ಠವೂ ಸಮತೋಲವುಳ್ಳದ್ದೂ ಆದ ದೇಹವು ಪ್ರತಿ ಕ್ಷಣಕ್ಕೂ ಆದರಿಂದ ಅಪೇಕ್ಷಿಸಲ್ಪಟ್ಟ ಯಾವದೇ ಕಾರ್ಯವನ್ನು ಖಂಡಿತವಾಗಿ ಮಾಡುವದು. ಏಕೆಂದರೆ ಕಾರ್ಯದಲ್ಲಿಯೇ ವಿಶ್ರಾಂತಿಯ ಸೌಖ್ಯವನ್ನನುಭವಿಸುವ ಕಲೆಯು ಇಷ್ಟರಲ್ಲಿ ದೇಹಕ್ಕೆ ಅವಗತವಾಗುವದಲ್ಲದೆ, ತಾನು ಬುದ್ಧಿಪೂರ್ವಕವಾಗಿಯೂ ಉಪಯುಕ್ತವಾಗಿಯೂ ವೆಚ್ಚಮಾಡುವ ಉತ್ಸಾಹ-ಬಲಗಳನ್ನು ಪುನಃ ತೇಯಿರಿಸಿಕೊಳ್ಳಲು ವಿಶ್ವಶಕ್ತಿಗಳೊಡನೆ 'ಸಂಪರ್ಕ ಬೆಳೆಸುವದರಿಂದ ಅದು ಸಮರ್ಥವಾಗುವದು; ಈ ಬಗೆಯ ಸಂಪನ್ನ ಮತ್ತು ಸಮತೋಲದ ಜೀವನದಲ್ಲಿ ಹೊಸ ಬಗೆಯ ಸಾಮರಸ್ಯವೊಂದು ದೇಹದಲ್ಲಿ ಪ್ರಕಟಗೊಳ್ಳುವದು. ಊರ್ಧ್ವಲೋಕಗಳಲ್ಲಿಯ ಸಾಮರಸ್ಯದ ಪ್ರತಿಬಿಂಬವಾಗಿರುತ್ತದೆ. ಆದರಿಂದಲೇ ದೇಹಕ್ಕೆ ಪರಿಪೂರ್ಣ

ಪ್ರಮಾಣಬದ್ಧತೆಯೂ ಆದರ್ಶ ಸೌಂದರ್ಯ ಸ್ವರೂಪವೂ ಉಂಟಾಗುವವು. ಮತ್ತು ಆ ಸಾಮರಸ್ಯವು ಕ್ರಮೇಣ ವೃದ್ಧಿಯನ್ನು ಹೊಂದುವದು. ಏಕೆಂದರೆ ಬಾಳಿನ ಸತ್ಯವು ಎಂದೂ ಸ್ಥಿತಿಶೀಲವಾಗಿರದೆ ವಿಕಸನಶೀಲವೂ ಹೆಚ್ಚು ಹೆಚ್ಚು ವಿಶ್ವವ್ಯಾಪಿಯೂ ಸಮನ್ವಯಶೀಲವೂ ಆದ ಪೂರ್ಣತೆಯ ನಿತ್ಯ ಆವಿರ್ಭಾವವಾಗಿದೆ. ದೇಹಕ್ಕೆ ವೃದ್ಧಿಂಗತ ಸಾಮರಸ್ಯವನ್ನು ಪಡೆಯುವ ಕಲೆಯು ಒಮ್ಮೆ ಸಾಧಿಸಿತೆಂದರೆ ಸತತವಾದ ಪರಿವರ್ತನೆಯ ಕ್ರಮದಿಂದಾಗಿ ಆದರ ವಿಘಟನೆ-ವಿನಾಶಗಳು ಅನವಶ್ಯಕವಾಗುವವು. ಇಂತು ಅನುಲ್ಲಂಘನೀಯವೆಂದೆನಿಸುವ ಮೃತ್ಯುವಿನ ನಿಯಮಕ್ಕೆ ಆಸ್ಪದವೇ ಉಳಿಯದು.

ನಾವು ನಮ್ಮ ಗುರಿಯೇ ಆಗಿರುವ ಪೂರ್ಣತೆಯ ಉಚ್ಚ ಮಟ್ಟಕ್ಕೆ ಏರಿದಂತೆ, ಶೋಧಿಸ ಹೊರಟ ಮಹೋನ್ನತ ಸತ್ಯದ ನಾಲ್ಕು ಮುಖಗಳು ಪ್ರೀತಿ, ಜ್ಞಾನ, ಬಲ ಮತ್ತು ಸೌಂದರ್ಯಗಳಾಗಿವೆಯೆಂಬುದು ನಮಗೆ ವಿದಿತವಾಗುವದು. ಸತ್ಯದ ಈ ನಾಲ್ಕೂ ಗುಣಗಳ ಸಹಜ ಆವಿಷ್ಕಾರವು ನಮ್ಮ ಇರವಿನಲ್ಲಿ ನಡೆಯುವದು. ಆಗ ಚೈತ್ಯ ಕೇಂದ್ರವು ನೈಜ, ಶುದ್ಧ ಪ್ರೀತಿಯ ವಾಹಕವಾಗುವದು. ಮನಸ್ಸು ಖಂಡಿತವಾದ ಜ್ಞಾನದ ವಾಹಕವಾಗುವದು; ಪ್ರಾಣವು ಅಜಿಂಕ್ಯ ಶಕ್ತಿ ಸಾಮರ್ಥ್ಯಗಳನ್ನು ಪ್ರಕಟಿಸುವದು; ಹಾಗು ದೇಹವು ಪೂರ್ಣಸೌಂದರ್ಯ–ಪೂರ್ಣಸಾಮರಸ್ಯಗಳನ್ನು ಅಭಿವ್ಯಕ್ತಿಸುವದು.

—ಶ್ರೀ ತಾಯಿಯವರು

—ವಸಂತ ಕುಲಕರ್ಣಿ

(ಅನುವಾದಕರು)

"ದೈವೀಶಕ್ತಿಯ ಮೇಲಿನ ಶ್ರದ್ಧೆಯು ಯಾವಾಗಲೂ ನಮ್ಮ ಬಲದ ಬೆನ್ನಿಗೆ ಇರತಕ್ಕದ್ದು. ಅವಳಿಗೆ ಅಶಕ್ಯವೆಂಬುದೇ ಇಲ್ಲ. ಅವಳು ಪ್ರಜ್ಞಾಯುಕ್ತ ಶಕ್ತಿಯೂ ವಿಶ್ವವ್ಯಾಪಿಯಾದ ದೇವಿಯೂ ಶಾಶ್ವತದೊಳಗಿಂದ ಸರ್ವವನ್ನು ಸೃಜಿಸುವವಳೂ ಆಗಿದ್ದಾಳೆ. ಅವಳು (ಪರಮ +) ಆತ್ಮನ ಸರ್ವ ಸಮರ್ಥತೆಯ ಕವಚವನ್ನು ಧರಿಸುವಳು. ಸಕಲಜ್ಞಾನ, ಸಕಲ ಸಾಮರ್ಥ್ಯ, ಸಕಲ ವಿಜಯ, ಸರ್ವಕೌಶಲ ಹಾಗೂ ಕರ್ಮಗಳು ಅವಳ ಕೈಯಲ್ಲಿರುವವು. ಮತ್ತು (ಪರಮ +) ಆತ್ಮನ ಬೊಕ್ಕಸಗಳಿಂದಲೂ, ಸಕಲ ಪರಿಪೂರ್ಣತೆಗಳಿಂದಲೂ, ಸಿದ್ಧಿಗಳಿಂದಲೂ ಅವಳ ಹಸ್ತಗಳು ತುಂಬಿ ತುಳುಕುವವು...... ...ಅವಳು ಪರಮ ಜ್ಞಾನದ ದೇವಿಯಾದ ಮಹೇಶ್ವರಿಯಾಗಿರುವಳು... .. ...... . ಪರಮ ಸಾಮರ್ಥ್ಯದ ದೇವಿಯಾದ ಮಹಾಕಾಲಿಯಾಗಿರುವಳು. ..... ಪರಮಪ್ರೇಮ ಹಾಗೂ ಆನಂದದ ದೇವಿಯಾದ ಮಹಾಲಕ್ಷ್ಮಿಯಾಗಿರುವಳು.. .... ಹಾಗೂ ದೈವೀಕೌಶಲ್ಯ ಮತ್ತು (ಪರಮ +) ಆತ್ಮನ ಕಾರ್ಯಗಳ ದೇವಿಯಾದ ಮಹಾ ಸರಸ್ವತಿಯಾಗಿರುವಳು ......... .. ಅವಳ ಬೆನ್ನ ಹಿಂದೆ ಈಶ್ವರನಿದ್ದಾನೆ. ಹಾಗೂ ಆತನ ಮೇಲಿನ ಶ್ರದ್ಧೆಯೆಂಬುದು ಪೂರ್ಣಯೋಗದ ಶ್ರದ್ಧೆಯಲ್ಲಿ ಅತಿ ಆಯಕಟ್ಟಿನ ಸ್ಥಳವಾಗಿದೆ."

—ಶ್ರೀ ಅರವಿಂದರು.

# ಶ್ರೀ ಅರವಿಂದರ ಪತ್ರಗಳು

## ೧. ಪರಿವರ್ತನದ ಯೋಗ

(The Yoga of Transformation Pages 23-28; Letters-First Series)

ಪರಿವರ್ತನವೆಂದರೆ ಸ್ವಭಾವದ ಕೆಲವು ಸ್ಥಿತ್ಯಂತರವೆಂದು ನನ್ನ ಅರ್ಥವಲ್ಲ. ಉದಾಹರಣೆಗೆ ಸಾಧುತ್ವವನ್ನಾಗಲಿ, ನೈತಿಕ ಪೂರ್ಣತೆಯನ್ನಾಗಲಿ, ಯೋಗಸಿದ್ಧಿ(ತಾಂತ್ರಿಕ)ಯನ್ನಾಗಲಿ ಇಲ್ಲವೆ ಚಿನ್ಮಯ ದೇಹವನ್ನಾಗಲಿ ಪಡೆಯುವದು ಪರಿವರ್ತನವಲ್ಲ. 'ಪರಿವರ್ತನ' ಎಂಬುದನ್ನು ನಾನು ಒಂದು ವಿಶಿಷ್ಟ ಅರ್ಥದಲ್ಲಿ ಬಳಸುತ್ತೇನೆ. ಅದೆಂದರೆ ಚೇತನದ ಸಾದ್ಯಂತ ಸಂಪೂರ್ಣ ಬದಲಾವಣೆ. ಯಾವದರಿಂದ ಹಿಂದೆ ಅನ್ನಮಯ ಪ್ರಾಣಮಯ ಜೀವ ಜಗತ್ತಿನಲ್ಲಿ ಮನಸ್ಸಿನ ಉದಯವಾದಾಗ ಆದ ಪ್ರಗತಿಗಿಂತ ಹೆಚ್ಚು ನಿಶ್ಚಿತ ಹಾಗೂ ಬಲವತ್ತರವಾದ ಹೆಜ್ಜೆಯಿಂದ ವಿಕಾಸಕ್ರಮದಲ್ಲಿ ವಿಶಾಲತರವೂ ಪೂರ್ಣವೂ ಆದ ಆಧ್ಯಾತ್ಮಿಕ ಮುನ್ನಡೆಯು ಸಾಧಿಸಲ್ಪಡುವುದೋ ಅಂಥ ವಿಶಿಷ್ಟ ಸ್ವರೂಪದ ಬದಲಾವಣೆ. ಇದರಲ್ಲಿ ತುಸು ಕಡಿಮೆಯಾದರೆ, ಅಥವಾ ಈ ತಳಹದಿಯ ಮೇಲೆ ನಿಜವಾದ ಪ್ರಾರಂಭವಾಗದಿದ್ದರೆ, ಈ ಗುರಿಯುತ್ತ ಮೂಲಭೂತ ಪ್ರಗತಿಯಾಗದಿದ್ದರೆ, ನನ್ನ ಉದ್ದೇಶವು ಈಡೇರಿದಂತಾಗದು. ಅಂಶಮಾತ್ರ ಮಿಶ್ರ ಹಾಗೂ ಅನಿಶ್ಚಿತ ಸಿದ್ಧಿಯಾದರೆ ಜೀವನ ಮತ್ತು ಯೋಗದಿಂದ ನಾನು ಅಪೇಕ್ಷಿಸಿದುದು ದೊರಕಿದಂತಾಗಲಿಲ್ಲ.

ಸಿದ್ಧಿಯ ಬೆಳಕು, ದೈವಿಕತೆಯ ಅವತರಣಗಳೆರಡೂ ವಿಭಿನ್ನವಾಗಿವೆ. ಸಿದ್ಧಿಯಿಂದ ಜೀವಿಯಲ್ಲಿ ಸಮಗ್ರ ಪರಿವರ್ತನೆಯು ಆಗಿಯೇ ತೀರುವುದೆಂದು ಹೇಳಲಿಕ್ಕಾಗುವದಿಲ್ಲ. ಅದರಿಂದ ಮಾನವನಲ್ಲಿಯ ಪ್ರಕೃತಿಯಲ್ಲಿ ಯಾವ ಮಹತ್ವದ ಬದಲಾವಣೆಯೂ ಇಲ್ಲದೆ ಮಾನವನಲ್ಲಿರುವ ಪುರುಷಾಂಶದಲ್ಲಿ ಮಾತ್ರ ಏನಾದರೊಂದು ಸಿದ್ಧಿಸುವಷ್ಟರ ಮಟ್ಟಿಗೆ ಅರಿವು ತೆರೆಯಬಹುದು, ಉನ್ನತ ಅಂತಸ್ತಿಗೆ ಏರಬಹುದು ಅಥವಾ ಮೇಲ್ಗಡೆಗೆ ವಿಸ್ತಾರಗೊಳ್ಳಬಹುದು. ಅರಿವಿನ ಅಧ್ಯಾತ್ಮ ಶಿಖರದಲ್ಲಿ ಸಿದ್ಧಿಯ ಬೆಳಕು ಬೆಳಗಿದಾಗಲೂ ನಿಮ್ನ ಭಾಗಗಳಲ್ಲಿ ಕತ್ತಲೆ ಆವರಿಸಿ ಅವು ಇದ್ದಂತೆಯೇ ಉಳಿದು ಬಿಡಬಹುದು. ಈ ಬಗೆಯ ಎಷ್ಟೋ ಉದಾಹರಣೆಗಳನ್ನು ನಾನು ಬಲ್ಲೆ. ನಿಜವಾದ ಪರಿವರ್ತನೆಯಾಗುವ ಪೂರ್ವದಲ್ಲಿ ಆ ಬೆಳಕು ಮನಸಿನಲ್ಲಷ್ಟೇ, ಅಥವಾ ಅದರ ಕೆಲವೊಂದು ಭಾಗದಲ್ಲಿ ಇಳಿದರೆ ಸಾಲದು. ಅದು ನಿಮ್ನ ಪ್ರಕೃತಿಯಲ್ಲಿಯೂ ಕೆಳಗೂ ಜೀವಿಯ ತುಂಬೆಲ್ಲ ಸೂಸಿ ಹರಿದಾಡಬೇಕು. ಮನಸ್ಸನ್ನಾವರಿಸಿದ ಬೆಳಕು ಅದರಲ್ಲಿ ಆತ್ಮದರಿವನ್ನು ತರಬಹುದು ಅಥವಾ ಮನಸ್ಸನ್ನಾಗಲಿ ಅದರ ಭಾಗವನ್ನಾಗಲಿ ಬೇರೆ ಯಾವ ರೀತಿಯಲ್ಲಾದರೂ ಮಾರ್ಪಡಿಸಬಹುದು. ಆದರೆ ಅದು ಪ್ರಾಣದಲ್ಲಿ ಯಾವ ಬದಲಾವಣೆಯನ್ನೂ ಮಾಡದೆ ಹೋಗಬಹುದು. ಪ್ರಾಣದಲ್ಲಿ ಮೂಡಿದ ಬೆಳಕು ಪ್ರಾಣದ ಚಲನವಲನಗಳನ್ನು ಶುದ್ಧೀಕರಿಸಿ ವಿಶಾಲಗೊಳಿಸಬಹುದು.

ಅಥವಾ ಪ್ರಾಣ-ಪುರುಷನನ್ನು ಮೂಕ ಹಾಗೂ ಅಸಂಘಟಿತಗೊಳಿಸಿಯೂ ದೇಹವನ್ನೂ ದೈಹಿಕ ಪ್ರಜ್ಞೆಯನ್ನು ಸೋಂಕದಿರಬಹುದು; ಅಥವಾ ಅದನ್ನು ನಿಶ್ಚೇತನಗೊಳಿಸಿ ಅದರ ತೂಕ ತಪ್ಪಿಸಬಹುದು. ಮತ್ತು ಕೇವಲ ಬೆಳಕು ಅವತರಿಸಿದರೆ ಸಾಲದು; ತನ್ನ ಶಾಂತಿ, ಶಕ್ತಿ, ಜ್ಞಾನ, ಪ್ರೇಮ, ಆನಂದಗಳಿಂದೊಡಗೂಡಿದ ಸಮಗ್ರ ಉನ್ನತತರ ಪ್ರಜ್ಞೆಯೇ ಅವತರಿಸಬೇಕು.

ಅದಲ್ಲದೆ, ಈ ಅವತಾರವು (ಇಳಿಯುವಿಕೆಯು) ಮುಕ್ತಗೊಳಿಸಲು ಸಾಕಷ್ಟಿದ್ದರೂ ಪರಿಪೂರ್ಣತೆಯನ್ನುಂಟುಮಾಡುವುದಕ್ಕೆ ಅದಕ್ಕೆ ಶಕ್ತಿ ಸಾಲದೆಹೋಗಬಹುದು; ಅಥವಾ ಅದ ಆಂತರಿಕ ಜೀವಿಯಲ್ಲಿ ಮಹತ್ತರವಾದ ಪರಿವರ್ತನಮಾಡಬಲ್ಲುದಾದರೂ ಬಾಹ್ಯ ಜೀವಿಯು ಅಪೂರ್ಣ, ಒರಟು, ಅನಾರೋಗ್ಯ ಸ್ಥಿತಿಯಲ್ಲಿದ್ದ ಹಾಗೂ ಭಾವಪ್ರದರ್ಶಕವಲ್ಲದ ಉಪಕರಣವಾಗಿ ಉಳಿಯಬಹುದು. ಕೊನೆಯದಾಗಿ, ಸಾಧನೆಯಿಂದುಂಟಾದ ಪರಿವರ್ತನೆಯು ಜೀವಿಯನ್ನು ಅತಿಮಾನಸಶಕ್ತಿ ಸಂಪನ್ನನಾಗಿ ಮಾರ್ಪಡಿಸದಿದ್ದರೆ ಆ ಪರಿವರ್ತನೆಯು ಅಪೂರ್ಣವೆಂದೇ ಹೇಳಬೇಕು. ಚೈತ್ಯವನ್ನು ಜಾಗ್ರತಗೊಳಿಸುವದು ಪರಿವರ್ತನದ ಆರಂಭಮಾತ್ರ; ಆಧ್ಯಾತ್ಮಿಕ ಅರಿವೂ ಮಹಾಜಾಗ್ರತಿಯ ಹುಟ್ಟೂ ಅದರ ಮಧ್ಯದೆಸೆಯಾಗಿವೆ; ಅದರ ಅಂತಿಮ ಕಾರ್ಯ ನಿಷ್ಪತ್ತಿಗೆ ಅತಿಮಾನಸದಲ್ಲಿಯ ಅರಿವು ಶಕ್ತಿಗಳ ಕ್ರಿಯೆ ಆವಶ್ಯಕವಾಗಿದೆ. ಇದಕ್ಕಿಂತಲೂ ಅಪೂರ್ಣ ಬದಲಾವಣೆಯಾದರೂ ವ್ಯಕ್ತಿಗೆ ಸಾಕೆಂದೆನಿಸಬಹುದು; ಆದರೆ ಭೌತಿಕ ಚೇತನವು ಒಮ್ಮೆಲ್ಲೊಮ್ಮೆ ಕೈಕೊಳ್ಳಬೇಕಾದ ನಿಶ್ಚಿತ ಮುನ್ನಡೆಗೆ ಇಲ್ಲಿ ವಿವರಿಸಿದ್ದರಲ್ಲಿ ಯತ್ಕಿಂಚಿತ್ ನ್ಯೂನತೆ ಉಳಿದರೂ ನಡೆಯದು.

ನನ್ನ ಯೋಗ ಮಾರ್ಗವು ಅದರ ವಿವಿಧಾಂಗಗಳಲ್ಲೆಲ್ಲ ತೀರ ಹೊಚ್ಚಹೊಸದೆಂದು ನಾನೆಂದೂ ಅಂದುದಿಲ್ಲ. ನಾನು ಅದನ್ನು ಪೂರ್ಣಯೋಗವೆಂದು ಕರೆದಿದ್ದೇನೆ; ಅಂದರೆ, ಅದು ಹಳೆಯ ಯೋಗಮಾರ್ಗಗಳ ಸಾರಸರ್ವಸ್ವವನ್ನೂ ಅನೇಕ ಕ್ರಮಗಳನ್ನೂ ಒಳಗೊಂಡಿರುತ್ತದೆ; ಅದರ ಹೊಸತನವು ಅದರ ಗುರಿ, ನಿಲುಮೆ ಹಾಗೂ ಸಾಧನಕ್ರಮದ ಸಮಗ್ರತೆಯಲ್ಲಿದೆ. ನಾನು "ಸಮಸ್ಯೆ" (Riddle) ಅಥವಾ "ಪ್ರಕಾಶ" (Lights) ಮೊದಲಾದ ಪುಸ್ತಕಗಳಲ್ಲಿ ಇಲ್ಲವೆ ಪ್ರಕಟವಾಗಲಿರುವ ಹೊಸ ಪುಸ್ತಕದಲ್ಲಿ* ಯೋಗದ ಪ್ರಾರಂಭಾವಸ್ಥೆಯನ್ನು ಕುರಿತು ಮಾಡಿದ ವಿವೇಚನೆಯಲ್ಲಿ ಪುರಾತನ ಯೋಗ ಸಂಪ್ರದಾಯದಕಿಂತ ಭಿನ್ನವಾದದು ಏನಾದರೂ ಇದ್ದರೆ ಅದು ಅದರ ಗುರಿಯ ಸಮಗ್ರತೆಯಲ್ಲಿ, ಅದರ ಚಟುವಟಿಕೆಗಳಿಂದಿರುವ ಭಾವನೆಯಲ್ಲಿ; ಅದು ತನ್ನ ಎದುರಿಗಿರಿಸಿರುವ ಅಂತಿಮ ಅರ್ಥದಲ್ಲಿ;—ಮತ್ತು ಅದರ ಮನಶ್ಶಾಸ್ತ್ರ ಹಾಗೂ ಕ್ರಿಯೆಗಳ ಯೋಜನೆಯೂ ಬೇರೆಯಾಗಿದೆ. ಆದರೆ ಅದೆಲ್ಲವನ್ನೂ ಸರಿಯಾದ ಕ್ರಮದಲ್ಲಾಗಲಿ ಯೋಜನೆಯ ಸಂಪೂರ್ಣ ರೂಪರೇಷೆಯ ಮಾದರಿಯಲ್ಲಾಗಲಿ ಈ ಪತ್ರಗಳಲ್ಲಿ ವಿವರಿಸಿರಲಿಲ್ಲವಾದುದರಿಂದ ಮೊದಲೇ ಅಭ್ಯಾಸ ಮೂಲಕ ಇಲ್ಲವೆ ಮನಸಾ ಅದರ ಪರಿಚಯವಿಲ್ಲದವರಿಗೆ ಈ ಯೋಗಮಾರ್ಗವನ್ನು ಗ್ರಹಿಸುವದು ಕಠಿಣವಾಗಿದೆ. ಇದರ ಮುಂದಿನ (ಕೊನೆಕೊನೆಯ) ಅವಸ್ಥೆಗಳ ವಿವರ ಅಥವಾ ಕ್ರಮಗಳು ಇದುವರೆಗೆ ಅಜ್ಞಾತ, ಅಗೋಚರವಿದ್ದ ಪ್ರಾಂತಗಳನ್ನು ಕ್ರಮಿಸುವದರಿಂದ ನಾನು ಅವುಗಳನ್ನು ಪ್ರಕಟಪಡಿಸಿಲ್ಲ ಮತ್ತು ಸದ್ಯಕ್ಕೆ ಹಾಗೆ ಅವನ್ನು ಪ್ರಕಟಿಸುವ ವಿಚಾರವೂ ಇಲ್ಲ.

ನನ್ನ ಯೋಗದ ಪೂರ್ವಸೂಚನೆ ಮಾಡುವಂಥ ಹಾಗೂ ಆದರ್ಶಗಳಲ್ಲಿ ಅದಕ್ಕೆ ಸಮೀಪ ಸಾದೃಶ್ಯವುಳ್ಳವೆಂದು ತೋರುವ ಪಂಥಗಳೂ ಕೆಲವು ಆಗಿಹೋದುದು ನನಗೆ ಗೊತ್ತಿದೆ. ಮಾನವಜನಾಂಗದ ಪರಿಪೂರ್ಣತೆ, ಕೆಲವು ತಾಂತ್ರಿಕ ಸಾಧನೆಗಳು, ಹಲಕೆಲವು ಯೋಗಮಾರ್ಗಗಳು ಗಳಿಸಲು ಯತ್ನಿಸಿದ

* Bases of Yoga

ಪೂರ್ಣ ಪ್ರಾಕೃತಿಕ ಸಿದ್ಧಿ ಇವು ಕೆಲವು ಅಂಥ ಬಗೆಯವು. ಇವೆಲ್ಲವನ್ನು ನಾನು ಉಲ್ಲೇಖಿಸಿದ್ದೇನೆ. ನನ್ನ ಅಭಿಪ್ರಾಯದಲ್ಲಿ, ಮಾನವಜನಾಂಗದ ಹಿಂದಿನ ಆಧ್ಯಾತ್ಮಿಕ ಅನುಭವವೆಲ್ಲವೂ ದೃಶ್ಯಜಗದ ಆಚೆಗಿರುವ ದೈವಿಕತೆಯನ್ನು ಪಡೆಯುವದಕ್ಕೆ ನಿಸರ್ಗ ನಡೆಸಿದ ಸಿದ್ಧತೆಯಾಗಿದೆ. ಅಷ್ಟೇ ಅಲ್ಲ; ಅದು, ಭೌತಿಕಚೇತನವು ವಿಕಾಸಕ್ರಮದಲ್ಲಿ ಇನ್ನೂ ಇಡಬೇಕಾಗಿರುವ ಮುಂದಡಿಯ ಸಿದ್ಧತೆಯೂ ಆಗಿದೆ. ಮೇಲೆ ಹೇಳಿದಂತೆ ಕೆಲಮಟ್ಟಿಗೆ ನನ್ನ ಯೋಗಕ್ಕೆ ಸಾದೃಶ್ಯವೆನಿಸಿದರೂ ಬೇರೆಯಾದ ಆದರ್ಶಗಳು ಹಿಂದೆ ಮೂಡಿಹೋಗಿದ್ದರಿಂದ ನನಗೆ ನನ್ನ ಯೋಗ, ಅದರ ಗುರಿ ಮತ್ತು ಪದ್ಧತಿಗಳು ಹೊಸವು ಎಂದು ಗುರುತಿಸಲ್ಪಡುವವೋ ಇಲ್ಲವೋ ಎಂಬದು ಗೌಣ ಪ್ರಶ್ನೆಯಾಗಿದೆ; ಅದಕ್ಕೆ ನಾನು ಅಷ್ಟೊಂದು ಗಮನಕೊಡುವದಿಲ್ಲ. ಅದರೆ ಅದನ್ನು ಸ್ವೀಕರಿಸಿ ಅಭ್ಯಸಿಸಬಲ್ಲವರು ಅದನ್ನು ಸರಿಯೆಂದು ಗಣಿಸುವದೂ ಅದನ್ನನುಸರಿಸಿ ಸಫಲತೆಪಡೆದು ಅದರ ಸತ್ಯತೆಯನ್ನು ಮನಗಾಣಿಸುವದೂ ನಿಜವಾಗಿ ಮಹತ್ವದ ಸಂಗತಿಗಳಾಗಿವೆ; ಅಷ್ಟಾದರೆ, ಅದನ್ನು ನವೀನ ಯೋಗಮಾರ್ಗವೆಂದು ಕರೆಯಲಿ, ಹಳೆಯದರ ಪುನರುಕ್ತಿ ಎನ್ನಲಿ, ಅಥವಾ ಮರೆತುಹೋದ ಪುರಾತನ ಯೋಗಮಾರ್ಗದ ಪುನರುತ್ಥಾನವೆಂದೆನ್ನಲಿ, ಎಲ್ಲವೂ ಒಂದೇ. ಕೆಲವು ಸಾಧಕರಿಗೆ ಬರೆದ ಪತ್ರದಲ್ಲಿ ನಾನು ಅದನ್ನು ಹೊಸದೆಂದು ಹೇಳಿದುದರ ಅರ್ಥವಿಷ್ಟೇ: ಹಳೆಯ ಯೋಗಗಳ ಗುರಿ ಮತ್ತು ಕಲ್ಪನೆಗಳ ಪುನರುಚ್ಚಾರಣೆ ಮಾತ್ರವೇ ಸಾಲದು; ಇದುವರೆಗೆ ನಡೆದ ಆಧ್ಯಾತ್ಮಿಕ ಸಾಧನೆಯೆಲ್ಲದರ ಸ್ವಾಭಾವಿಕ ಫಲವಾಗಿದ್ದರೂ ಇನ್ನೂ ರಹಸ್ಯವೂ ಅಸ್ಪಷ್ಟವೂ ಆಗಿ ಉಳಿದು, ಸಾಧಿಸಲ್ಪಡದಿದ್ದುದನ್ನು, ಸಾಧಿಸುವದು ಮಹತ್ವದ ಮಾತು.

ಪುರಾತನ ಯೋಗಗಳೊಡನೆ ಹೋಲಿಸಿ ನೋಡಿದರೆ ಈ ಕೆಳಗಿನ ಕಾರಣಗಳಿಗಾಗಿ ಅದನ್ನು ಹೊಸತೆನ್ನಬಹುದು:

(೧) ಅದರ ಗುರಿಯು ಜೀವನ ಮತ್ತು ಜಗತ್ತಿನಿಂದ ಬಿಡುಗಡೆಹೊಂದಿ ಸ್ವರ್ಗಕ್ಕೋ ನಿರ್ವಾಣಕ್ಕೋ ಹೋಗುವದಾಗಿರದೆ, ಜೀವನವನ್ನೂ ಬದುಕನ್ನೂ ಪರಿವರ್ತಿಸುವದಿರುತ್ತದೆ. ಆ ಪರಿವರ್ತನವು ಗೌಣ ಇಲ್ಲವೆ ಆನುಷಂಗಿಕ ಸಂಗತಿಯಾಗಿರದೆ ಪ್ರತ್ಯೇಕವೂ ಪ್ರಧಾನವೂ ಆದ ಧ್ಯೇಯವಾಗಿರುತ್ತದೆ. ಬೇರೆ ಯೋಗಗಳಲ್ಲಿ (ದೈವೀಶಕ್ತಿಯ) ಅವತರಣವು (ಇಳಿಯುವಿಕೆ) ಇದ್ದರೆ, ಅದು ಕೇವಲ ಅಪ್ರಧಾನ ಸಹಾಯಕ ಘಟನೆಯೆಂದಾಗಲಿ ಅಥವಾ ಸಾಧಕನ ಉತ್ಥಾನದ (ಏರುವಿಕೆಯ) ಪರಿಣಾಮವೆಂದಾಗಲಿ ಬರುವದುಂಟು; ಏರುವಿಕೆಯೇ ಪ್ರಮುಖವಾದದ್ದು. ಇಲ್ಲಿ ಈ ಏರುವಿಕೆ ಪ್ರಥಮ ಹೆಜ್ಜೆಯಾದರೂ ಅದು ಆ ಅವತಾರಕ್ಕೆ ಉಪಕಾರಕ ಸಾಧನವೆಂದು ಇದೆ. ಏರುವಿಕೆಯಲ್ಲಿ ಉದ್ಭವಿಸಿದ ಹೊಸ ಅರಿವಿನ ಇಳಿಯುವಿಕೆಯೇ ಈ ಸಾಧನೆಯ ಮುದ್ರಾಂಕಿತವಾಗಿದೆ. ತಂತ್ರ ಹಾಗೂ ವೈಷ್ಣವ ಪಂಥಗಳು ಜೀವನ್ಮುಕ್ತಿಯಲ್ಲಿ ಪರ್ಯವಸಾನ ಹೊಂದುತ್ತವೆ; ಇಲ್ಲಿ. ಜೀವನದ ದೈವೀ ಸಾರ್ಥಕತೆಯನ್ನು ಪಡೆಯುವದೇ ಮೂಲೋದ್ದೇಶವಾಗಿದೆ.

(೨) ಈ ಯೋಗದ ಗುರಿಯು ವೈಯಕ್ತಿಕ ದೈವೀ (ಸಫಲತೆ) ಸಿದ್ಧಿಯನ್ನು ವ್ಯಕ್ತಿಯ ಸಲುವಾಗಿ ಪಡೆಯುವದಿರದೆ ಭೌತಿಕ ಚೇತನಕ್ಕಾಗಿ, ಸಮಸ್ತ ಇಹಜಗತ್ತಿಗಾಗಿ ಇದೆ; ಕೇವಲ ಅನುಭವಾತೀತ ಅಚಿಂತ್ಯಕ್ಕಾಗಿಯಲ್ಲ. ಆ ಪಡೆಯಬೇಕಾದ ಸಂಗತಿಯೂ ಅರಿವಿನ ಒಂದು ಶಕ್ತಿ ಅತಿಮಾನಸವಾಗಿದೆ. ಅದು ಇದುವರೆಗೂ ಭೌತಿಕ-ಪ್ರಕೃತಿ (ಚೇತನ) ಯಲ್ಲಿ ಆಧ್ಯಾತ್ಮ ಜೀವನದಲ್ಲಿಯೂ ಸಹ, ಹಿಂದೆಂದೂ ಸಂಘಟಿತ ಇಲ್ಲವೆ ಕಾರ್ಯಗತ (ಕ್ರಿಯಾತ್ಮಕ) ವಾದುದು. ಅಂಥ ಅತಿಮಾನಸ ಶಕ್ತಿಯನ್ನು ಸಂಘಟಿಸಿ ನೇರವಾಗಿ ಕ್ರಿಯಾಶೀಲ ಮಾಡಬೇಕಾಗಿದೆ.

(೩) ಗುರಿಯಷ್ಟೇ ಪೂರ್ಣವೂ, ಸಮಗ್ರವೂ ಆದ ಸಾಧನಾಕ್ರಮವೊಂದು ಆ ಧ್ಯೇಯವನ್ನು ತಲುಪುವದಕ್ಕಾಗಿ ಸಾರಲ್ಪಟ್ಟಿದೆ. ಅದೆಂದರೆ, ಹಿಂದಿನ ಪದ್ಧತಿಗಳನ್ನು ಅಂಶ ಮಾತ್ರ ಮತ್ತು ತಾತ್ಪೂರ್ತಿಕ ಸಹಾಯವೆಂದು ಉಪಯೋಗಿಸಿ ಪೂರ್ಣ ಹಾಗೂ ಸಮಗ್ರವಾಗಿ ಅರಿವನ್ನೂ ಪ್ರಕೃತಿಯನ್ನೂ ಪರಿವರ್ತಿಸುವದು. ಹಳೆಯ ಯೋಗಗಳಲ್ಲಿ ಸಮಗ್ರವಾಗಿ ಈ ಪದ್ಧತಿ ಇಲ್ಲವೆ ಸಾದೃಶವಾದುದನ್ನು ಎಲ್ಲಿಯೂ ಹೇಳಿದುದನ್ನು ಅಥವಾ ಸಾಧಿಸಿದ್ದನ್ನು ನಾನು ನೋಡಿಲ್ಲ. ಹಾಗೆ ಕಂಡಿದ್ದರೆ, ದುರ್ಗಮ್ಯವಿದ್ದಲ್ಲಿ ದಾರಿಯನ್ನು ಕಡಿಯುವದಕ್ಕಾಗಿ ನನ್ನ ವೇಳೆಯನ್ನು ವ್ಯರ್ಥಹಾಳು ಮಾಡುತ್ತಿದ್ದಿಲ್ಲ; ಆಂತರಿಕ ಸೃಷ್ಟಿ ಹಾಗೂ ಶೋಧದಲ್ಲಿ ಮೂವತ್ತು ವರ್ಷಗಳನ್ನು ಕಳೆಯುತ್ತಿದ್ದಿಲ್ಲ. ತದ್ವಿರುದ್ಧ ಮೊದಲೇ ಗುರುತಿಸಿ ನಿಶ್ಚಯಿಸಲ್ಪಟ್ಟ, ಪೂರ್ಣವಾಗಿ ಚಿತ್ರಿಸಲ್ಪಟ್ಟ, ಗಟ್ಟಿಯಾದ, ಸುರಕ್ಷಿತ ಮತ್ತು ಪ್ರಕಟಿತವಾದ ಮಾರ್ಗಗಳಿಂದ, ನಿರಾಯಾಸವಾಗಿ ನಾಗಾಲೋಟದಿಂದ ಮುಂದರಿಯುತ್ತ ನಾನು ನನ್ನ ಗುರಿಯನ್ನು ಸುಖರೂಪವಾಗಿ ಬೇಗಬೇಗನೆ ಹೋಗಿ ಸೇರುತ್ತಿದ್ದೆನು. ನಮ್ಮ ಯೋಗವು ಪುರಾತನ ಮಾರ್ಗಗಳ ಪುನರಾಕ್ರಮಣವಲ್ಲ; ಅದೊಂದು ಆಧ್ಯಾತ್ಮಿಕ ಸಾಹಸವಾಗಿದೆ.

ಅನುವಾದಕರು: **ಶ್ರೀವಸಂತ ಕುಲಕರ್ಣಿ**

## ೨. ಪೂರ್ಣಯೋಗದ ಪ್ರಧಾನ ಪ್ರಕ್ರಿಯೆ

( The Central Process of the Yoga Pages 77-79. Letters, 1st Series )

ಒಂದು ವೇಳೆ ಭಗವಂತನನ್ನು ಯಾರಾದರೂ ಮನಸಾ ಬಯಸಿದರೆ, ಭಗವಂತನೇ ಸ್ವತಃ ಅಂಥವರ ಹೃದಯವನ್ನು ಶುದ್ಧೀಕರಿಸುವ ಭಾರವನ್ನು ತಾನೇ ವಹಿಸುತ್ತಾನೆ; ಅವರ ಸಾಧನೆಗಳನ್ನು ವಿಕಸಿತಗೊಳಿಸುತ್ತಾನೆ; ಮತ್ತು ಅವರಿಗೆ ಅವಶ್ಯವಾದ ಅನುಭೂತಿಗಳನ್ನು ಪ್ರದಾನ ಮಾಡುತ್ತಾನೆ. ಭಗವಂತನ ಮೇಲೆ ಯಾರು ಸಂಪೂರ್ಣ ವಿಶ್ವಾಸ ಮತ್ತು ನಂಬಿಗೆಯನ್ನಿಟ್ಟು ಆತ್ಮಾರ್ಪಣವನ್ನು ಮಾಡಲು ಸಿದ್ಧರಾಗುವರೋ ಅವರಿಗೆಲ್ಲ ಹೀಗೆಯೇ ಆಗುತ್ತ ಬಂದಿದೆ ಮತ್ತು ಹೀಗೆಯೇ ಆಗುವುದು. ಏಕೆಂದರೆ ಭಗವಂತನು ತನ್ನ ಮೇಲೆ ಈ ಪ್ರಕಾರವಾಗಿ ಭಾರವನ್ನು ತೆಗೆದುಕೊಳ್ಳುವುದು, ಭಕ್ತನು ತನ್ನ ಸ್ವತಃ ಪ್ರಯತ್ನದ ಮೇಲೆ ನಿರ್ಭರನಾಗದೆ ಭಗವಂತನ ಕೈಯಲ್ಲಿಯೇ ತನ್ನನ್ನು ಸಮರ್ಪಿಸಿಕೊಳ್ಳುವುದರಿಂದ, ಸಹಜವೇ ಆಗಿರುತ್ತದೆ. ಮತ್ತು ಈ ಸಮರ್ಪಣೆಯ ಅರ್ಥವೇ ಭಗವಂತನ ಮೇಲೆ ಸಂಪೂರ್ಣ ನಂಬಿಗೆ, ವಿಶ್ವಾಸಗಳನ್ನಿಡುವುದು ಮತ್ತು ಅಧಿಕಾಧಿಕವಾಗಿ ಆತ್ಮದಾನವನ್ನು ಮಾಡುವುದು ಆಗಿರುತ್ತದೆ. ಯಾವ ಸಾಧನೆಯ ಅನುಸರಣವನ್ನು ನಾನು ಸ್ವತಃ ಅನುಸರಿಸಿದೆನೋ ಅದರ ಸಿದ್ಧಾಂತವೇ ಇದಾಗಿರುತ್ತದೆ. ಮತ್ತು ನಾನು ಕಂಡಂತೆ ಯೋಗದ ಪ್ರಧಾನ ಪ್ರಕ್ರಿಯೆಯು ಈ ರೀತಿಯಾಗಿರುತ್ತದೆ. ಶ್ರೀ ರಾಮಕೃಷ್ಣ ಪರಮಹಂಸರು ಬೆಕ್ಕಿನ ಮರಿಯ ಪದ್ಧತಿಯ ಉದಾಹರಣೆ ಕೊಟ್ಟಿರುವದರ ಅಭಿಪ್ರಾಯವೂ ಇದೇ ಆಗಿರುತ್ತದೆಂದು ನನ್ನ ಮತವಾಗಿದೆ. ಆದರೆ ಎಲ್ಲರೂ ಒಮ್ಮಿಂದೊಮ್ಮೆ ಈ ದಾರಿಯ ಅನುಸರಣಮಾಡಲು ಶಕ್ತರಾಗುವುದಿಲ್ಲ. ಈ ಭಾವವನ್ನು ಪ್ರಾಪ್ತಮಾಡಿಕೊಳ್ಳುವುದಕ್ಕೆ ಬಹಳ ಕಾಲ ಬೇಕಾಗುತ್ತದೆ. ವಾಸ್ತವವಾಗಿ ಯಾವಾಗ ಮನ-ಪ್ರಾಣಗಳು ‘ಶಾಂತ’ವಾಗುವವೋ ಆಗ ಮಾತ್ರ ಈ ಭಾವವು ಮೆಲ್ಲಮೆಲ್ಲನೆ ಹೆಚ್ಚುತ್ತ ಹೋಗುತ್ತದೆ.

ಆತ್ಮಸಮರ್ಪಣವೆಂದರೆ, ಈ ಮನ ಮತ್ತು ಪ್ರಾಣಗಳ ಅಂತಸ್ಸಮರ್ಪಣವೆಂದೇ ನನ್ನ ಅರ್ಥವಾಗಿದೆ. ಯಾವ ವಸ್ತುಗಳು ಈ ಸಾಧನೆಯ ಭಾವ ಮತ್ತು ಅವಶ್ಯಕತೆಗಳಿಗೆ ವಿರೋಧಿಯಾಗಿರುವವೋ ಅವುಗಳ ತ್ಯಾಗ ಮಾಡುವುದು, ಆತ್ಮಾರ್ಪಣಮಾಡುವುದು, ಯಾರಾದರೂ ಆ ಸ್ಥಿತಿಯನ್ನು ಪಡೆದಿದ್ದರೆ ನೇರವಾಗಿ ತಿಳಿದ, ಇಲ್ಲವೆ ಚೈತ್ಯದ ಮೂಲಕ ಅರಿತ ಭಗವತ್ಪ್ರೇರಣೆಯ ದಾರಿಯನ್ನು ಅನುಸರಿಸುವುದು

ಅಥವಾ ಗುರು ತೋರಿಸಿದ ದಾರಿಯಿಂದ ನಡೆಯುವುದು ಇವೆಲ್ಲ ಬಾಹ್ಯಸಮರ್ಪಣಗಳೇ ಸರಿ. ಇಲ್ಲಿ ಪ್ರಾಯೋಪವೇಶನ (ದೀರ್ಘಕಾಲದ ಉಪವಾಸ) ದ ಯಾವ ಸಂಬಂಧವೂ ಸಮರ್ಪಣದೊಡನೆ ಖಂಡಿತ ವಾಗಿ ಇಲ್ಲ. ಇದು ಅತ್ಯಂತ ಉಗ್ರವಾದ ಹಾಗೂ ಚರಮ ಸೀಮೆಯನ್ನು ತಲುಪಿದ, ಹಾಗೂ ಗಂಡಾಂತರದಾಯಕ ತಪಸಿನ ಒಂದು ರೂಪವೆಂದು ನನ್ನ ಮತ. ಭಗವಂತನಲ್ಲಿ ಸಂಪೂರ್ಣ ವಿಶ್ವಾಸ ನಂಬಿಗೆಗಳನ್ನಿಡುವುದೇ ಆಂತರಿಕ ಸಮರ್ಪಣದ ಸಾರತತ್ವವಾಗಿರುತ್ತದೆ. ''ನನಗೆ ಭಗವಂತನೇ ಬೇಕು, ಎರಡನೆಯ ಯಾವ ವಸ್ತುವೂ ನನಗೆ ಬೇಕಿಲ್ಲ" ಎಂಬುದೇ ಸಾಧಕರ ಭಾವವಾಗಿರುತ್ತದೆ. ''ನನ್ನನ್ನೇ ನಾನು ಸಂಪೂರ್ಣವಾಗಿ ಭಗವದರ್ಪಣಮಾಡಿಕೊಳ್ಳಬಯಸುತ್ತೇನೆ. ನನ್ನ ಅಂತರಾತ್ಮವು ಭಗವದ್ದರ್ಶ ನವನ್ನೇ ಬೇಡುತ್ತದೆ. ಆದಕ್ಕೇ ನಾನು ಭಗವಂತನೊಡನೆ ಅವಶ್ಯ ಒಂದಾಗುವೆನು ಹಾಗೂ ಅವನನ್ನು ಪ್ರಾಪ್ತಮಾಡಿಕೊಳ್ಳುವೆನು. ನನಗೆ ಇನ್ನೇನೂ ಬೇಕಿಲ್ಲ; ಕೇವಲ ಭಗವಂತನೊಬ್ಬ ಮಾತ್ರ ಬೇಕು. ನನ್ನೊಳಗೆ ಅವನ ಕ್ರಿಯೆಯೇ ನಡೆಯಬೇಕು. ಅವನ ಕ್ರಿಯೆಗಳು, ಗುಪ್ತವಾಗಿಯಾಗಲಿ ಪ್ರಕಟವಾಗಿ ಯಾಗಲಿ, ತೆರೆಮರೆಗಾಗಲಿ ಅಥವಾ ಎದುರಿಗೇ ಆಗಲಿ, ಯಾವುದಾದರೂ ನನ್ನನ್ನು ಅಲ್ಲಿಗೆ ತಲುಪಿಸಿದರೆ ಸರಿ. ಇದೆಲ್ಲ ನನಗೆ ಬೇಕಾದಾಗ ಮತ್ತು ನನಗೆ ಬೇಕಾದಂತೆ ಆಗಲೆಂದೂ ನಾನು ಹಟ ಹಿಡಿಯುವ ದಿಲ್ಲ. ಭಗವಂತನೇ ಇದನ್ನೆಲ್ಲ ತನಗೆ ಬೇಕಾದಾಗ ಮತ್ತು ತನಗೆ ಬೇಕಾದಂತೆ ಗೈಯಲಿ. ನಾನು ಅವನಲ್ಲಿ ನಂಬಿಗೆಯಿಟ್ಟಿದ್ದೇನೆ. ಅವನ ಬಯಕೆಯನ್ನೇ ಸ್ವಾಗತಿಸುತ್ತೇನೆ. ಸದಾಸರ್ವದಾ ಆ ಬೆಳಕಿ ಗಾಗಿ, ಆ ಉಪಸ್ಥಿತಿಗಾಗಿ, ಆ ಪ್ರಸನ್ನತೆಗಾಗಿ ಅಭೀಪ್ಸೆಯುಳ್ಳವನಾಗಿರುವೆನು. ಎಲ್ಲ ತೊಡಕು ತೊಂದ ರೆಗಳನ್ನು ನೀಗುವೆನು. ಅವನಲ್ಲಿಯೇ ನಿರ್ಭರನಾಗುವೆನು. ಎಂದೆಂದೂ ಅವನ ಆಶ್ರಯವನ್ನು ತೊರೆ ಯುವದಿಲ್ಲ. ನನ್ನ ಮನಸು ಸ್ಥಿರವಾಗಲಿ, ಅವನಲ್ಲಿಯೇ ವಿಶ್ವಾಸವಿಡಲಿ, ಅವನೇ ತನ್ನ ಈ ಬೆಳಕನ್ನು ಹರಿಬಿಡಲಿ, ನನ್ನ ಪ್ರಾಣವು ಸ್ಥಿರವಾಗಲಿ, ಅವನೊಬ್ಬನಲ್ಲಿಯೇ ರಮಮಾಣವಾಗಲಿ, ಅವನೇ ತನ್ನ ಸ್ಥಿರತೆ ಮತ್ತು ಆನಂದಗಳೆಡೆಗೆ ಅದನ್ನು ಉನ್ಮುಕ್ತಗೈಯಲಿ, ಎಲ್ಲವೂ ಅವನಿಗಾಗಿಯೇ ಆಗಲಿ, ಸ್ವತಃ ನಾನೇ ಅವನಿಗಾಗಿರಲಿ, ಬೇಕಾದುದಾದರೂ ನಾನು ಈ ಅಭೀಪ್ಸೆಯನ್ನು ಮತ್ತು ಆತ್ಮದಾನವನ್ನು ಸಂತ ತವಾಗಿಡುವೆನು, ಮತ್ತು ಇದು ಆಗಿಯೇತೀರುವುದೆಂದು ತುಂಬಾ ನಂಬಿಗೆಯಲ್ಲಿರುವೆನು."

ಈ ನಿಲುಮೆಯೇ ಸದಾಸರ್ವದಾ ನಮ್ಮೊಳಗೆ ವರ್ಧಿಸುತ್ತ ನಡೆದಿರಬೇಕು. ಏಕೆಂದರೆ ಈ ನಿಲು ಮೆಯನ್ನು ಯಾರೂ ನಿಸ್ಸಂದೇಹವಾಗಿ ಕೂಡಲೆ ಪೂರ್ಣ ಸಾಧಿಸಲಾರರು. ಮನಸಿನ ಹಾಗೂ ಪ್ರಾಣದ ಗತಿಗಳು ಅಡ್ಡಬರುತ್ತಲೇ ಇರುವವು. ಆದರೆ ಇದರ ಬಗ್ಗೆ ಸಂಕಲ್ಪವನ್ನೇ ಮಾಡಿಟ್ಟುಕೊಂಡದ್ದಾದಲ್ಲಿ, ಅದು ನಮ್ಮೊಳಗೆ ಬೆಳೆಯುತ್ತಲೇ ಇರುವದು. ಆ ಬಳಿಕ ಮುಖ್ಯಮಾತೆಂದರೆ ನಾವು "ಪಥ ಪ್ರದರ್ಶನ" ದಂತೆ ನಡೆಯುವದೇ. ಯಾವಾಗ ಪಥ ಪ್ರದರ್ಶನ ನಮ್ಮೆದುರು ತನ್ನಿಂತಾನೇ ಪ್ರಕಟವಾಗುವುದೋ, ಅಂದರೆ ನಮಗಾಗಿ ಭಗವಂತನ ಆದೇಶವೇನಿದೆ ಎಂಬುದು ತಿಳಿಯತೊಡಗುವುದೋ ಆಗ ಆ "ಪಥ ಪ್ರದರ್ಶನ" ದಂತೆ ನಡೆದು ಅದನ್ನು ಪಾಲನಮಾಡಬೇಕಾಗುವುದು. ಮನಸ್ಸು ಮತ್ತು ಪ್ರಾಣದ ಚೇಷ್ಟೆಗಳಿಂದ ಆ ಪಥಕ್ರಮಣದಲ್ಲಿ ಹಸ್ತಕ್ಷೇಪವಾಗದಂತೆ ನೋಡಿಕೊಳ್ಳಬೇಕು.

ಇದೊಂದೇ ಮಾರ್ಗವೆಂದು ನಾನೆಂದಿಗೂ ಎನ್ನಲಾರೆ. ಎರಡನೆಯ ಬಗೆಯ ಸಾಧನಗಳು ಇಲ್ಲ ವೆಂದೂ ನಾನು ಹೇಳಲಾರೆ. ಸಾಧನಕ್ಕೆ ಇನ್ನೂ ಬಹಳ ಬಗೆಯ ರೀತಿಗಳುಂಟು. ಆ ಆ ಬಗೆಗಳಿಂದ ಮನುಷ್ಯನು ಭಗವಂತನ ಬಳಿಗೆ ತಲುಪುತ್ತಾನೆ. ಯಾವ ದಾರಿಯಿಂದ, ಪ್ರಕೃತಿಯು ಸಿದ್ಧತೆಯಾಗುವ ಮೊದಲೇ, ಸಾಧನದ ಭಾರವನ್ನು–ಸಕಲ ಭಾರವನ್ನು–ಭಗವಂತನು ತನ್ನ ಮೇಲೆಯೇ ತೆಗೆದುಕೊಳ್ಳುವ ನೆಂದು ಗೋಚರವಾಗುತ್ತಿದೆಯೋ, ಅಂತಹ ದಾರಿ ಮಾತ್ರ ಇದು ಆಗಿರುತ್ತದೆಂದು ನಾನು ಬಲ್ಲೆ. ಉಳಿದ

ಬೇರೆ ಬೇರೆ ಬಗೆಯ ಪದ್ಧತಿಗಳಲ್ಲಿ ಕೂಡ ಭಗವಂತನ ಕ್ರಿಯೆಯ ಅನುಭೂತಿಯು ಒಮ್ಮೊಮ್ಮೆ ಎನಿಸಿದಂತಾಗುತ್ತದೆ. ಆದರೆ ಅಲ್ಲಿ- ಅದೆಲ್ಲ ಬಹುಶಃ ತೆರೆಮರೆಯಲ್ಲಿಯೇ ಆದಂತಾಗುತ್ತಿರುತ್ತದೆ. ಈ ರೀತಿಯ ಸಂಪೂರ್ಣ ಸಿದ್ಧತೆಯಾಗುವ ವರೆಗೆ ಹಾಗೆಯೇ ನಡೆದಿರುತ್ತದೆ. ಒಂದೊಂದು ಸಾಧನಾ ಕ್ರಮದಲ್ಲಿ ಈ ಭಾಗವತ ಕ್ರಿಯೆಯ ಸ್ವೀಕಾರವನ್ನೇ ಮಾಡಲಾಗಿರುವದಿಲ್ಲ. ಪ್ರತಿಯೊಂದನ್ನೂ ತಪಸ್ಸಿನಿಂದಲೇ ಸಾಧಿಸಬೇಕಾಗುತ್ತದೆ. ಬಹಳ ಬಗೆಯ ಸಾಧನೆಗಳಲ್ಲಿ ಇವೆರಡರ ಮಿಶ್ರಣವೇ ಇರುತ್ತದೆ. ತಪಸ್ಸು ಕೊನೆಗೆ ಸರಳ ಸಹಾಯ ಹಾಗೂ ಹಸ್ತಕ್ಷೇಪಕ್ಕೆ ಕೂಗಿ ಕರೆಯುತ್ತದೆ. ಭಗವಂತನೋರ್ವನೇ ಏನೆಲ್ಲವನ್ನೂ ಮಾಡುತ್ತಿರುತ್ತಾನೆಂಬ ಭಾವನೆಯ ಮತ್ತು ಅನುಭೂತಿಯ ಸಂಬಂಧವು ಕೇವಲ ಆತ್ಮಸಮರ್ಪಣ ಭಾವಕ್ಕೆ ಆಶ್ರಿತವಾದ ಯೋಗದಿಂದ ಮಾತ್ರ ಬರುತ್ತದೆ. ಆದರೆ, ಯಾವದೇ ಬೇಕಾದ ಯೋಗ ತಪಸ್ಸಿನ ಪದ್ಧತಿಯನ್ನು ಅನುಕರಿಸುವದಾದರೂ ಕೂಡ ಅದರಲ್ಲಿ ಒಂದು ಕಾರ್ಯವನ್ನು ಮಾತ್ರ ಮಾಡಲೇಬೇಕಾಗುತ್ತದೆ. ಅದೆಂದರೆ ''ಏಕನಿಷ್ಠ''ನಾಗಿರುವದು; ಮತ್ತು ಕೊನೆಯ ವರೆಗೂ ಪ್ರಯತ್ನಗೈಯುತ್ತಲೇ ಇರುವುದು.

ಭಗವಂತನು ಎಲ್ಲವನ್ನೂ ಮಾಡಬಲ್ಲನು. ಹೃದಯವನ್ನೂ ಸ್ವಭಾವವನ್ನೂ ಶುದ್ಧಗೊಳಿಸಬಲ್ಲನು. ಆಂತರಿಕ ಚೇತನೆಯನ್ನು ಜಾಗ್ರತಗೊಳಿಸಬಲ್ಲನು. ತೆರೆಯನ್ನು ತೆಗೆದೊಗೆಯಬಲ್ಲನು. ಹೀಗಾಗುವುದು, ಸಂಪೂರ್ಣ ವಿಶ್ವಾಸ ಹಾಗೂ ನಂಬಿಗೆಗಳಿಂದ ತನ್ನನ್ನು ತಾನು ಭಗವಂತನ ಕೈಯಲ್ಲಿ ಅರ್ಪಿಸಿಕೊಂಡಾಗ ಮಾತ್ರ. ಒಂದು ವೇಳೆ ಯಾರೊಬ್ಬರು ಒಮ್ಮೆಲೆ ಸಂಪೂರ್ಣವಾಗಿ ಹೀಗೆ ಮಾಡಲಸಾಧ್ಯವಾದರೆ, ಎಷ್ಟೆಷ್ಟು ಹೆಚ್ಚಾಗಿ ಹೀಗೆ (ಸರ್ವಸಮರ್ಪಣವನ್ನು) ಮಾಡುವರೋ ಅಷ್ಟಷ್ಟೇ ಹೆಚ್ಚಾಗಿ ಒಳಗಿನಿಂದ ಅವನಿಗೆ ಸಹಾಯವೂ ದಾರಿದೋರುವಿಕೆಯೂ (ಪ್ರಾಪ್ತ) ದೊರೆಕೊಳ್ಳುವುದು. ಮತ್ತು ಭಗವದನುಭೂತಿಯು ಬೆಳೆಯುತ್ತಲೇ ನಡೆಯುವದು. ಸಂದಿಗ್ಧಮನದ ಕಾರ್ಯವು ಕಡಿಕಡಿಮೆಯಾಗುತ್ತ ಬಂದು ವಿನಮ್ರತೆ ಹಾಗೂ ಸಮರ್ಪಣದ ಬಯಕೆಯು ಬಲವಾಗುತ್ತ ನಡೆದು, ಸಂಪೂರ್ಣ ಆತ್ಮಸಮರ್ಪಣ ಭಾವದ ಪೂರ್ಣ ಸಂಭವವು ಸಾಧ್ಯವಾಗುವುದು. ಆ ಕಾಲಕ್ಕೆ ಇನ್ನುಳಿದ ಯಾವ ಶಕ್ತಿಯ ಅಥವಾ ತಪಸ್ಯೆಯ ಅವಶ್ಯಕತೆಯೇ ಉಳಿಯುವದಿಲ್ಲ. ಇದೇ ಆತ್ಯಂತಿಕ !

ಅನುವಾದಕರು: **ಶ್ರೀ ದೇಸಾಯಿ ದತ್ತಮೂರ್ತಿ**

---

Free action is the action of the Divine in us and through us ; no other action can be free.

ಮುಕ್ತ ಕರ್ಮವೆಂದರೆ ನಮ್ಮಲ್ಲಿ ನಮ್ಮ ಮುಖಾಂತರ ನಡೆಯುವ ಭಗವತ್‌ಕ್ರಿಯೆ; ಮತ್ತಾವ ಕರ್ಮವೂ ಮುಕ್ತವಲ್ಲ.

For one who wants to practise sadhana, sadhana must come first-reading and mental development can only be subordinate things.

ಸಾಧನದಲ್ಲಿ ತೊಡಗಬೇಕೆನ್ನುವವನಿಗೆ ಸಾಧನೆಯೇ ಪ್ರಥಮ ವಿಚಾರ; ಪಠನ ಹಾಗು ಮಾನಸಿಕ ವಿಕಾಸಗಳು ಆನುಷಂಗಿಕ ಮಾತ್ರ.

—ಶ್ರೀ ಅರವಿಂದರು

# ಗತಿ

ಸೂರ್ಯಗತಿ, ಚಂದ್ರಗತಿ,
ಓ! ನನಗೆ ನೀನೆ ಗತಿ!
ನೀನೆ ಸೂರ್ಯ, ನೀನೆ ಚಂದ್ರ,
ನೀನೆ ವರುಣ, ನೀನೆ ಇಂದ್ರ!
ಯಾವ ಗತಿಯೆ ಸಂಭವಿಸಲಿ,—
ಅದೇ ನನಗೆ ಸದ್ಗತಿ,
ಇರಲು ನೀನು ನನ್ನ ಜೊತೆಗೆ
ಆರ್ಯ, ಗೆಳೆಯ, ಕುಲಪತಿ!

—ವಿನಾಯಕ

# ವಂದೇ ಗುರು ಶ್ರೀ ಅರವಿಂದೋಂ

ಜಗನ್ನಾಥ-ಜಗ-ಜೀವ ತ್ರಯರ
ಸುಸಂಬದ್ಧ ಸಂಬಂಧ ವಿಚಾರ
ಸಾಕ್ಷಾತ್ಕರಿಸಿದ ಶ್ರೀ ನರವೀರ
ವಂದೇ ಶ್ರೀ ಗುರು ಅರವಿಂದೋಂ

ತೊಳಲುತಿರುವೆ ನಾ ಸಂಸಾರದಲಿ
ಮೀಯಲು ತಿಳಿವಿನ ಕಾಸಾರದಲಿ
ನಿನ್ನಯ ಕೃಪೆ ಕರುಣಾಸಾರದಲಿ
ನಂಬಿರುವೆನು ಶ್ರೀ ಗುರುದಯೆಯಿರಲಿ!

ಕೆಳಗಿನ ಕೂಗಿನ ಆರ್ತಸ್ವರಕೆ
ಮೇಲಿನ ಕರುಣೆಯ ಕೃಪೆ ಬರುವುದಕೆ
ಜೀವನ ಜೀವನ ಸಾರ್ಥಕ್ಯಕ್ಕೆ
ನಂಬಿರುವೆನು ಕೃಪೆ ಒಂದೇ ಬಯಕೆ.

—ದೇಸಾಯಿ ದತ್ತಮೂರ್ತಿ

# ಬಯಕೆ

(ಶ್ರೀ ದಿಲೀಪಕುಮಾರ ರಾಯರವರ 'Hunger' ಎಂಬ ಕವಿತೆಯ ಭಾವಾನುವಾದ)

ನಿನ್ನ ದರ್ಶನಕೆ ನನ್ನ ಬಯಕೆ ನಿಗಿ-ನಿಗಿಸುವಂತೆ ಮಾಡು ।
ನಿನ್ನ ಚೆಲುವಿನಿಂದೆನ್ನ ಕನಸು ಝುಗ-ಝುಗಿಸುವಂತೆ ಮಾಡು ॥
ತೇಜ ತೂರಿ ಬಹ ಗಾನತಾನಗಳನೇರಿ ಬಗೆಯೊಳಾಡು ।
ರಾಜರಾಜ, ಬೇಡುವೆನು, ನಿನ್ನ ಹೊಳೆಹೊಳೆವ ತಿಳಿವ ನೀಡು ॥
ನಿನ್ನ ವಿಮಲ ಪ್ರಜ್ವಾಲೆಯನ್ನು ನನ್ನಾತ್ಮನಲ್ಲಿ ಪುಟಿಸು ।
ನಿನ್ನ ಸಚ್ಚಿದಾನಂದದೆಡೆಯೊಳೇಕಾಗ್ರವನ್ನು ಘಟಿಸು ॥
ನಿನ್ನ ಕೃಪೆಯ ಬಾಂದಳದಿ ನನ್ನ ಶ್ರದ್ಧೆಯನು ಭದ್ರಗೊಳಿಸು ।
ನನ್ನ ಪ್ರೇಮವದು ಚೆಲುವನೊಪ್ಪಿ ಬಿಗಿದಪ್ಪುವಂತೆ ನಿಲಿಸು ॥

—ಗಂಗಪ್ಪ ವಾಲಿ
(ಅನುವಾದಕರು)

Faith is Spontaneous Knowledge in the psychic.

ಚೈತ್ಯಾಂಶದಲ್ಲಿ ಉದಯಿಸುವ ಸ್ವಯಂಭೂಜ್ಞಾನವೇ ಶ್ರದ್ಧೆ.

* *

The senses are liars – they do not convey to us the truth of things, but only an incomplete and even falsified appearance of things.

ಇಂದ್ರಿಯಗಳು ಸುಳ್ಳು ಹೇಳುತ್ತವೆ. ಯಾವುದೇ ವಸ್ತುವಿನಲ್ಲಿಯ ಸತ್ಯವನ್ನು ಅವು ನಮಗೆ ಒದಗಿಸದೆ ಅದರ ಬಾಹ್ಯ ರೂಪದ ಅಪೂರ್ಣ ಚಿತ್ರವನ್ನು ಒದಗಿಸುವವು, ಇಷ್ಟೇ ಅಲ್ಲ ಸುಳ್ಳು ಚಿತ್ರವನ್ನೂ ಒದಗಿಸುವದುಂಟು.

—ಶ್ರೀ ತಾಯಿಯವರು

# ಗುರುದರ್ಶನ

೧.

‘ಗುರುವೆ ಬ್ರಹ್ಮನು ಗುರುವೆ ವಿಷ್ಣುವು
ಗುರು ಮಹೇಶ್ವರ ಗುರು ಪರಾತ್ಪರ
ಗುರು ಮಹಾದೇವಾಧಿದೇವನು’
ನಮಿಪೆ ಗುರುಪಾದಾರವಿಂದವ :

೨.

ಶ್ರೀಮದರವಿಂದನೆ ವರೇಣ್ಯನೆ
ಪಾಂಡಿಚೆರಿಯಾಶ್ರಮಸುಪೂಜ್ಯನೆ
ಪೂರ್ಣಯೋಗಾಚಾರ್ಯವರ್ಯನೆ
ದಿವ್ಯದೃಷ್ಟಿಯ ಸೃಷ್ಟಿಕರ್ತನೆ.

೩.

ಪರಕವೀಂದ್ರನೆ ಜ್ಞಾನಚಂದ್ರನೆ
ಋಷಿವರನೆ ಯೋಗೇಶ್ವರಾತ್ಮನೆ
ದಿವ್ಯಜೀವನ ಪರಮದರ್ಶನ
ಮಾನಸೋತ್ತರ ಶಕ್ತಿಸಿದ್ಧನೆ.

೪.

ಭಾರತದ ಸ್ವಾತಂತ್ರ್ಯಭಾಸುರ
ವೇದ ವೇದಾಂಗಾಭಿವೇದ್ಯನೆ
ಧರ್ಮಸಂಸ್ಕೃತಿ ಆರ್ಯಸಂಸ್ಕೃತಿ
ಧರೆಗೆ ಉದ್ಘೋಷಿಸಿದ ಘೋಷನೆ.

೫.

ಮಾನವತೆಯುತ್ಥಾನವೆಸಗಿದ :
ಭಾರತದ ಗುರುವರ-ಮಹಾತ್ಮನೆ
ಲೋಕವೆಲ್ಲವು ತಲ್ಲಣದೊಳಿದೆ :
ನಿನ್ನ ಮರುದರುಶನವ ಪಡೆಯಲು.....

—ಸದಾನಂದ ನಾಯಕ

# ಐಕ್ಯಕ್ಕೆ ಸ್ವಾಗತ

ಕಾರ್ತಿಕೈಕಾದಶೀ ಕುಜವಾರ ದಿನದಲ್ಲಿ
ವಿಕೃತಿ ಸುಕೃತಿಯಲಿ ನಿಂದು
ತಪದ ತೇಜವು ವಿಶ್ವತೇಜದೊಡನೊಂದಾಗಿ
ಸಮರಸತೆ ಹೊಂದಿತೆಂದು

ಮಂಗಳನ ಬೆಳಗು ತಂದಿತು ವಾರ್ತೆ; ದೇಹದಲಿ
ಬೆಳಗುತಿಹ ತೇಜವೊಂದು
ತನುಬಂಧನವ ತೊರೆದು ವಿಶ್ವಾತ್ಮಗೇಹದಲಿ
ಬೆಳಗುವುದು ಮುಂದು ಎಂದು.

ಅರವಿಂದಸಖ ಅರ್ಕ, ಚಿಜ್ಜ್ಯೋತಿಮಯರೂಪ
ಜಗಚಕ್ಷು, ಜನಚಕ್ಷುವ
ಕರೆಸಿ ಬೆರೆಯಿಸಿಕೊಂಡ, ಆ ಪ್ರಭಾಮಯ ದೀಪ
ಸತತ ಬೆಳಗಲಿ ವಕ್ಷವ.

ಇಲ್ಲವಾದನೆ ಗುರುವು! ಇಲ್ಲವೆಂಬುವೆ ಇಲ್ಲ!
ಇಲ್ಲವಾಗಿಲ್ಲ ಇಲ್ಲ!!
ಒಂದೆದೆಯೊಳಿದ್ದವನು ಎದೆಎದೆಗು ಬಿತ್ತರಿದ
ಇದನು ಬಲ್ಲವನೆ ಬಲ್ಲ!!

ಎಲ್ಲಿ ಇದೆ ತೆರೆದಿಹುದು ಅಲ್ಲಿಂದ ಬಂದಿಲ್ಲಿ
ಮೂಡು ಎಲ್ಲೆಲ್ಲಿಯಂತೆ.
ಇಲ್ಲಿ ಎದೆ ಎದೆಗೆಲ್ಲಿ? ಮೊದಲು ಕೊನೆ ಇದರಲ್ಲಿ
ಎಲ್ಲೆಲ್ಲು ನೀನೆ ಅಂತೆ!!!

—ದೇಸಾಯಿ ದತ್ತಮೂರ್ತಿ

# ಶ್ರೀ ಅರವಿಂದರೂ ರಸಶಾಸ್ತ್ರವೂ

( ಆಧಾರಗ್ರಂಥಸೂಚಿ: L.=Life Divine; F. P. = Future Poetry; A.=Arya )

## (೧) ಸುಸಂಗತವೂ ಸುದೀಪ್ತವೂ ಆದ ಸಾಕಲ್ಯ

ಆಕಸ್ಮಾತ್ತಾಗಿ ಓದಹೊರಟ ಯಾರಿಗಾದರೂ ಶ್ರೀ ಅರವಿಂದರ ಕಾವ್ಯ-ಕಲಾಸಿದ್ಧಾಂತದ ಪರ್ಯಾಪ್ತತೆ, ನಿರ್ವಿಕಾರ ದೃಷ್ಟಿಗಳು ಅಚ್ಚರಿಯನ್ನುಂಟುಮಾಡದಿರವು. ಕೇವಲ ಅನುಭಾವ ಮಾರ್ಗದಲ್ಲಿ ಹೆಜ್ಜೆಯಿಡಲು ಸನ್ನದ್ಧರಾದ ಅವರಿಗೆ ಮಾನವ-ನಿಸರ್ಗಗಳ ಮನೋ-ಜೀವನ ಕ್ಷೇತ್ರಗಳೆಲ್ಲವೂ ಅನುಭಾವಗತ ಎಂದು ಹೊಳೆಯಿತು. 'ಅತ್ಯುನ್ನತ ಶಕ್ತಿಸ್ಥಲದಿಂದ ಸ್ಫೂರ್ತಿ ದೊರೆತರೂ ಅಲ್ಪಕವಿ ಸಾಧಿಸುವುದು ಅಲ್ಪವೆ; ಮಹಾಕವಿಯಾದರೋ ಸಾಧಾರಣ ವಿಭೂತಿಸಾನ್ನಿಧ್ಯದಿಂದ ಪಡೆದ ಸ್ಫೂರ್ತಿಯಿಂದಲೇ ಮಹಾಕೃತಿಯನ್ನು ರಚಿಸುವನು' ಎನ್ನುತ್ತಾರೆ ಶ್ರೀ ಅರವಿಂದರು. (ಪು. ೧೩೨, L.೩) ಆದುದರಿಂದ ನಾವಿಲ್ಲಿ ಸಮಪ್ರಮಾಣ, ಸಮತೋಲಗಳ ಅತುಲ ಬೆಲೆಯುಳ್ಳ ಸಿದ್ಧಚೇತಸ್ಸಿನ ಸಂಪರ್ಕವನ್ನು ಪಡೆಯುವೆವು. ಅವರ ಪ್ರಬಂಧ-ಪತ್ರಗಳ ಅನುಶೀಲನದಿಂದ ಸರ್ವಗ್ರಹವೂ ಸಂಕಲನಾತ್ಮಕವೂ ಆದ ರಸವಿವೇಕ ನಮ್ಮಲ್ಲಿ ಉದಯವಾಗುವುದು. *ಪ್ರತಿಭಾಭೇದಾನುಸಾರವಾಗಿ ಕಾವ್ಯಭೇದಗಳಿವೆ ಎಂಬುದನ್ನವರು ಬಲ್ಲರು: 'ಜೀವನದ ಮತ್ತು ಸೃಷ್ಟಿಯ ಬಾಹ್ಯಲಕ್ಷಣಗಳನ್ನು ಸುದೃಢವಾಗಿ ಪ್ರತಿಫಲಿಸಬಲ್ಲ ಬಹಿರ್ಮುಖ ಪ್ರತಿಭೆ ಒಂದು ಬಗೆಯದು; ಮನಸ್ಸನ್ನು ಕಲಕಿ ಎಬ್ಬಿಸಬಲ್ಲ ಮನೋ-ಭಾವ ಪರಿಣಾಮಗಳನ್ನು ಕಲ್ಪಿಸಬಲ್ಲ ಅಂತರ್ಮುಖ ಪ್ರತಿಭೆ ಮತ್ತೊಂದು ಬಗೆಯದು; ಕಾಲ್ಪನಿಕ ಚಿತ್ರಗಳನ್ನು ಮನೋಭಿತ್ತಿಯ ಮೇಲೆ ಓಡಾಡಿಸಬಲ್ಲ ಪ್ರತಿಭೆಯೇ ಬೇರೆ—ಅದನ್ನೇ ನಾವು ಕವಿ ಕಲ್ಪನೆ ಎನ್ನುತ್ತೇವೆ; ಪದ-ಪದಾರ್ಥ ಕಲ್ಪಿತ ಚಿತ್ರಗಳಲ್ಲೇ ಲೀನವಾಗಿ, ತದೇಕಧ್ಯಾನಜನ್ಯ ಆನಂದದಲ್ಲಿ ಮಗ್ನವಾಗಿರುವ ಆಲಂಕಾರಿಕ ಪ್ರತಿಭೆಯ ಬಗೆಯೇ ಬೇರೆ.' (F. P. ಪು. ೫೦೯, ಆರ್ಯ, ಮಾರ್ಚ ೧೯೧೮). ನಮ್ಮ ಜೀವನ ಮೀಮಾಂಸೆಗೆ ಮೆಚ್ಚುಗೆಯಾಗುವ ಮತ್ತು ನಮ್ಮ ಅನುಭವಗಳಿಗೆ ಹಿಡಿಸುವ ಮೋಹಕ ಶಕ್ತಿಯುಳ್ಳ ಕಾವ್ಯವಿದೆ; ನಮ್ಮ ಭಾವಗಳನ್ನು ಉದ್ರೇಕಿಸಿ, ಆ ಭಾವೋದ್ರೇಕಗಳ ಸೋತ್ಸಾಹ ಪ್ರತಿಬಿಂಬಗಳನ್ನು ಕಣ್ಣಿಗೆ ಕಟ್ಟಿದಂತೆ ನಿಲ್ಲಿಸುವ ಉತ್ತೇಜಕ ಭಾವನಾನಿರ್ಭರ ಕಾವ್ಯವೂ ಉಂಟು; ಜೀವನದ ಮತ್ತು ಅದರ ರಚನಾವೈವಿಧ್ಯದ ಬಗ್ಗೆ ನಮಗಿರುವ ಕುತೂಹಲವನ್ನು ತಣಿಸಬಲ್ಲ ಪ್ರಭುಸಂಮಿತಿ ಸಹಜ ಬಲಸಂಪನ್ನ ಬುದ್ಧಿಹೃದ್ಯ ಕಾವ್ಯಗಳನ್ನೂ ಕಾಣಬಹುದು. 'ಈಯೆಲ್ಲವೂ ನಮ್ಮ ಮನಸ್ಸಿಗೂ ಜೀವಕ್ಕೂ ಸಂತೋಷ ಕೊಡಬಲ್ಲವು; ಅವನ್ನು ಗ್ರಹಿಸಿ ಸಂತಸಬಡುವುದು ಸರ್ವಥಾ ಸರಿಯಾದದ್ದು; ನಮ್ಮ ಉತ್ಪಥಗಮನದಲ್ಲಿ ಅವನ್ನು ಚೆನ್ನಾಗಿಯೂ ಸ್ಪಷ್ಟವಾಗಿಯೂ ಆಸ್ವಾದಿಸಬೇಕು.' ( ಪು. ೫೦೯. A. March, 1918).

* ಪ್ರಜ್ಞಾ ನವನವೋಲ್ಲೇಖಶಾಲಿನೀ ಪ್ರತಿಭಾ. ಅಪೂರ್ವವಸ್ತುನಿರ್ಮಾಣಕ್ಷಮಾ ಪ್ರಜ್ಞಾ ಪ್ರತಿಭಾ. ತಸ್ಯವಿಶೇಷೋ ರಸಾವೇಶ ವೈಶದ್ಯ ಸೌಂದರ್ಯ ಕಾವ್ಯನಿರ್ಮಾಣ ಕ್ಷಮತ್ವಂ.

'ಆದರೆ ನಾವು ಇವುಗಳಲ್ಲೇ ಮಗ್ನರಾಗಿ ಉಳಿದರೆ ಸಾರಸ್ವತಪರ್ವತಾರೋಹಣದಲ್ಲಿ ಬಹಳ **ಮೇಲಕ್ಕೇರಲಾರೆವು.'** ( ಪು. ೫೯–೧೦. ಆದರಲ್ಲೇ). **ಇಲ್ಲಿದೆ ನೋಡಿ ಶ್ರೀ ಅರವಿಂದರ ವಿಶಿಷ್ಟ ವಿಚಾರ: ಕಲೆಯಲ್ಲಿ** ಚಿರಸ್ಥಾಯಿಯಾದ ಸಾರವಿರಬೇಕು ಎಂದು **ಒತ್ತಿ ಹೇಳುವುದೇ ಆ ವೈಶಿಷ್ಟ್ಯ. ವಿವಿಧ ಕಲೆಗಳು ಮತ್ತು** ಅವುಗಳ ರಸ–ಅರ್ಥಗೌರವಗಳ ತಾರತಮ್ಯ **ಇವುಗಳ ಮೇಲೆ ಶ್ರೀ ಅರವಿಂದರು** ಸಾಕಷ್ಟು **ಪ್ರಕಾಶ** ಬೀರಿದ್ದಾರೆ. 'ನಾನು ಶ್ರೇಷ್ಠ, ತಾನು ಶ್ರೇಷ್ಠ ಎಂಬ ಆ ವಿವಿಧ ಕಲೆಗಳ ಶ್ರೇಷ್ಠತೆಯನ್ನು ನಿರ್ಣಯಿಸಿ ಹೇಳಬಲ್ಲವರಾರು! ಅಥವಾ ಆ ದೇವತೆಗಳ ಪ್ರಕರಣವನ್ನು ತೀರ್ಮಾನಿಸಲು ಮುಂಬರುವ ನ್ಯಾಯಾಧೀಶನಾದರೂ ಯಾವನು!' ಎಂದು ಅವರು ಉದ್ಗರಿಸಿದ್ದಾರೆ (L. 3. P. 276). ಆದರೆ ಈ ಪ್ರಬಂಧದಲ್ಲಿ ಉದಾಹರಣ–ವಿವರಣ ವಾಕ್ಯಗಳನ್ನು ಅವರು ಕವಿ-ಕಾವ್ಯಗಳ ಮೇಲೆ ಬರೆದ ಬರೆವಣಿಗೆಯಿಂದಲೇ ಮುಖ್ಯವಾಗಿ ತೆಗೆದುಕೊಳ್ಳಲಾಗುವುದು. ಚಾಣಾಕ್ಷ ವಾಚಕನು ತನ್ನ ಬದಲಾವಣೆಗಳನ್ನು ಮಾಡಿ ಈ ನಿಗಮನಗಳನ್ನು ಇತರ ಕಲೆಗಳಿಗೆ ಅನ್ವಯಿಸಿಕೊಳ್ಳಬಲ್ಲನೆಂಬುದು ಅಸಂಗದಿಗ್ಧ.

ಜೀವನದ ಸಾಕಲ್ಯಾವಲೋಕನಕ್ಕಾಗಿ ಸತತ ಪ್ರಯತ್ನ ಮಾಡಿದ್ದೇ ಶ್ರೀ ಅರವಿಂದರ ರಸಶಾಸ್ತ್ರ ವಿವೇಚನೆಯಲ್ಲಿ ಎದ್ದು ಕಾಣುವ ಅಂಶ. ಅವರೇ ಹೇಳುತ್ತಾರೆ ನೋಡಿ—'ಹೊಸದರ್ಶನವು ಹಳೆಯದರಂತೆ ಪುರೋಹಿತನ ಜರ್ಝರಿತುರ್ಝರಿಯಲ್ಲ; ಅನುಭಾವಿಕ, ಅಂತರ್ಮುಖಿ, ಅಶುಚಿಭೀತ ಎನಿಸಿಲ್ಲ. ಇದು ವಿವಿಧ ಕಲಾದ್ವೈವತಗಳನ್ನು ಪುನಃ ಹತ್ತಿರಕ್ಕೆ ಸೆಳೆದು, ಭೂಚರರಿಗೆ ಸಲಿಗೆಯ ಸಂಬಂಧ ಮಾಡಿಕೊಟ್ಟು; ಅವನ್ನು ಪೂಜಾವಿಧಿ, ತತ್ವಜ್ಞಾನ ಮುಂತಾದ ಉನ್ನತಕಲೆ–ವಿಚಾರಗಳಲ್ಲಲ್ಲದೆ, ಮಾನವನ ಸಾಮಾನ್ಯ ಜೀವನ ಮತ್ತು ಚಟುವಟಿಕೆಗಳಲ್ಲೂ ಸ್ಫೂರ್ತಿಮತ್ತಾಗಿ ತರುವ ದೃಷ್ಟಿಯಾಗಿದೆ. (P. 301, Arya, December 1919). ಕಾವ್ಯದ 'ಪಂಚದೀಪಗಳು' ಇನ್ನುಮೇಲೆ ಯಾವುದೋ ಒಂದು ಚಿಕ್ಕ ರಸೇಶ್ವರ ದೇವಾಲಯದ ಮೂಲೆಯಲ್ಲುರಿಯುವ ಮಿಣುಕುಹಣತಿಗಳೆನಿಸವು; ಅವಿನ್ನು ನಮ್ಮ ಅತ್ಯುಚ್ಚ ಚೇತಸ್ಸಿನ ಗಗನಾಭೋಗವನ್ನೇರಿ ನಮ್ಮ ಬಾಳಿನ ಅತಿ ಗಭೀರ-ವಿಸ್ತಾರ ಸ್ಥಲಗಳ ಮೇಲೆ ಬೆಳಕು ಬೀರುವಂತಹ ಸೂರ್ಯರೆನಿಸುವುವು.' (P. 308, Arya, December 1919). ಮುಂಗಾಲದ ಕಲೆಯು ಅಸ್ತಿತ್ವದ ಎಲ್ಲ ಅಂತಸ್ತುಗಳನ್ನೂ ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಳ್ಳಲಿದೆ. ಮಾನವ–ನಿಸರ್ಗ–ದೇವರುಗಳ ಅತಿವಿಸ್ತೃತ ದರ್ಶನವನ್ನೂ ಉದಾತ್ತತರವೂ ದಿವ್ಯತರವೂ ಆದ ಪುರುಷತ್ವದಲ್ಲಿ ಆ ದರ್ಶನದ ಸಂಭಾವ್ಯ ಸಾರೂಪ್ಯವನ್ನೂ ಚಿತ್ರಿಸುವುದು. ಅದು ಸ್ಫೂರ್ತಿಸಂಪನ್ನವಾದ ಬುದ್ಧಿ, ಇಂದ್ರಿಯ ಮತ್ತು ನವ್ಯೋಳಗಿನ ಆನಂದರೂಪದ ಆತ್ಮ ಇವುಗಳ ಕಲೆಯೆನಿಸುವುದು. ಈ ಸಂವೃದ್ಧಸ್ಫೂರ್ತ್ಯಾಕರದಿಂದ ಸರ್ವತಂತ್ರ ಸ್ವತಂತ್ರವಾದ ಉತ್ಸಾಹವನ್ನೂ ಪರಮಾನಂದವನ್ನೂ ಅದು ಪಡೆಯುವುದು.

## (೨) ಕಾವ್ಯವು ಸತ್ಯಮಂತ್ರ

ಕಾವ್ಯದ ಅಸಂಖ್ಯ ಲಕ್ಷಣ–ವರ್ಣನೆಗಳ ಪಟ್ಟಿಗೆ ಶ್ರೀ ಅರವಿಂದರು ಮತ್ತೂ ಒಂದನ್ನು ಕೂಡಿಸುತ್ತಾರೆ,—ಅದು ಮಾತ್ರ ಒಂದು ಭಾರತೀಯ ಪ್ರಭಾಮಣಿಯಾಗಿದೆ. ಕಾವ್ಯವೆಂದರೆ ಸತ್ಯದ ಮಂತ್ರ, ಆಧ್ಯಾತ್ಮಿಕ ಮಹಾತತ್ವದ ಅವತಾರ; ಲಯ, ರೀತಿ, ವಿಚಾರಗಳ ಸಾಂದ್ರತೆಯುಳ್ಳ ಶಕ್ತಶಬ್ದದಲ್ಲಿ ಸಮನ್ವಿತವಾಗಿ ಆವಿರ್ಭವಿಸುವ ಆಧ್ಯಾತ್ಮಿಕ ದರ್ಶನ. ಆದುದರಿಂದ ಕಲೆಯೆಂದರೆ ನಿಜದ ನಿಜರೂಪ, ಸಶರೀರ ಆವಿಷ್ಕಾರ. ಹಾಗೆ ಆವಿಷ್ಕರಿಸುವಾಗ ಅದು ತನ್ನ ಶರೀರವನ್ನು ಸಾಧ್ಯವಾದಷ್ಟು ಅತ್ಯುನ್ನತದಶೆಯ ತೀವ್ರತೆ, ಸಾಂದ್ರತೆ, ಸೂಕ್ಷ್ಮತೆಗಳಿಂದ ಉದಾತ್ತೀಕರಿಸಿ ಸಂಸ್ಕರಿಸುತ್ತದೆ. ಬುದ್ಧಿ, ಕಲ್ಪನಾಶಕ್ತಿ, ಕಿವಿ—ಈ ಯಾವುದೂ ಕಾವ್ಯಾನಂದದ ನಿಜವಾದ ಗ್ರಾಹಕ ಇಲ್ಲವೆ ಜನಕ ಎನಿಸಲಾರದು. ಅವು ಕೇವಲ ಅದರ ವಾಹಕಗಳು

ಅಥವಾ ಸಾಧನಗಳು. ಅದರ ನಿಜವಾದ ಜನಕ ಮತ್ತು ಶ್ರಾವಕ ಎಂದರೆ ಆತ್ಮ. ಕಾವ್ಯಾನಂದವು ಬರಿಯ ದೇವಸದೃಶ ವಿರಾಮಲೀಲೆಯಲ್ಲ; ಅದೊಂದು ರೂಪಕವೂ ದ್ಯೋತಕವೂ ಆದ ಸಾಮರ್ಥ್ಯ. ( P. 379, A. Jan. 1918 ). ಕಾವ್ಯದಲ್ಲಿ ಸ್ಥಾಯಿಭಾವವು ('ಆತ್ಮಭಾವವು') ಭಾವಸಾಂದ್ರತೆಯ ಆಕರ, ಭಾವ ತೀವ್ರತೆಯ ಖನಿ. ಲಯ ಮತ್ತು ಶಬ್ದಾರ್ಥಗಳು ಸ್ಥಾಯಿ ( ಆತ್ಮ ) ದರ್ಶನದ ತೂಕವನ್ನು ಬಿಂಬಿಸುವುವು. ಕಲೆಗಾರನ ಪ್ರತಿಭೆಯು ಉತ್ತರೋತ್ತರ ವೃದ್ಧಿಪ್ರಮಾಣದ ಸತ್ಯತೆಯ ಸವಿತ್ರಿಯಲ್ಲದೆ, 'ವಾಸ್ತವಿಕತೆಯ ಇಲ್ಲವೆ ಕಾಲ್ಪನಿಕತೆಯ ಜನನಿಯಲ್ಲ; ಅದು ಪದಾರ್ಥಗಳ (ವಿಷಯಗಳ) ಆಧ್ಯಾತ್ಮಿಕ ಸತ್ಯವನ್ನು ನೋಡುತ್ತದೆ.' ( P. 509. A. March. 1918 ).

ತತ್ತ್ವಜ್ಞಾನಿ-ವಿಜ್ಞಾನಿಗಳಿಂದ ಕವಿ ಭಿನ್ನ ಎಂಬುದೇನೋ ನಿಜವೇ. ವಿಷಯಪ್ರಭೇದಾವಬೋಧ ತತ್ತ್ವಜ್ಞಾನಿಯು, ಮತ್ತು ವಿಷಯವಿಶ್ಲೇಷಣಾನಿರತವಾದ ಪರೀಕ್ಷಾ ವಿಜ್ಞಾನಿಯು, ವಿಶಿಷ್ಟ ಪ್ರತಿಭೆಗಳಾಗಿರುವಂತೆ ಕವಿಗೆ ದರ್ಶನ ಶಕ್ತಿಯೇ ವಿಶಿಷ್ಟಸಾಮರ್ಥ್ಯ, ಅನ್ಯಾದೃಶಪ್ರತಿಭೆ ( P. 566. Arya. April, 1918). ವಿಚಾರಬಲ, ಸಮೃದ್ಧಕಲ್ಪಕತೆ, ಭಾವ-ಆವೇಶಗಳ ಮರ್ಮಸ್ಪರ್ಶಿಯಾದ ವೇಗಗತಿ— ಇವು ಕವಿವಾಣಿಯ ಮುಖ್ಯ ಸಹಾಯಕಗಳು; **ದರ್ಶನ** ಮುಖ್ಯವಾಗಿ ಕವಿ ಪಡೆದ ವರ; ಕವಿವಾಣಿಯ ಪ್ರಧಾನ ಬಲವೆಂದರೆ, ಸಾರಭೂತ ಸಾಮರ್ಥ್ಯವೆಂದರೆ, ನಮ್ಮನ್ನು **ನೋಡುವಂತೆ** ಮಾಡುವುದು. ಕಾವ್ಯದಲ್ಲಿಯ ವಿಚಾರಾಂಶಕ್ಕೆ ಹೆಚ್ಚಿನ ಬೆಲೆಕೊಡುವ ಆಧುನಿಕರ ಬುದ್ಧಿ ತಪ್ಪುದಾರಿ ಹಿಡಿದಿದೆ. ಕಾವ್ಯವೆಂದರೆ ' ಜೀವನದ ಕವಿಸಹಜ ವಿಮರ್ಶೆ ' ಎಂಬ ಆರ್ನಾಲ್ಡರ ಲಕ್ಷಣವಾಕ್ಯದಷ್ಟು ಹಾಸ್ಯಕರವಾದ ಕಾವ್ಯಲಕ್ಷಣ ಇನ್ನೊಂದಿಲ್ಲ. 'ವಿಮರ್ಶೆ'ಗೆ 'ಕವಿಸಹಜ' ಎಂಬ ವಿಶೇಷಣವಿದ್ದರೂ ಅದು ಲಕ್ಷಣದ ದೋಷವನ್ನು ದೂರೀಕರಿಸಲಾರದು. ( ಕಾವ್ಯವಾಣಿ ಅಥವಾ ) **ಮಂತ್ರವು** ತತ್ತ್ವಶಾಸ್ತ್ರಗತ ಸತ್ಯದ ಕವಿಸಹಜ ಘೋಷಣೆಯಲ್ಲ. ಅದು ಲಯಬದ್ಧ ಆವಿಷ್ಕಾರ ಅಥವಾ ಅಭಿವ್ಯಕ್ತಿ; ಆತ್ಮವು ಕಂಡ ದೇವ ಮತ್ತು ನಿಸರ್ಗಗಳ ದರ್ಶನ ಪಡೆದ ಸ್ಫೂರ್ತಸತ್ಯ. ಅದು ' ಅತ್ಯಂತ ಅಂತರ್ಗತವಾದ ಸತ್ಯ; ಅದು ತನ್ನದೇ ಆದ ಲಯಘಟಿತವಾಣಿಯ ಅತ್ಯುನ್ನತ ಶಕ್ತಿಯಿಂದ ಆಚ್ಛಾದಿಸಲ್ಪಟ್ಟಿರುತ್ತದೆ.' ( P. 299. A. Dec. 1919). ಅದು ಸಿದ್ಧಿಸಬೇಕಾದರೆ ಕವಿಯು ಗುಲಾಬಿಯೊಂದರ ಬಣ್ಣದಿಂದ, ಪಾತ್ರವೊಂದರ ಸೌಂದರ್ಯದಿಂದ ಅಥವಾ ಪ್ರಭುಶಕ್ತಿಮತ್ತೆಯಿಂದ, ಕಾರ್ಯವೊಂದರ ವೈಭವದಿಂದ ಆರಂಭಿಸಬಹುದು; ಇಲ್ಲವೆ ಇವುಗಳನ್ನೆಲ್ಲ ಬಿಟ್ಟು ತನ್ನ ಗೂಢಾತ್ಮನು ಅತಿನಿಗೂಢನಾಗಿರುವ ಕಾಲದಲ್ಲಿ ಆತ್ತ ಹರಿಯಬಹುದು. ( P. 574. A. April, 1918). ಒಂದು ಅವಶ್ಯಕ ಉಪಾಧಿಯೆಂದರೆ ದೃಶ್ಯವಿಷಯದ ರೂಪವನ್ನು ಮೀರಿ ಅವನು ಒಳನೋಡಬಲ್ಲವನಿರಬೇಕಲ್ಲದೆ, ಅಷ್ಟಕ್ಕೇ ನಿಂತುಬಿಡಬಾರದು. ದೃಶ್ಯಪದಾರ್ಥವು ತನ್ನ ವ್ಯಂಜಕ ಶಕ್ತಿಯಿಂದ ವ್ಯಕ್ತವಸ್ತುವಿನ ವ್ಯಂಜಕಗಳು ಧಾರಾವಾಹಿಯಾಗಿ ಹರಿದುಬರುವ ತನಕ ಅಥವಾ ಸ್ವತಃ ತಾನೇ ಅಭಿವ್ಯಕ್ತಿಯಲ್ಲಿ ಲೀನವಾಗುವ ವರೆಗೆ ವ್ಯಂಜಿಸಬಲ್ಲ ಮತ್ತು ಹಾಗೆ ವ್ಯಂಜಿಸಿ ಅದರ ಮೇಲೆ ಬೆಳಕಿನ ಹೊನಲನ್ನು ಹರಿಬಿಡುವಾಗ, ಆ ಬೆಳಕಿನ ಗರ್ಭವನ್ನು ಕವಿಯು ಪ್ರವೇಶಿಸಬೇಕು. ಅತ್ಯುನ್ನತಾವಸ್ಥೆಯಲ್ಲಿ ಸ್ವತಃ ಕವಿಯೇ ದರ್ಶನದಲ್ಲಿ 'ಮುಳುಗಿ ಕಾಣದಾಗುವನು; ದ್ರಷ್ಟಾರನ ವ್ಯಕ್ತಿತ್ವವು ದರ್ಶನದ ಶಾಶ್ವತಭಾವದಲ್ಲಿ ಅಡಕಹೊಂದುವುದು; ಮತ್ತು ಸರ್ವದ ಅಥವಾ ಸಾಕಲ್ಯದ ಆತ್ಮವು ಏಕಾಂಗಿಯಾಗಿ ಅಲ್ಲಿ ನಿಂತು ಪ್ರಭುಸಂಮಿತಿಯಿಂದ ತನ್ನ ರಹಸ್ಯಗಳನ್ನು ತಾನೇ ಹೇಳುವಂತೆ ತೋರುತ್ತದೆ.' ( P. 575. A. April, 1918). ಸ್ವದರ್ಶನದಲ್ಲಿ ದ್ರಷ್ಟಾರನು ಅವ್ಯಕ್ತನಾಗಿ, ಅದೃಶ್ಯನಾಗಿ ಹೋಗುವುದು ಎಂಬುದು ತುಂಬ ಅರ್ಥಗರ್ಭಿತವಾದ ಮಾತು. ಅದರ ಬದಲು ಕೀಟ್ಸ್ ತನ್ನೊಂದು ಪತ್ರದಲ್ಲಿ ವರ್ಣಿಸಿರುವಂತೆ ಕವಿಯ ವ್ಯಕ್ತಿತ್ವಾವಚ್ಛೇದಕ ಲಕ್ಷಣವು ನಾಶಹೊಂದುವುದು ಅಥವಾ ಟೀ. ಎಸ್. ಇಲಿಯಟ್ ಹೇಳುವ 'ನಿರ್ವ್ಯಕ್ತೀ

ಕರಣ' ವಾಗುವುದು ಎಂಬ ಮಾತುಗಳನ್ನು ಬಳಸುವುದು ಅಷ್ಟು ಅರ್ಥನಿರ್ಭರವಾದುದಲ್ಲ. ಅರವಿಂದೋಕ್ತವಾದ ಸ್ಥಾಯಿ ದರ್ಶನದಲ್ಲಿಯ ಆತ್ಮಭಾವವು ಒಂದು ದಿವ್ಯಸತ್ಯವಲ್ಲದೆ, ಬರಿಯ ರೂಪಕೋಕ್ತಿಯಲ್ಲ. ವರ್ಡ್ಸ್‌ವರ್ತನ ಕೈಯಿಂದ ಲೇಖನಿಯನ್ನು ಕಸಿದುಕೊಂಡು ಆತನ ಅತಿ ಹೃದಯಸ್ಪರ್ಶಿಯಾದ ಅವತರಣಿಕೆಗಳನ್ನು ನಿಸರ್ಗವು ತಾನೇ ಬರೆದಂತೆ ತೋರುತ್ತದೆ—ಎಂದ ಆರ್ನಾಲ್ಡರ ವಾಕ್ಯದಲ್ಲಿಯ ನಿಸರ್ಗವನ್ನು ಹೋಲುತ್ತದೆ ಆ ಆತ್ಮದರ್ಶನ. ಮಾನವ ಜಗತ್ತಿನಲ್ಲಿ ಮೂಡಿಬರುತ್ತಿರುವ ಸ್ಫೂರ್ತಚೇತನಸ್ಸಿನ ಯುಗವು ತನ್ನ ಅಂತರಂಗವನ್ನು, ಒಳಗಿನೊಳಗನ್ನು, ಆಂತಸ್ತಮರೀತಿಯಿಂದಲೇ ಮಾನವನಿಗೆ ನೋಡಹಚ್ಚುವುದು. ಅದರ ಗುರಿ 'ಲೋಕಾಯತ ದರ್ಶನವೂ ಅಲ್ಲ, ಸ್ಫೂರ್ತಪ್ರಾಣಸಿದ್ಧಿ ದರ್ಶನವೂ ಅಲ್ಲ, ಅಥವಾ ದೂರಸ್ಥವೂ ಪ್ರತ್ಯೇಕವೂ ಆದ ಆಧ್ಯಾತ್ಮಿಕತೆಯೂ ಅಲ್ಲ; ಆದರ ಲಕ್ಷ್ಯವು ಸುಸಂಗತವೂ ಸುದೀಪ್ತವೂ ಆದ ಮಾನವಾಸ್ತಿತ್ವ.'* ( P. 246. A. Nov, 1919 ).

### (೩) ಕಾವ್ಯ-ಕಲೆಗಳ ಪಂಚಸೂರ್ಯರು

ಕಾವ್ಯದ ಸತ್ವಸಾರವು ಸದಾ ಒಂದೇ ಬಗೆಯದಾಗಿರುತ್ತದೆ ಎನ್ನುತ್ತಾರೆ ಶ್ರೀ ಅರವಿಂದರು. ಮಾರ್ಕ್ಸಿಸ್ಟನ ಮತಕ್ಕೆ ಇದು ತೀರ ವ್ಯತಿರಿಕ್ತ. ದ್ರವ್ಯ ಮತ್ತು ಪರಿವರ್ತನ ಎಂಬೆರಡನ್ನು ಅವಲಂಬಿಸುವ ಆತನ ಸಿದ್ಧಾಂತದ ಚಲವಾದಕ್ಕೆ ಶ್ರೀ ಅರವಿಂದರ ಮನದಲ್ಲಿ ಯಾವ ಅವಲಂಬನೀಯ ಅಂಶವೂ ದೊರಕದು. ದರ್ಶನದ ಹೊರಗಟ್ಟು ಹೇಗಿದ್ದರೂ ಕಾವ್ಯದ ಪ್ರಧಾನಶಕ್ತಿ ಇದ್ದ ಹಾಗೇ ಇರುತ್ತದೆ.

'ಜಗತ್ಸೃಷ್ಟ ಸ್ಫೂರ್ತ ಪ್ರತಿಭೆಯಿರಲಿ (ಹೋಮರ್), ಜೀವನದ ಅವಿನಾಶಿತತ್ವವನ್ನವಲಂಬಿಸಿದ ನವೋನ್ಮೇಷಶಾಲಿ ಬುದ್ಧಿಯಿರಲಿ (ಶೇಕ್ಸ್‌ಪಿಯರ್), ಸ್ಫೂರ್ತ ವಿಚಾರ ಶಕ್ತಿಯಿರಲಿ (ಡ್ಯಾಂಟೇ), ರೂಪಾಧಾಯಕವಾದ ಉಚ್ಚಮಟ್ಟದ ಸ್ಫೂರ್ತ ಆಧ್ಯಾತ್ಮಿಕ ದರ್ಶನವಾಗಲಿ ( ಅನುಭಾವಿ ವಿಶ್ವಾಮಿತ್ರನು ಸತ್ವದ ವೈಭವವನ್ನು ಉದ್ಘಾಟಿಸುವುದು) — ಈ ಯಾವ ಬಗೆಯದಾಗಿದ್ದರೂ ಮಹಾಕವಿಪ್ರತಿಭೆಯು ಅಸ್ತಿತ್ವದ ಯಾವದಾದರೊಂದು ಸತ್ಯವನ್ನು ಹಸ್ತಗತ ಮಾಡಿಕೊಳ್ಳುವುದು; ಯಾವುದಾದರೊಂದು ಬಾಳಿನ ಉಸಿರೆಳೆಯನ್ನು ಆತ್ಮದ ಏನಾದರೊಂದು ಶಕ್ತಿಯನ್ನು ಹಿಡಿದು ಬಿಡುವುದು. ಹಾಗೆ ಹಿಡಿದು ಅದನ್ನು ಆ ಪ್ರಾತಿಭ ಚಕ್ಷುಸ್ಸು ಒಂದು ವಿಶಿಷ್ಟ ರೀತಿಯ, ಅತಿ ಶ್ರೇಷ್ಠ ಜಾತಿಯ ಕಾರಕ ಸಾಮರ್ಥ್ಯ ಪ್ರಯೋಗದಿಂದ (ಸುಂದರವಾಗಿ) ರಸಮಯವಾಗಿ ರೂಪಿಸಿ ಆತನಿಗೂ ನಮಗೂ ಆನಂದವನ್ನುಂಟು ಮಾಡುತ್ತದೆ. ( P. 307-8 A. Dec. 1919 ). ಕಾವ್ಯವು ತನ್ನ ಆನುವಂಶಿಕ ವಿತ್ತದ ರಾಜ್ಯದಲ್ಲಿ ಕೊನೆಗೆ ಸಂಪೂರ್ಣವಾಗಿ ಸೇರಿಯೇ ತೀರುವುದು. ಅದರೊಡನೆ, ಅಂದರೆ ಅದರ ಪಂಚಮುಖಗಳಾದ ಸತ್ಯ, ರಸ, (ಸೌಂದರ್ಯ), ಆನಂದ, ಚೈತನ್ಯಶಕ್ತಿ (ಜೀವಚ್ಛಕ್ತಿ) ಮತ್ತು ಆತ್ಮ, ಎಂಬಿವುಗಳೊಡನೆ ಸಮೃದ್ಧ ಸಮನ್ವಯ ಹೊಂದುವುದು.

* cf. 'Beauty is that which has characteristic or individual expressiveness for sense perception or imagination subject to the conditions of general or abstract expressiveness in the same medium.'

2 'ಸತ್ತ್ವೋದ್ರೇಕಾದಖಂಡಃ ಸ್ವಪ್ರಕಾಶಾನಂದ ಚಿನ್ಮಯಃ
ವೇದ್ಯಾಂತರಸ್ಪರ್ಶಶೂನ್ಯೋ ಬ್ರಹ್ಮಾಸ್ವಾದಸಹೋದರಃ ।
ಲೋಕೋತ್ತರ ಚಮತ್ಕಾರ ಪ್ರಾಣಃ ಕೈಶ್ಚಿತ್ ಪ್ರಮಾತೃಭಿಃ
ಸ್ವಾಕಾರವದಭಿನ್ನತ್ವೇನಾಯಮಾಸ್ವಾದ್ಯತೇ ರಸಃ ॥

ಹಳಗಾಲದ ಪರಿಮಿತ ಸತ್ಯವು ನಮಗೆ ಸಾಲದು, ನಮಗದು ಸಮಾಧಾನ ಕೊಡದು. ನಾವು ಇದೀಗ ಭೌತಿಕ ವ್ಯಾಮೋಹದಿಂದ ಮುಕ್ತರಾಗಿ ಆತ್ಮದ ಯಾವುದಾದರೊಂದು ಬಗೆಯ ಪ್ರಬೋಧದಲ್ಲಿ ಮತ್ತು ಮಾನವನ ಆಧ್ಯಾತ್ಮಿಕ ಅಸ್ತಿತ್ವದ ಉದ್ಬೋಧದಲ್ಲಿ ಇನ್ನೂ ಅನುಭವಿಸಿದ ಸತ್ಯವು ದೊರಕುವುದೆಂಬ ಅಂಶವನ್ನು ಅರಿತುಕೊಳ್ಳಲಾರಂಭಿಸಿದ್ದೇವೆ. ಅಥವಾ ಆತ್ಮ ಮತ್ತು ಚೈತನ್ಯಶಕ್ತಿ ( ಜೀವನ ಸಾಮರ್ಥ್ಯ, ಜೀವಚ್ಛಕ್ತಿ ) ಗಳಲ್ಲಿ ವಿರೋಧವಿರಬೇಕಾದ್ದಿಲ್ಲ. ಶ್ರೀ ಅರವಿಂದರೇ ಹೇಳುವಂತೆ, ಆತ್ಮದಲ್ಲಿ ಚೈತನ್ಯ ತುಂಬಿಕೊಂಡಿದೆ, ಏಕೆಂದರೆ ಅದರ ವ್ಯಾಪ್ತಿ ಹೆಚ್ಚಿನದು; ನಾವು ಅತಿ ಬಲಿಷ್ಠರೀತಿಯಿಂದ ಬಾಳುವುದು ಆ ಆತ್ಮವೆಂಬ ಸತ್ಯದಲ್ಲೇ........ ಆತ್ಮದ ಉನ್ನತತರ ಶಕ್ತಿಯಿಂದ ಉನ್ನತತರ ಜೀವನ ಲಭ್ಯವಾಗುತ್ತದೆ. ನಮ್ಮ ಮಿಕ್ಕೆಲ್ಲ ಶಕ್ತಿಗಳಿಗಿಂತ ಕಾವ್ಯ-ಕಲಾಶಕ್ತಿಗಳು ಈ ಸತ್ಯವನ್ನು ಮಾನವನ ಮನಸ್ಸಿಗೆ ಮನದಟ್ಟು ಮಾಡಿಕೊಡುತ್ತವೆ......... ಏಕೆಂದರೆ, ತತ್ವಶಾಸ್ತ್ರವು ಕಾಲ್ಪನಿಕ ತರ್ಕ ಪ್ರವಾಹದಲ್ಲಿ ಮುಳುಗಿ ಹೋದೀತು; ಪೂಜಾಧರ್ಮವು ತದಿತರಾಸಹಮಾನ ಪಾರಲೌಕಿಕತೆಯತ್ತ ತಿರುಗೀತು, ವ್ರತೋಪವಾಸಾದಿ ಕಾಡಾಡಿತನದತ್ತ ಹೊರಳೀತು, ಕಾವ್ಯ-ಕಲೆಗಳು ಮೂರ್ತಾ ಮೂರ್ತ ದ್ರವ್ಯಗಳ ಮತ್ತು ಆತ್ಮ ಜೀವನ ಗಳ ನಡುವಣ ಮಧ್ಯಸ್ಥಿಕೆಗಾರರು.' ( P. 305-6. Arya Dec. 1919 ).

ರಸ ( ಸೌಂದರ್ಯ ) ಮತ್ತು ಆನಂದಗಳನ್ನು ಆದರ್ಶದ ( ಚರಮಧ್ಯೇಯದ ) ಎರಡು ವರ್ಣಸೂರ್ಯರೆಂದು ಶ್ರೀ ಅರವಿಂದರೆನ್ನುತ್ತಾರೆ. ಅವೆರಡು ಮಿಕ್ಕ ಮೂರು ಶಕ್ತಿಗಳ 'ಮಾಧುರ್ಯ, ವರ್ಣ ಮತ್ತು ಜ್ವಾಲೆಗಳ ಹೃದ್ರಸ್ಯವನ್ನೇ' ವಿಶದ ಪಡಿಸುತ್ತವೆ. ಇವಿಲ್ಲದೆ ಆತ್ಮವು ಸಂಪೂರ್ಣ ಅಭಿವ್ಯಕ್ತಿಯನ್ನು, ಹೊಂದಲಾರದು. 'ಆದರೆ ರಸ-ಆನಂದಗಳು ಕಲೆ-ಕಾವ್ಯಗಳ ಆತ್ಮ, ಉದ್ಗಮಸ್ಥಾನ ಎನಿಸಿವೆ. ಮನುಷ್ಯನನ್ನು ಶುದ್ಧಾನಂದದಲ್ಲಿ ಹೊಗಗೊಟ್ಟು ಆ ಮೂಲಕ ಅವನ ಬಾಳಿನಲ್ಲಿ ರಸವನ್ನು ಹರಿಬಿಡುವುದು ಕಲೆ-ಕಾವ್ಯಗಳ ಉದ್ದೇಶ ಮತ್ತು ಆಧ್ಯಾತ್ಮಿಕ ಕರ್ತವ್ಯ. ಮಿಕ್ಕುದ್ದರಲ್ಲಿರುವಂತೆಯೇ ರಸ-ಆನಂದಗಳ ಸಿದ್ಧಿಯಲ್ಲೂ ಸೋಪಾನಿಕ ವರ್ಗಗಳೂ ಬೇರೆ ಬೇರೆ ನೆಲೆಗಳೂ ಇವೆ-ಅಸ್ತು; ಮತ್ತು ಅತ್ಯುಚ್ಚ ರೀತಿಯ ಆನಂದ-ರಸಗಳೆಂದರೆ ಅತ್ಯುನ್ನತ ಸತ್ಯದೊಡನೆ ಸಾತ್ಮ್ಯ ಹೊಂದಿದಂಥವು; ಅತ್ಯುನ್ನತ ಸತ್ಯವೆಂದರೆ ಜೀವನದ ಪರಿಪೂರ್ಣತೆ ಮತ್ತು ಸಾಭಿವ್ಯಂಜಕ ಆತ್ಮದ ಪವಿತ್ರತಮವೂ ಪೂರ್ಣತಮವೂ ಆದ ಉಲ್ಲಾಸ' (P. 306. Arya Dec. 1919).

'ಕಾವ್ಯದ ಭವಿತವ್ಯ' ಎಂಬ ತಮ್ಮ ಪುಸ್ತಕದಲ್ಲಿ ಶ್ರೀ ಅರವಿಂದರು ಬೇರೆ ಬೇರೆ ರಾಷ್ಟ್ರಗಳ ಕಾವ್ಯಪ್ರತಿಭೆಯ ವಿಶ್ಲೇಷಣವನ್ನು ಬಹಳ ಪ್ರಭಾವಿಯಾಗಿ ಮಾಡಿದ್ದಾರೆ. ಹಾಗೆ ಮಾಡುವಾಗ ಅವರು ಆಂಗ್ಲ ಕಾವ್ಯಸ್ರೋತಃಪಥವನ್ನೆತ್ತಿಕೊಂಡು ಬಹಳ ಪ್ರೇಮಾರ್ದ್ರವಾಗಿ ವಿವೇಚಿಸಿದ್ದಾರೆ. ಏಕೆಂದರೆ, ಅದು ಕಾವ್ಯದ ( ಕವಿತೆಯ ) ವಕ್ರರೇಖಾಗತಿಯನ್ನು ಸರಿಯಾಗಿ ಅನುಸರಿಸಿದೆ: ಬಾಹ್ಯದೃಷ್ಟಿಯಿಂದ ಆರಂಭವಾಗಿ ಅನಂತರ ಅಂತರ್ಮುಖವಾಗಿ, ಅಲ್ಲಿಂದ ಅದು ಆಧ್ಯಾತ್ಮಿಕತೆಯತ್ತ ಪ್ರವಹಿಸಿದೆ. ಶ್ರೀ ಅರವಿಂದ ಸಿದ್ಧಾಂತವು ಪ್ರಣಿಧಾನಿಸಿ ನೋಡುವ ಪ್ರಕಾರ ಭೂತ—ಮೂರ್ತ ದ್ರವ್ಯಗಳು ಆತ್ಮರೂಪದತ್ತ ವಿಕಾಸವಾಗುತ್ತ ಹೋಗುವ ಮಹಾರಭಸದಲ್ಲಿ ಕಲೆ-ಕಾವ್ಯಗಳೂ ಸಾಧಿಸತಕ್ಕ ಅಂಶಗಳಿವೆ. ಆಂಗ್ಲ ಕಾವ್ಯವು 'ಕಾವ್ಯ ಪ್ರತಿಭೆಯ ಎದುರಿರುವ ಕ್ಷೇತ್ರವನ್ನು ನಮ್ಮ ವರ್ಧಮಾನ ಪ್ರತ್ಯಕ್ಷಾನುಭೂತಿಯ ನೈಸರ್ಗಿಕ ಆರೋಹಣ ಕ್ರಮದಲ್ಲಿರುವ ಉತ್ತರೋತ್ತರೋನ್ನತ ಸೋಪಾನಗಳನ್ನೇರಿ ಹಾಯ್ದು ವ್ಯಾಪಿಸಿ ನಿಂತಿದೆ. ಅದು ಮೊದಲಾದದ್ದು ತೀರ ಬಾಹ್ಯಸ್ಥವೂ ವ್ಯಕ್ತವೂ ಗಾಢವೂ ಆದ ವಸ್ತು ಮತ್ತು ವಾಣಿಗಳಿಂದ ( ಚಾಸರ್. ಶ್ರೀ ಅರವಿಂದರು ಕೇವಲ ಆಧುನಿಕ ಆಂಗ್ಲ ಕಾವ್ಯಗಳನ್ನು ವಿವೇಚಿಸಿದ್ದಾರೆ. ಆಂಗ್ಲಭೂಮಿಯ ಮೇಲೆ

ವಿವಿಧ ಕುಲಗಳು ಸಾಮರಸ್ಯ ಹೊಂದಿ ಒಂದು ಬಗೆಯ ಆಂಗ್ಲೋ-ಕೆಲ್ಟಿಕ್ ರಾಷ್ಟ್ರೀಯ ಮನೋಧರ್ಮ ನಿರ್ದಿಷ್ಟವಾಗಿ ರೂಪುಗೊಂಡ ಬಳಿಕ ಅವು ಪ್ರಾರಂಭವಾದವು). ಅನಂತರ ಅದು ಇನ್ನೂ ಹೆಚ್ಚು ಅಗಾಧವೂ ಪ್ರಾಣಬಲ ಪೂರ್ಣವೂ ಆದ ಕಾವ್ಯದಶೆಯನ್ನು ಮುಟ್ಟಿತು. ಅದರಲ್ಲಿ ಶಕ್ತಿ, ಸೌಂದರ್ಯ, ಅದ್ಭುತತೆ ಮತ್ತು ಸ್ವಯಂಭೂತವಿಚಾರಗಳೂ ಉಲ್ಲಾಸ, ಉದ್ರೇಕ, ಉದ್ವೇಗಗಳೂ ಜೀವನದ ವರ್ಣಜಾಲ, ಸ್ವರಮಾಲೆಗಳೂ ಕಾಣಿಸಿದವು. ಜೀವನದ ಮತ್ತು ವಿಷಯಗಳ ಬಾಹ್ಯ ಚಿತ್ರಣವನ್ನದು ಎತ್ತಿಕೊಂಡಿತು; ಆದರೆ ಅಷ್ಟಕ್ಕೆ ನಿಲ್ಲದೆ, ಮುನ್ನುಗ್ಗಿ ತನ್ನ ಉತ್ಸಾಹಪೂರ್ಣ ಪ್ರಾತಿಭ ಅರ್ಥಸಿದ್ಧಿಯನ್ನು ಅದು ಸಾಧಿಸಿಕೊಟ್ಟಿತು. ( ಎಲಿಜಬೆತನ್ ಕಾವ್ಯ ಮತ್ತು ನಾಟಕ ). ಅಲ್ಲಿಂದ ಅದು ಲ್ಯಾಟಿನ್ನರ ರಚನಾ ರಹಸ್ಯವನ್ನು ಹಸ್ತಗತ ಮಾಡಿಕೊಳ್ಳಲು ಪ್ರಯತ್ನಿಸುವತ್ತತಿರುಗಿತು. ಅದೆಂದರೆ,– ಜೀವನ, ವಿಷಯ ಮತ್ತು ಭಾವಗಳೊಡನೆ ಸ್ಫುಟವೂ ಪ್ರಮಿತವೂ ಆದ ರೀತಿಯಿಂದ ವ್ಯವಹರಿಸುವುದು. (ಡ್ರೈಡನ್ ಮತ್ತು ಪೋಪ್). ಆ ಬಳಿಕ ನಿಸರ್ಗ, ವಿಚಾರ ಜೀವನ–ನಿಸರ್ಗಗಳಲ್ಲಿಯ ಮನೋಧರ್ಮ, ಮತ್ತು ಅವುಗಳ ಹಿನ್ನೆಲೆಯಲ್ಲಿಯ ಕೆಲ ಆಧ್ಯಾತ್ಮಿಕ ಸತ್ಯಗಳನ್ನು ರಸದೃಷ್ಟಿಯಿಂದ ಸೂಚಿಸುವ ವ್ಯಂಜಕತೆ–ಇವುಗಳೊಳಹೊಕ್ಕು ನೋಡುವ ರಂಜಕವೂ ರಮ್ಯವೂ ಆದ ಪ್ರಯತ್ನ ಮೊದಲಾಯಿತು (ವರ್ಡ್ಸ್‌ವರ್ತ್ ಮತ್ತು ಇತರರು). ಈ ಪ್ರಯತ್ನವು ಸಂಪೂರ್ಣ ಸತ್ವದಶೆಯನ್ನು ಮುಟ್ಟಲಿಲ್ಲ. ಹಾಗಾಗಲು ಯುಕ್ತವಾದ ಬೌದ್ಧಿಕ ಸಿದ್ಧತೆಯಿಲ್ಲದುದು, ಸಾಕಷ್ಟು ಆಧ್ಯಾತ್ಮಿಕ ಜ್ಞಾನ–ಅನುಭವಗಳು ಇಲ್ಲದುದು ಕೆಲಮಟ್ಟಿಗೆ ಕಾರಣವಾಯಿತು. ಆದುದರಿಂದ ಆಂಗ್ಲ ಕಾವ್ಯ ಪ್ರಪಂಚದಲ್ಲಿ ಆ ಮೇಲೆ ನಾವು ಬೌದ್ಧಿಕ ಕಲಾತ್ಮಕ ಅಥವಾ ವಿಚಾರ ಪ್ರಚೋದಕ ಕಾವ್ಯಗಳ ಅಡ್ಡದಾರಿ ಹಿಡಿದು ಹೊಸದೊಂದು ಯುಗಕ್ಕೆ ತಲುಪುವೆವು. ಈ ವಿಚಾರಪ್ರೇರಕ ಕಾವ್ಯಗಳ ಪ್ರಕಾರಗಳು ವಿಸ್ತಾರವಾಗಿದ್ದರೂ ಬೇರಿನಲ್ಲಿ ಗಾಢವೂ ಬೆಳವಣಿಗೆಯಲ್ಲಿ ಕುಬ್ಜವೂ ಆದವು (ವಿಕ್ಟೋರಿಯನ್ ಕಾವ್ಯ). ಅರ್ಧ ಈ ಪ್ರವೃತ್ತಿಯಿಂದಲೂ, ಅರ್ಧ ಅದರಿಂದ ಹಿಂದಿರುಗುವ ಪ್ರವೃತ್ತಿಯಿಂದಲೂ ಇತ್ತೀಚಿನ ಮತ್ತು ಸಮಕಾಲೀನ ಕಾವ್ಯಗಳು ಆರಂಭವಾದವು. ಅಂತೂ ಕಟ್ಟಕಡೆಗೆ ಇವು ಪದವಿನ್ಯಾಸ, ಲಯಗತಿಗಳ ಸಮರ್ಪಕವಾದ ಮೋಡಿಯಿಂದ ಕೂಡಿದ ಗಭೀರತರ ಸತ್ಯದ ಪ್ರಕಾಶನದ ರಹಸ್ಯವನ್ನು ಸಮೀಪಿಸುವಂತೆ ತೋರುತ್ತದೆ.' ( P. 57–58. Arya. August, 1918 ). ಇದು ಸ್ಫೂರ್ತಚೇತಸ್ಸಿನ ಯುಗ; ಮೆರಿಡಿತ್, ಯೀಟ್ಸ್, ಟಾಗೋರ್, ವಿಟ್‌ಮನ್ ಮತ್ತು ಕಾರ್ಪೆಂಟರರ ಕಾವ್ಯಗಳಲ್ಲಿ ಇದು ತನ್ನ ಉಷಃಕಾಲವನ್ನಾರಂಭಿಸಿತು.

ಆದುದರಿಂದ ಕಾವ್ಯ ಮತ್ತು ಕಲೆಗಳು ಪ್ರಗತಿಯ ಗುರುತುಗಳಾಗಿವೆ. ಅವುಗಳ ಮೂಲಕ ಮನುಕುಲದ ಆತ್ಮವು ಪ್ರಭಾನಿರ್ಭರ ಪಂಚಸೂರ್ಯರ ಪ್ರಕಾಶವನ್ನು ಸಂಪೂರ್ಣವಾಗಿ ಸೆರೆಹಿಡಿಯಲು ತೀರ್ಥಯಾತ್ರೆಗೆ ಹೊರಟಿದೆ ಎನ್ನಬಹುದು. ಈ ದೈವತಗಳಿಗೆ ಬೇರೆ ಬೇರೆ ಹೆಸರುಗಳು ಬೇಕಾಗಿವೆ. ಅನಂತರದಲ್ಲಿ ಶ್ರೀ ಅರವಿಂದರು ಕಾವ್ಯಸತ್ಯದ **ಸೂರ್ಯ,** ರಸ–ಆನಂದಗಳ **ಚಂದ್ರ,** ಜೀವದ ಉಸಿರಿನ **ವಾಯು** ಮತ್ತು ಆತ್ಮದ ಬಲ ಅಥವಾ **ಶಕ್ತಿ**ಗಳ ಬಗ್ಗೆ ಬರೆದಿದ್ದಾರೆ. ಅವುಗಳ ಪರಮಸಮನ್ವಯವೇ ನಮಗೆ ಅನನ್ಯಪರತಂತ್ರ ಕಾವ್ಯವಾಣಿಯನ್ನು, ಕಲಾಪರಿಪೂರ್ಣತೆಯನ್ನು ಸಾಧಿಸಿಕೊಡತಕ್ಕದ್ದಾಗಿದೆ.

### (೪) ಸೂರ್ಯರ ಸುತ್ತಲಿನ ಗ್ರಹಗಳು

ಶ್ರೀ ಅರವಿಂದರು ಹಿಡಿದು ತಮ್ಮ ಕಲಾಸಿದ್ಧಾಂತದ ಪುರೋಭಾಗದಲ್ಲಿಟ್ಟ ಈ ಭಾಸ್ವತ್ಪಂಚಕವು ನನ್ನ ದೃಷ್ಟಿಯಲ್ಲಿ ಒಂದು ದೊಡ್ಡ ಬಂಧವಿಮೋಚಕ ಸತ್ಯವೇ ಸರಿ. ಈ ಸತ್ಯಲೋಕದಿಂದ ಹರಿದಿಳಿಯುವ ಪಂಚನದಿಗಳು ಕಲೆ–ಜೀವನಗಳ ಇಡಿ ಕಣಿವೆಯನ್ನು ಫಲವತ್ತಾಗಿ ಮಾಡುವುವು. ಈ ಅನುಭಾವಜನ್ಯವಾದ

ಸೂತ್ರಗಳನ್ನಿಲ್ಲಿ ವಿಶದಪಡಿಸಬಹುದು; ಏಕೆಂದರೆ, ಅವು ಆ ಪ್ರತ್ಯಕ್ಷದ ಸಾಂಕಲನಿಕ ವ್ಯಾಪ್ತಿಯನ್ನು ನಿರ್ದೇಶಿಸುತ್ತವೆ.

ಆದರ್ಶಫಲಕಸ್ಥ ಪಂಚಶಕ್ತಿಗಳ ಜ್ಯೋತಿಯಲ್ಲೇ ಕಲಾಸೃಷ್ಟಿ ಪ್ರಾರಂಭವಾಗುತ್ತದೆ. ಎಷ್ಟೇ ಅಸಂಪೂರ್ಣವಾಗಿಯಾಗಲಿ, ಈ ದೈವತಗಳ ಪ್ರೇರಣೆಯನ್ನು ಅನುಭವಿಸದ ಕಲಾಕಾರ್ಯವೇ ಇಲ್ಲ. ದ್ರಷ್ಟಾರ, ದೃಶ್ಯವಿಷಯ, ರಸನಿಷ್ಪತ್ತಿವಿಧಾನ, ಕಲಾಕೃತಿ ಮತ್ತು ರಸಿಕಮನದಲ್ಲಿ ಅದು ಆಧ್ಯಾತ್ಮಿಕರೂಪಕ್ಕೆ ಪರಿವೃತ್ತವಾಗುವುದು–ಈಯೆಲ್ಲವೂ ಸ್ವಕಾರ್ಯಕ್ಷೇತ್ರದ ಪರಿಮಿತಿಯೊಳಗೆ ಆ ಪಂಚಶಕ್ತಿಗಳು ಕಾರ್ಯಪ್ರವೃತ್ತವಾಗಿರುವುದನ್ನು ಹೊರಗೆಡಹುತ್ತವೆ.

ರಸ್ಯಮಾನವಸ್ತುವು ತನ್ನ ಚಿದವಸ್ಥೆಯಲ್ಲಿ ನಿಜವಾಗಿಯೂ ಅಪ್ರಮೇಯ ವಸ್ತುವಿನ ಪ್ರಮಿತ ಅಭಿವ್ಯಕ್ತಿ. ಅದು ಆತ್ಮದ ಅಥವಾ ಚೈತನ್ಯ ಜೀವನಗಳ ಒಟ್ಟಿನ ಅಭಿವ್ಯಕ್ತಿ. ತನ್ನ ಕಾರಣಮಯ ಸ್ವರೂಪದಲ್ಲಿ ಅದು ಸ್ವತ್ವವನ್ನು ಕಳೆದುಕೊಳ್ಳದೆ ವಿಶ್ವಸತ್ಯದ (ಅಥವಾ ಪರಮಾರ್ಥದ) ಅಂಗವಾಗಿ ಅನುಭವಕ್ಕೆ ಬರುತ್ತದೆ. ಪರಮಸತ್ಯದ ಮೂರ್ತರೂಪವಾಗಿ ಅದು ಗೋಚರಕ್ಕೆ ಬರುತ್ತದೆ. ತನ್ನ ಸೂಕ್ಷ್ಮರೂಪದಲ್ಲಿ ಅದಕ್ಕೆ ತನ್ನದೇ ಆದ ಒಂದು ಜೀವದಾತ್ಮವಿರುತ್ತವೆ ಅಥವಾ ಅದು ಕಲೆಗಾರನ ಪ್ರಾಣಸ್ಥಾನೀಯವಾದ ಸ್ಮೃತಿ ಮತ್ತು ಭಾವತರಂಗಗಳೊಡನೆ ಅವ್ಯವಚ್ಛೇದ್ಯವಾಗಿ ಹೆಣೆದುಕೊಂಡಿರುತ್ತದೆ. ನೇರವಾಗಿ ಅಥವಾ ಕಲೆಗಾರನ ಮೂಲಕ ಅದಕ್ಕೆ ಜೀವಸಹಜ ಪ್ರಾಣಶಕ್ತಿ ಲಭಿಸುತ್ತದೆ. ಅದು ಸೌಂದರ್ಯದ (ರಸದ) ಒಂದು ಅಂಶವಾಗಿಯೂ ಪ್ರಕಟವಾಗುತ್ತದೆ. ಹಾಗೆ ಪ್ರಕಟವಾದಾಗ ಅದು ಪ್ರಣಿಧಾನದಲ್ಲಿ ಮತ್ತಷ್ಟು ಸುಂದರವಾಗುತ್ತದೆ, ರಸ್ಯಮಾನವಾಗುತ್ತದೆ. ಅದಕ್ಕೆ ಆನಂದವನ್ನುಂಟುಮಾಡಲು, ಭಾವವನ್ನು ಉದ್ರೇಚಿಸಲು ಬರುತ್ತದೆ; ಎಷ್ಟಾದರೂ ರಮಣೀಯಾರ್ಥವು ಯಾವಾಗಲೂ ಆನಂದಾವಹನಲ್ಲವೇ? ತನ್ನ ಸ್ಥೂಲರೂಪದಲ್ಲಿ ಅದು ಇಬ್ಬಗೆಯಿಂದ ಹೃದಯವನ್ನು ಆಕರ್ಷಿಸುತ್ತದೆ. ಅಸ್ತಿತ್ವದ ಸತ್ಯತೆಯೊಂದೆಡೆಯಿವೆ, ವಿಶ್ವದಲ್ಲಿ ಪರಿಮಿತ ಸ್ಥಾನ, ನಿರ್ದಿಷ್ಟಮಾನ ಅದಕ್ಕಿದೆ: ಅಸ್ತಿತ್ವರೂಪದಲ್ಲಿ ಅದರ ಜೀವನ ನಮ್ಮ ಇಂದ್ರಿಯಗ್ರಾಹ್ಯವಿಷಯವಾಗಿದೆ. ಜೊತೆಗೆ ಬುದ್ಧಿಗ್ರಾಹ್ಯವೂ ಪರಮಾರ್ಥವನ್ನು ಅದರ ಅನುತ್ಕೃಷ್ಟರೂಪದಲ್ಲಿ ವ್ಯಕ್ತಪಡಿಸಬಲ್ಲುದೂ ಆದ ಗುಣವೂ ವೈಲಕ್ಷಣ್ಯವೂ ಆದರ್ಶನೀಯ ವಸ್ತುವಿಗಿದೆ.

ಸಾಮಾನ್ಯರ ಹೃದಯಕ್ಕೆ ಗೋಚರವಾಗುವುದು ಶ್ರವ್ಯ–ದೃಶ್ಯವಿಷಯದ ಸ್ಥೂಲಸ್ವರೂಪ ಮಾತ್ರ: ಅವರ ತಿಳಿವು ಮೂಲಪ್ರವೃತ್ತಿ ಸಹಜವೂ ಬೌದ್ಧಿಕವೂ ಆಗಿರುತ್ತದೆ. ಕಲೆಗಾರನ ಜೀವದಾತ್ಮವು (ಜೀವಾತ್ಮವು) ರಾಗ–ದ್ವೇಷ, ಸುಖ–ದುಃಖಗಳಲ್ಲಿ ಸಾಮರಸ್ಯ ಹೊಂದಲು ಕರಗುವ ಪ್ರಮಾಣವಾದರೂ ಮಧ್ಯಮವೇ. ಆದರೆ ಕಲೆಗಾರನ ಗ್ರಹಣಶಕ್ತಿಗೆ ಅದು ಹೆಚ್ಚಿನ ಪ್ರಮಾಣದಲ್ಲಿರುತ್ತದೆ. ಅವನಲ್ಲಿರುವ ಉಚ್ಚತರ ಪ್ರಾಣಶಕ್ತಿಯು ವಿಷಯದ ಸಾರಭೂತ ಸೌಂದರ್ಯವನ್ನು (ಕಾವ್ಯಾರ್ಥವನ್ನು, ರಸನೀಯಾರ್ಥವನ್ನು) ಈಷನ್ಮಾತ್ರವಾದರೂ ಕಂಡು ಆ ಮೂಲಕ ಆನಂದೋದ್ರೇಕ ಹೊಂದುವುದು. ಅವನ 'ಜ್ಞಾನಬುದ್ಧಿ' ಅಥವಾ ವರ್ಡ್ಸ್‌ವರ್ತನೆನ್ನುವ 'ಉದಾತ್ತಭಾವಕ್ಕೇರಿದ ವಿಚಾರಶಕ್ತಿಯು' ವಿಷಯದ ಸಾರವನ್ನು ಅಥವಾ ಅದರ ಹಿಂದೂ ಒಳಗೂ ಇರುವ ಕಾರಣರೂಪವನ್ನು ಗ್ರಹಿಸಲು ಶಕ್ತವಾಗುತ್ತದೆ, ಆತ್ಮವು (ಪರಮಾತ್ಮವು) ತನ್ನ ಮಾಯಾವರಣದೊಳಗೆ ಪ್ರಜ್ವಲಿಸುವುದನ್ನು ಅವನು ತನ್ನ ಅತಿಚೇತನ ದರ್ಶನಶಕ್ತಿಯಿಂದ ನೋಡುತ್ತಾನೆ. ಅವನಿಗಾಗ ಅಪ್ರಮೇಯಪದಾರ್ಥವು ಕರತಲಾಮಲಕವಾಗುತ್ತದೆ. ಅನಂತ ಕಾಲವು ಗಂಟೆಯೊಳಗೆ ಗೃಹೀತವಾಗುತ್ತದೆ. ಹೀಗೆ ಕಲೆಗಾರನ ಅನುಭವವು ಮಿಶ್ರಜಾತಿಯ ಮತ್ತು ಸಮಗತಿಯ

ಚಟುವಟಿಕೆ ಎನಿಸುತ್ತದೆ. ಅದರ ರಚನಾಸ್ವರೂಪವು ಪೂರ್ವೋಕ್ತ ಪಂಚಶಕ್ತಿಗಳು ಕಾರ್ಯ್ಯಾಸಕ್ತಸ್ಥಿತಿಯಲ್ಲಿರುವುದನ್ನು ಹೊರಗೆಡಹುತ್ತದೆ.

ಕಲೆಗಾರಿಕೆಯ ಚಟುವಟಿಕೆಯತ್ತ ಹೊರಳಿದರೆ, ಕಲೆಗಾರನ ಕಾರ್ಯವು ಪಂಚ ಅಂಗಗಳನ್ನು ಪ್ರದರ್ಶಿಸುತ್ತದೆ: ಸ್ಫುರಣ, ಅನುಕರಣ, ಅಭಿವ್ಯಂಜನ, ಅರ್ಥೋಪಜಾಪ ಮತ್ತು ಕಾಂತೋಪದೇಶ, ಈ ವಿಧಾನದಲ್ಲಿ ಹೊಕ್ಕುಹೊರಡುವ ಕಲಾನುಭವವು ಕಲಾಕೃತಿಯಾಗಿ ರೂಪಾಂತರಿಸಲ್ಪಡುತ್ತದೆ. ವಿಷಯದೊಡನೆ ಸಹೃದಯತೆಯಲ್ಲಿರುವಾಗ (ತಲ್ಲೀನತೆಯಲ್ಲಿರುವಾಗ, ತಾದಾತ್ಮ್ಯಭಾವದಲ್ಲಿರುವಾಗ) ಸಹಜಪ್ರತ್ಯಕ್ಷದ ವಿದ್ಯುದುನ್ಮೇಷದಿಂದ ಕಲೆಯು ಸ್ಫೂರ್ತಿರೂಪದಲ್ಲಿ ಉದ್ಭವಿಸುತ್ತದೆ. ಅನಂತರ ಆ ಬೀಜಭಾವವು ಕಲೆಗಾರನ ವಿಷಯಾನುಸಾರ ಪ್ರತ್ಯಕ್ಷಜ್ಞಾನದ ಉಣಿಸಿನಿಂದ ಮೊಳೆತು ಅನುಕೃತಿಯಾಗಿ ಬೆಳೆಯುತ್ತದೆ. ಬಳಿಕ ಅದು ಚಿಗಿತು ಅಭಿವ್ಯಕ್ತಿರೂಪದ ಹೂವಾಗಿ ಅರಳುತ್ತದೆ,—ಇಲ್ಲಿ ಕಲೆಗಾರನು ವಿಷಯ ಸಹೃದಯತೆಯಿಂದ ಉದ್ಭವಿಸಿದ ಭಾವನೆಗಳ ಸೌಂದರ್ಯದಲ್ಲೂ ಸ್ವಕೀಯ ಆನಂದೋನ್ಮಾದಮಯ ಪ್ರಣಿಧಾನ ಜನ್ಯ ಪ್ರಶಾಂತಾತ್ಮಿಕೆಯಲ್ಲೂ ರಮಿಸುತ್ತಾನೆ, ಇದರ ಮುಂದಿನದೆಲ್ಲ ಕಲೆಗಾರನು ಕಸಬುದಾರನಾಗಿ ಮಾಡತಕ್ಕ ಅಂಶಗಳು. ಹುಟ್ಟು ರಸೋಪಾಸಕನಾದ ಆತನು ತನ್ನ ದರ್ಶನವನ್ನು ಪ್ರಕಟಪಡಿಸಬೇಕೆಂಬ ಸಹಜ ಪ್ರವೃತ್ತಿಯಿಂದ ಸ್ವಕೀಯ ಮಾಧ್ಯಮವನ್ನು (ಅರ್ಥವಾಹಕವನ್ನು) ರಸ್ಯವಸ್ತುವನ್ನಾಗಿ ರೂಪಿಸುತ್ತಾನೆ, ಸುಂದರವಾಗಿ ಮಾರ್ಪಡಿಸುತ್ತಾನೆ,—ಸ್ವದರ್ಶನವನ್ನು ಗರ್ಭೀಕರಿಸಿಕೊಂಬ ಉಚಿತಪಾತ್ರವನ್ನಾಗಿ ಮಾಡುತ್ತಾನೆ. ಹಾಗೆ ಅದನ್ನು ಮಾರ್ಪಡಿಸಲು ಅವನು ತನ್ನ ಪ್ರತಿಭೆ-ಸ್ಮೃತಿಗಳೆಂಬ ಆಂತರಿಕ ಸಾಧನಗಳನ್ನು ಬಳಸಿಕೊಳ್ಳುತ್ತಾನೆ. ಪ್ರತಿಭೆಯು (ಕಲ್ಪನಾ ಶಕ್ತಿಯು) ಅಸದೃಶ ವಸ್ತುಗಳಲ್ಲಿಯ ಸಾದೃಶ್ಯವನ್ನು ಕಾಣಬಲ್ಲುದು ಮತ್ತು ಹಾಗೆ ಕಾಣಲು ನೆರವಾಗುವಂತೆ ಸ್ಮೃತಿಶಕ್ತಿಯು ಸಾಲುಸಾಲಾಗಿ ನೆನಹುಗಳನ್ನೂ ಮಾನಸಿಕ ಪ್ರತಿಕೃತಿಗಳನ್ನೂ ತಂದೊದಗಿಸುತ್ತದೆ. ಅವನ ಭಾವನಾ ವಿವೇಕಶಕ್ತಿಯು ಭವಿತವ್ಯ ಕಲಾಕೃತಿಯ ಕರಡು ಕೊರಡಿಗೆ ಬಣ್ಣವಿಡುತ್ತದೆ ಮತ್ತು ಭಾವತೀವ್ರತೆಯನ್ನೊದವಿಸುತ್ತದೆ. ಒಂದು ಕಾದಂಬರಿ, ರೂಪಕ (ನಾಟಕ) ಅಥವಾ ಚಿತ್ರ ನಿರ್ಮಿತಿಯಲ್ಲಿ ತೊಡಗಿದಾಗ ವಸ್ತುವಿನ ಕೆಲ ವಾಸ್ತವಿಕ ಅಂಶಗಳನ್ನು ಅನುಕರಿಸುವಂತೆ, ಅವನ ವ್ಯಾವಹಾರಿಕ ದೃಷ್ಟಿಯು ಅನುಕರಣವನ್ನು ಅದರ ಗೌಣದಶೆಯಲ್ಲಿ ಉಳಿಸಿ ಬೆಳೆಸುತ್ತದೆ; ಅವನು ಕೃತಿರಚನೆಯಲ್ಲಿ ಅದರ ನೆರವನ್ನು ಪಡೆಯುತ್ತಾನೆ. ಕಾಂತೋಪದೇಶದ (ಕಾಂತಾಸಂಮಿತಿಯ) ಸ್ಥಿತಿಯನ್ನು ಮುಟ್ಟಿದಾಗಲೇ ಕಲೆಯು ನಿಜವಾಗಿ ಕಲೆಯೆನಿಸುತ್ತದೆ, ಸಾರ್ಥಕತೆ ಪಡೆಯುತ್ತದೆ—ಆಗ ಕಲೆಗಾರನು ತನ್ನ ತಾರತಮ್ಯ ವಿವೇಕದಿಂದ, ಸದಸದ್ವಿವೇಚನೆಯಿಂದ ತನ್ನದರ್ಶನಕ್ಕೆ ಉಚಿತವಾದ ಬೌದ್ಧಿಕ ಶರೀರವನ್ನು ಕೊಟ್ಟಿರುತ್ತಾನೆ. ಅದು ಪುನಃ ಪರಮಾರ್ಥದ ಅನುತ್ಕೃಷ್ಟದಶೆ—ಅದಕ್ಕೆ ಯುಕ್ತವಾದ ಸಮತೋಲ, ಸಮಪ್ರಮಾಣ, ಸಾಮಂಜಸ್ಯ ಅವನಿಂದ ದೊರಕಿರುತ್ತದೆ. ಈ ಕೊನೆಯ ಅವಸ್ಥೆಯಲ್ಲಿ ಹೊಕ್ಕು ಹೊರಟ ಬಳಿಕ ಕಲೆಯು ತನ್ನ ಸಂಕುಚಿತತೆಗಳನ್ನೂ ಅಸ್ವಾಭಾವಿಕ ಅಪಲಕ್ಷಣಗಳನ್ನೂ ಕಳೆದುಕೊಂಡು, ಬೀಜಭಾವದ ಅಥವಾ ಸ್ಫೂರ್ತವಾದ ಮೂಲ ಸ್ಥಾಯಿಯ ಸಮುಚಿತವೂ ಪ್ರಭಾವಯುತವೂ ಆದ ಮೂರ್ತಿಯಾಗಿ ಕಂಗೊಳಿಸುತ್ತದೆ. ಆಗ ಅದು ಸಫಲತೆವೆತ್ತು ಕಾಲದ ಅಂಗಡಿಯಲ್ಲಿ ತನಗೆ ನಿರ್ದಿಷ್ಟ ಬೆಲೆಯಿದೆ ಎಂದು ಮುಸ್ಸಿಲ್ಲುತ್ತದೆ.

ಹೊರಗಿನಿಂದ ನೋಡಿದರೆ, ಸಂಪೂರ್ಣವಾದ, ಸರ್ವಾಂಗ ಸಮನ್ವಿತವಾದ *ಕಲಾಕೃತಿಯು ತನ್ನೊಳಗಣಿಂದ ಧ್ವನಿ, ರಸ, ಭಾವ, ಅಲಂಕಾರ, ಔಚಿತ್ಯಗಳೆಂಬ ಐದು ಶಕ್ತಿಗಳ ಫಲಿತಾಂಶಗಳನ್ನು ಪ್ರಕಟಿಸುತ್ತದೆ ಎಂದು ತಿಳಿದುಬರುತ್ತದೆ. ಈ ಐದು ಕಲಾಕೃತಿಯ ಪಂಚಾಂಗಗಳು, ಪಂಚಾವಯವಗಳು, ಪಂಚಾಸ್ಯಗಳು. ಧ್ವನಿಯನ್ನು ಕಾವ್ಯದ ಅಥವಾ ಕಲೆಯ ಆತ್ಮವೆಂದು ಕರೆಯಲಾಗಿದೆ. ಆದರೆ ಧ್ವನಿಯ ಆತ್ಮ ಯಾವುದೆಂದು ಕೇಳಿದರೆ, ಪರಮಾತ್ಮ ಪರತತ್ವ, ವಿಶ್ವವ್ಯಾಪಿಸತ್ಯ ಎಂದೇ ಹೇಳಬೇಕಾಗುತ್ತದೆ. ರಸ ಅಥವಾ ಸೌಂದರ್ಯಾಸ್ವಾದವು (ರಸ್ಯರುಚಿಮತ್ಪದಾರ್ಥವು) ಕಲಾಕೃತಿಯ ಸಾರ; ಅದು ಮಾನವ ವ್ಯಕ್ತಿತ್ವದ ಸ್ಥಾಯಿಭಾವವನ್ನು ವಿಭಾವಾನುಭಾವ ವ್ಯಭಿಚಾರಿಭಾವಗಳೊಡನೆ ಬೆರೆಸಿ‡ ಪಾಕಮಾಡಿ ತಯಾರಿಸಿದ್ದು. (ಸಂಚಾರಿ ಅಥವಾ) ವ್ಯಭಿಚಾರಿಯಾದ, ಅಂದರೆ ವೈಯಕ್ತಿಕವಾದ, ಒಂದು ಭಾವವನ್ನು (ವಿಷಯವನ್ನು) †ಸಹೃದಯೀಕರಣ ಇಲ್ಲವೆ ವ್ಯಾಪ್ತಿವಿಸ್ತರಣ ಮಾಡಿದ್ದರಿಂದ ಅದು ಲಭ್ಯವಾಗದ್ದು, ಆದರ್ಶದ ಮಟ್ಟಕ್ಕೇರಿಸಿ ಸರ್ವತ್ರವ್ಯಾಪಕ ಸ್ಥಿತಿಗೆ ಒಯ್ದು ಮುಟ್ಟಿಸಿದ್ದರಿಂದ ಸಿದ್ಧಿಸಿದ್ದು; ಅರ್ಥಾತ್ ಅದರ ಕಾರಣಸ್ವರೂಪದಲ್ಲಿ ಗ್ರಹಿಸಿದ್ದರಿಂದ ಉದ್ಭವಿಸಿದ್ದು. ಕಲೆಗಾರನ ವ್ಯಾವಹಾರಿಕ ದೃಷ್ಟಿಯಿಂದ ಹೊರಟ ಅಪಕ್ವಸ್ವಾರ್ಥ ಬೋಧ್ಯವಾದ ಜೀವನದ ಪ್ರತಿಕರಣ ಅಥವಾ ಅನುಕರಣ ಎಂಬುದು ರಸದ ಗೌಣಕರ್ತವ್ಯ. ಭಾವವೆಂದರೆ ಕಲೆಗಾರನ ಮನೋಭಾವಜನ್ಯವಾದ ಭಾವನೆಗಳ ಉತ್ತರೋತ್ತರೋತ್ಕರ್ಷ ಕ್ರಮಗತಿಯ ಸಂಪೂರ್ಣ ಆವಿಷ್ಕಾರ. ಅಲಂಕಾರವೆಂದರೆ ರೂಪ, ಆಕೃತಿ. ಉಕ್ತಿ ಅಥವಾ ಅಭಿವಚನ, ರೀತಿ ಅಥವಾ ಬಗೆ, ಗುಣ ಅಥವಾ ಕಲಾಸಹಜವೈಶಿಷ್ಟ್ಯ ಎಂದಾಗಲಿ, ಅಲಂಕಾರಗಳು ಇಲ್ಲವೆ ಮಾತಿನಲ್ಲಿ ಮತ್ತು ವಿಚಾರದಲ್ಲಿ ಬಳಸುವ ರೂಪಕಾದಿ ಭಣಿತಿ ವೈಚಿತ್ರ್ಯಗಳು ಎಂದಾಗಲಿ ಅದನ್ನು ತಿಳಿಯಬಹುದು. ಕಲೆಗಾರನ ಪ್ರತಿಭೆ, ವಿಚಾರಶಕ್ತಿ ಮತ್ತು ಸ್ಮೃತಿಶಕ್ತಿಗಳು ಅದನ್ನು ರೂಪಿಸುತ್ತವೆ. ಹಿಂದೆಯೇ ವಿವರಿಸಿದಂತೆ ಔಚಿತ್ಯ ಅಥವಾ ಸಾಮಂಜಸ್ಯ ಎಂಬುದು ಕಲೆಗಾರನ ಸದ್ಬುದ್ಧಿ ಅಥವಾ ಸದಸದ್ವಿವೇಕ ಬುದ್ಧಿಯಿಂದ ಹುಟ್ಟುತ್ತದೆ. ಅದು ಅತ್ಯುನ್ನತಾರ್ಥದಲ್ಲಿ ಗಣಿಸಬಹುದಾದ ಕಾಂತೋಪದೇಶ (ಕಾಂತಾಸಂಮಿತ) ಎಂದೆನಿಸುತ್ತದೆ.

ಇನ್ನೊಂದು ದೃಷ್ಟಿಯಿಂದ ನೋಡಿದರೆ, -- ಒಂದು ಕಲಾಕೃತಿಯೆಂದರೆ, ಕ್ರಮೇಣ ಸೂಕ್ಷ್ಮ ಸೂಕ್ಷ್ಮತರವಾಗುತ್ತ ಹೋಗಿ ಸ್ವರೂಪನಾಶ ಹೊಂದಿ, ಪರಸತ್ವದ ಅಂತಃಸತ್ವದೆದುರು ನಮ್ಮನ್ನು ಒಯ್ದು

* *cf*: 'The realisation of *Rasa* (Beauty), Abhinavagupta maintains results from its *Abhivyakti* or manifestation by the power of suggestion (Dhvani), and consists of a state of relish known as *Rasana*, *Asvada* or *Charvana*. What is manifested is not the *Rasa* itself, but its relish: not the mood itself but its reflection in the form of subjective condition of aesthetic enjoyment in the reader. This state is *Alaukika* (or suprarational).'

‡ 'ವಿಭಾವಾನುಭಾವವ್ಯಭಿಚಾರಿಸಂಯೋಗಾದ್ರಸನಿಷ್ಪತ್ತಿಃ | ಉದ್ಬುದ್ಧಸ್ಥಾಯೀರಸಃ | ವಾಗಂಗಸತ್ವೋಪೇತಾನ್ ಕಾವ್ಯಾರ್ಥಾನ್ ಭಾವಯಂತೀತಿ ಭಾವಾಃ | ವಿಭಾವೋ ನಾಮ ವಿಜ್ಞಾನಾರ್ಥಃ; ವಿಭಾವ್ಯಂತೇಽನೇನ ವಾಗಂಗಸತ್ವಾಭಿನಯಾ ಇತ್ಯತೋ ವಿಭಾವಃ | ಸಹಿ ರಸಾದ್ಯತೇ ಕಶ್ಚಿದರ್ಥಃ ಪ್ರವರ್ತತೇ | ವಿವಿಧಮಾಭಿಮುಖ್ಯೇನ ರಸಂ ಚರಂತೀತಿ ವ್ಯಭಿಚಾರಿ ಭಾವಾಃ'॥

‡ ಪ್ರಪಾಣಕ ರಸನ್ಯಾಯಾತ್ ಚರ್ವ್ಯಮಾಣೋ ರಸೋ ಭವೇತ್.

† 'The projection into the art-object of our own subjective striving self.'

ನಿಲ್ಲಿಸುವ ಪರಮಾರ್ಥ ಸ್ವಪ್ನ ಎಂದು ಹೇಳಬಹುದು. ಕಲಾಕೃತಿಯು ತನ್ನ ರೂಪ ಮತ್ತು ತದಂತರ್ಗತ ಪದಾರ್ಥಗಳ ಮಧುರ ವಿಚಾರಶುದ್ಧತೆಯಿಂದ ನಮ್ಮನ್ನು ತೃಪ್ತಿಬಡಿಸುತ್ತದೆ. ಒಪ್ಪಿಗೆಯಾಗುವಂತೆ ಉಚಿತವಾಗಿ ಕಲೆಗಾರನ ದರ್ಶನವನ್ನು ನಮ್ಮೆದುರಿಟ್ಟು ಅದು ಸ್ವೀಕಾರ ಮಾಡಲು ನಮಗೆ ಸಾಗ್ರಹೋಪದೇಶ ಮಾಡುತ್ತದೆ, ಕಾಂತಾನುನಯವನ್ನು ಪ್ರಯೋಗಿಸುತ್ತದೆ. ಆದರೆ ಔಚಿತ್ಯವು ಮುಖ್ಯವಾಗಿ ಕಲಾಕೃತಿಯ ಗುಣಗಳನ್ನು ಇಲ್ಲವೆ ವಿಶಿಷ್ಟ ಉತ್ಕರ್ಷಾಂಶಗಳನ್ನು ಸ್ವರೂಪಾವಿಷ್ಕಾರಕ ರೀತಿಯಿಂದ ನಿರರ್ಗಳವಾಗಿ ಹೊರಗೆಡುವ ಕೆಲಸ ಮಾಡುತ್ತದೆ. ಸ್ವತಃ ಕಲಾಕೃತಿಯು ಸ್ವಾಭಿವ್ಯಕ್ತಿ ಸೌಂದರ್ಯದಿಂದಲೂ ಗುಣೋಕ್ತಿ ರೀತಿಗಳಲ್ಲಿ ವ್ಯಕ್ತವಾದ ಸ್ವರೂಪ ಪರಿಪೂರ್ಣತೆಯಿಂದಲೂ ನಮ್ಮನ್ನು ಆನಂದಗೊಳಿಸುತ್ತದೆ. ಜೀವನದ ಸಾಧಾರಣ–ಅಸಾಧಾರಣ ಮುಖಗಳಲ್ಲಿಯ ವಿವಿಧ ಅನುಭವ ವಿಷಯಗಳನ್ನು ಹೌದು ಹೌದೆಂಬಂತೆ ಅನುಕರಿಸಿ ಇಲ್ಲವೆ ಪುನಃ ಸೃಷ್ಟಿಮಾಡಿಯೂ ಅದು ನಮ್ಮನ್ನು ತಣಿಸುತ್ತದೆ. ಆದರೆ ಗುಣಗಳು ಅಲ್ಲಿ ಭಾವಗಳ ಕೇವಲ ಪ್ರತಿಧ್ವನಿಗಳಾಗಿ ಇರುತ್ತವೆ,–ವಾಸ್ತವವಾಗಿ ಅವು ಶಬ್ದಗತವಾದ ಭಾವನೆಗಳ ಉತ್ತರೋತ್ತರೋತ್ಕರ್ಷಪರವಾದ ಮೂರ್ತರೂಪ. ಆದುದರಿಂದ ಕಲಾಕೃತಿಯು ಹೃದಯಭಾರ ನಿವಾರಕ ಸಂಗತಿಗಳನ್ನು ನಮ್ಮ ಮುಂದಿಟ್ಟು–ಮಾನವ ಭಾವಗಳನ್ನೂ ಭಾವನೆಗಳನ್ನೂ ಅವುಗಳ ಸಕಲ ವಿಸ್ತಾರದಶೆಯಲ್ಲಿಯೂ ಅಭಿವ್ಯಕ್ತಗೊಳಿಸಿ, ಅದರ ಸಕಲ ಅಭಿವ್ಯಕ್ತಿಗಳಲ್ಲಿಯೂ ಆನಂದದಾಯಿತ್ವವನ್ನು ಕಾಣಿಸಿ ನಮ್ಮನ್ನು ಬಾಳಿನ ಹುಚ್ಚು ವಿಚಾರಗಳಿಂದ , ತಾಪತ್ರಯಗಳಿಂದ, ಮುಕ್ತರನ್ನಾಗಿ ಮಾಡುತ್ತದೆ. ಅಂಥ ವಿವಿಧಾಭಿವ್ಯಕ್ತಿಗಳೆಂದರೆ ಬಾಳಿನ ಅಪೂರ್ಣ ರೂಪಗಳಾದ ಸುಖ, ಸಂತೋಷಗಳು ಮತ್ತು ಅಪರೂಪಗಳಾದ ದುಃಖ, ದುಸ್ವಪ್ನಗಳು. ಆದರೆ ಭಾವಗಳು ಅಲ್ಲಿರುವುದು ರಸವನ್ನು ನಿರ್ದೇಶಿಸಿ ಪ್ರತಿಧ್ವನಿಸಲು ಎಂಬುದನ್ನು ಮರೆಯುವಂತಿಲ್ಲ. ರಸವಾದರೋ ಅವುಗಳ ಉದ್ಗಮವಾದ ಸ್ಥಾಯಿಭಾವ. ನಮ್ಮ ವಿಹ್ವಲ ಭಾವನೆಗಳನ್ನು ಅವುಗಳ ಮೌಲಿಕ ಮಾನವ್ಯ ಮನೋಭಾವಕ್ಕೆ ತಿರುಗಿಸಿ, ನಮ್ಮ ಜಾಗ್ರನ್ಮನವನ್ನು ಜೀವನದ ವಿವಿಧ ವಿಷಯಗಳಿಂದಲೂ ಆಕಸ್ಮಿಕ ಘಟನೆಗಳಿಂದಲೂ ಮುಕ್ತಗೊಳಿಸಿ, ಅನಂತರ ಅದನ್ನು ಸಾಧಾರಣೀಕೃತ ಭಾವನೆಯ ಮತ್ತು ವ್ಯಾಪ್ತಿ ವಿಸ್ತಾರ ಪಡೆದ ಅನುಭವದ ಪ್ರಶಾಂತ ಗಾಂಭೀರ್ಯಕ್ಕೊಯ್ದು ಕಲಾಕೃತಿಯು ಶುದ್ಧೀಕರಿಸಿ ಸಮುತ್ಕರ್ಷಕ್ಕೇರಿಸುತ್ತದೆ, ಸ್ತಬ್ಧಗೊಳಿಸುತ್ತದೆ, ನಿಷ್ಪಂದಗೊಳಿಸುತ್ತದೆ. ಅರಿಸ್ಟಾಟಲನು ಹೇಳುವ ಶುದ್ಧೀಕರಣ, ಎಂದರೆ ಇದೇ. ಆದರೆ ರಸವೇ ಸ್ವತಃ ಒಂದು ಪ್ರತಿಧ್ವನಿ, ಪಡಿಯಚ್ಚು, ಪ್ರತಿಬಿಂಬ – ಅದು ಕಲಾವಿದನು ತನ್ನ ಕವಿಸಹಜ ಸ್ಫೂರ್ತದರ್ಶನದಲ್ಲಿ ಸಾತ್ಮ್ಯಭಾವದಿಂದ ಕಂಡ ಜ್ಞಾನವನ್ನು ಅಥವಾ ಮೂಲಸ್ಫೂರ್ತಿಯನ್ನು ಪಡಿನುಡಿಯುತ್ತದೆ. ಹೀಗಿರುವುದರಿಂದ ಕಲಾಕೃತಿಯು ನಮ್ಮನ್ನು ಬೆಳಕಿಗೊಯ್ದು ಆನಂದೋನ್ಮಾದವನ್ನು ಮುಟ್ಟುವಂತೆ ಉದ್ರೇಚಿಸುತ್ತದೆ. ಆ ಆನಂದವೇ ಪರಮಾನಂದ.

ಕಲೆ ಸತ್ಯದಿಂದ ಮೂರು ಪಟ್ಟು ಚ್ಯುತವಾದದ್ದು ಎಂದು ಪ್ಲೇಟೋ ದೋಷಾರೋಪ ಮಾಡಿದ. ಅದಕ್ಕೂ ಹೆಚ್ಚಿನ ನ್ಯಾಯ–ಸತ್ಯಾರ್ಥದಲ್ಲಿ ನಾವು ಅದು ಐದು ಪಟ್ಟು ಸತ್ಯದಿಂದ ಅಪಸಾರ ಹೊಂದಿದೆ, ದೂರೀಕೃತವಾಗಿದೆ ಎನ್ನಬಹುದು; ಆದರೆ ಪ್ರತಿಯೊಂದು ಸಲವೂ ಅದು ಪರಸತ್ಯದ ಧ್ವನಿಯ ಪಡಿಯಚ್ಚಾಗಿ ನಮಗೆ ದೂರಾಗುತ್ತದೆ. ಕಲಾಕೃತಿಯೆಂಬುದು ಪ್ರತಿಧ್ವನಿಯ, ಪ್ರತಿಧ್ವನಿಯ, ಪ್ರತಿಧ್ವನಿಯ, ಪ್ರತಿಧ್ವನಿಯ ಪ್ರತಿಧ್ವನಿ – ಪ್ರತಿಸ್ಪಂದನದ ಪ್ರತಿಸ್ಪಂದನ. ತನ್ನ ಅತಿ ಸ್ಪೃಶ್ಯಾವಸ್ಥೆಯಲ್ಲಿ ಕಾವ್ಯವು ಅದನ್ನು ಅಚ್ಚುಮಾಡಿದ ಕಾಗದದ ಸಾರಭೂತವಾದ ಪುಡಿ ಎನ್ನಬೇಕು. ತನ್ನ ಅತ್ಯಂತ ಸೂಕ್ಷ್ಮರೂಪದಲ್ಲಿ ಅದು ಪರಮಸತ್ಯದ ಸ್ವರ, ದ್ರಷ್ಟಾರನೇ ಅದರ ನಿತ್ಯತೆಯಲ್ಲಿ ಅದೃಶ್ಯನಾಗುವಂಥ ದರ್ಶನ. ಇದರ ನಡುವಣ ಅವಸ್ಥೆಗಳೂ ಇವೆ: ಶಬ್ದಶರೀರ, ಔಚಿತ್ಯಬದ್ಧ ಶಬ್ದಶರೀರ; ರೂಪದ ಸಲ್ಲಕ್ಷಣಗಳು ಅದರಿಂದ ಆವಿಷ್ಕರಿಸಲ್ಪಡುವುವು, ಕೆಲ ಮಾರ್ಮಿಕ ಭಾವ–ಭಾವನೆಗಳು ಪ್ರಕಟಿಸಲ್ಪಡುವುವು, ಮಾನವ್ಯ ವ್ಯಕ್ತಿತ್ವದ ಕೆಲ ಮನೋಭಾವಗಳು

ಧ್ವನನ ಮಾರ್ಗದಿಂದ ರೂಪಿಸಲ್ಪಡುವುದು ಮತ್ತು ಸಂಪೂರ್ಣ ಸಾಕ್ಷಾತ್ಕಾರ ಅಥವಾ ಪರಮಾರ್ಥದ ಯೌಗಿಕ ಪ್ರತ್ಯಕ್ಷ ಸೂಚಿಸಲ್ಪಡುವುದು.

ಈಗ ಕಾವ್ಯ ಅಥವಾ ಕಲೆ ಪ್ರೇಕ್ಷಕನ ಜಾಗ್ರದವಸ್ಥೆಯಲ್ಲಿ ಸಾರ್ಥಕ ಹೊಂದುವುದು ಹೇಗೆಂಬುದು ಸ್ಪಷ್ಟವಾದಂತಾಯಿತು. ತನ್ನ ಔಚಿತ್ಯ ಮತ್ತು ಜೀವನ ಪ್ರತಿಕೃತಿಗಳಿಂದ ಅದು ಓದುಗನಿಗೊಂದು ಬಗೆಯ ಸಂತೃಪ್ತಿಯನ್ನುಂಟು ಮಾಡುತ್ತದೆ. ಅದು ತನ್ನ ಅಂದ (ರಸ) ಮತ್ತು ರೂಪ ಪರಿಪೂರ್ಣತೆಗಳಿಂದ ಅವನಿಗೆ ಆಹ್ಲಾದಕರವಾಗುತ್ತದೆ. ಅವನಿಗದು ಹೃದಯ ನಿಃಶ್ವಸಿತವನ್ನುಂಟು ಮಾಡುವುದು; ಅವನಿಗೆ ಹಾಗೆನಿಸಲು ಅದು ಚಮತ್ಕಾರದಿಂದ ಅವನ ಭಾವ-ಭಾವನೆಗಳನ್ನು ಅಭಿವ್ಯಕ್ತಗೊಳಿಸುವದೇ ಕಾರಣ. ತನ್ನ ಸಾಧಾರಣೀಕರಣ ಶಕ್ತಿಯಿಂದ ಅದು ಅವನ ಜಾಗ್ರನ್ಮನವನ್ನು ಪವಿತ್ರಗೊಳಿಸಿ ಪ್ರಶಾಂತಿಗೊಯ್ಯುತ್ತದೆ. ಕೊನೆಯದಾಗಿ ಅದು ಅವನನ್ನು ಆನಂದೋನ್ಮಾದಕ್ಕೇರುವಂತೆ ಕಲಕಿ ಆ ಮೂಲಕ * ವಿಷಯಾಂತರ್ಗತವಾಗಿ ಪ್ರಕಾಶಿಸುವ ಅಂತರಾತ್ಮದ ಈಷನ್ಮಾತ್ರ ದರ್ಶನವನ್ನು ದಯಪಾಲಿಸುವುದು.

ಉಕ್ತ ಐದು ನಿತ್ಯ ಶಕ್ತಿಗಳ ನಿರ್ದೇಶ ಸ್ವಕಪೋಲ ಕಲ್ಪಿತ ಎಂದು ಯಾರಾದರೂ ಎಂದಾರು. ಭೌತವಾದಿಗಳು (ಲೋಕಾಯತಿಕರು) ಸ್ಪಷ್ಟವಾಗಿ ಇದೆಲ್ಲ ಅಸಂಬದ್ಧ ಎನ್ನುತ್ತಾರೆ, ಮಾರ್ಕ್ಸಿಸ್ಟನು ಮಾನಸಿಕ ರೋಗಹಿಡಿದವನ ಒಂದು ಹುಚ್ಚು ಕನಸು ಎನ್ನುವನು. ಮಾನವತಾವಾದಿ ಕೂಡ ಒಂದು ದಶೆಯಲ್ಲಿ ವಿಶ್ವದ ಇಂದ್ರಿಯನಾತೀತ (ಅಲೌಕಿಕ, ಅಪರೋಕ್ಷ) ದರ್ಶನವನ್ನು ಬದಿಗೆ ತಳ್ಳಿ ದೂರ ಸರಿಯುವನು. ಆದರೆ ಅಲೌಕಿಕ (ಯೌಗಿಕ) ಪ್ರತ್ಯಕ್ಷವಾದಿ ಈ ವಿರೋಧಗಳೆಲ್ಲ ದೃಷ್ಟಿಮಾಂದ್ಯದಿಂದ ದರ್ಶನ ಪರಿಮಿತಿಯಿಂದ ಅಥವಾ ಆತ್ಮ ಮತ್ತು ಇತರ ವಿಚಾರಶಕ್ತ್ಯತೀತ ಅನುಭವಗಳೆಲ್ಲವನ್ನೂ ಧಿಕ್ಕರಿಸುವ ಬಯಕೆಯಿಂದ ಎತ್ತಿದಂಥವು ಎನ್ನುತ್ತಾನೆ. ಶ್ರೀ ಅರವಿಂದ ಗುರುವಿನ ಕೃತಿಗಳ ಪರಿಚಯವುಳ್ಳ ಯಾವನಾದರೂ ಅವರ ಆಶ್ಚರ್ಯಕಾರಕ ವಿಚಾರ ಶಕ್ತಿಯನ್ನು ಮೆಚ್ಚಿಕೊಳ್ಳದಿರನು. ಶ್ರೀ ಅರವಿಂದರು ಪ್ರಾಚೀನ ಭಾರತೀಯ ವಿಚಾರ ಅನುಭವಗಳನ್ನು ಸ್ವಕೀಯ ಅಸ್ತಿತ್ವದಲ್ಲಿ, ಸ್ವಜೀವನದಲ್ಲಿ, ಎರಕಹೊಯ್ದು ಪುನಃ ಸ್ವೀಕರಿಸಿ, ಪುನರುಜ್ಜೀವಿಸಿ, ಪುನಾರೂಪಿಸಿ, ಅವರ ಮೇಲೆ ತಮ್ಮ ತತ್ವಸಿದ್ಧಾಂತವನ್ನು ನಿಲ್ಲಿಸಿದವರು. ಈಗ ಅಥವಾ ಇನ್ನು ಮುಂದೆ – ಅದೇಕೆ ಈಗಲೇ – ಜೀವನ ಕಲೆಗಳ ಮೇಲಿನ ಅವರ ವಚನಗಳ ಪರ್ಯಾಪ್ತತೆ ಮಾನವರ ಅತ್ಯಮೂಲ್ಯ ಸಂಪತ್ತುಗಳಲ್ಲಿ ಒಂದೊಂದು ಗಣಿಸಲ್ಪಡುವುದು ಖಂಡಿತ.

## (ಆ) ಶ್ರೀ ಅರವಿಂದರ ವಿಮರ್ಶಾತ್ಮಕ ಲೇಖನಗಳು

ಶ್ರೀ ಅರವಿಂದರ ವಿಮರ್ಶ ಶಕ್ತಿಯು ಅವರ ನವೋಲ್ಲೇಖಶಾಲಿತ್ವಸಂಪನ್ನ ಪ್ರತಿಭೆಯಷ್ಟೇ ದೊಡ್ಡದು. ಅವರು ಕವಿಗಳೂ ಹೌದು, ಸಹೃದಯ ವಿಮರ್ಶಕರೂ ಹೌದು; ತತ್ವಜ್ಞಾನಿಗಳೂ ಅನುಭಾವಿಗಳೂ ಆಗಿದ್ದಾರೆ. ಅವರ ಸಾಂಕಲನಿಕ ಸಾಕ್ಷಾತ್ಕಾರ ಶಕ್ತಿಯು ಅವರ ಬಹುಮುಖ ವ್ಯಕ್ತಿತ್ವದಿಂದಲೇ ನೇರವಾಗಿ ಹೊರಹೊರಡುತ್ತದೆ.

‘ ಯದ್ವ್ಯಾತ್ತಾನಂ ಸಕಲವಸ್ತೂನಾ ಸರ್ವಮೇಕಸ್ಥ ತತ್ತ್ವಂ
ದೃಷ್ಟ್ವಾ ಸ್ಥಾನಂ ಖಲುವ ಸತತಂ ಸರ್ವಭಾಂಡಸ್ಯಮೇಕಂ. ’

‘ ಯದಾನಂದರೂಪಂ ಪ್ರಕಾಶಸ್ವರೂಪಂ . .... .. ’

‘ ತಪ್ತಕಾಂಚನ ದೀಪ್ತಮಾನ ಮಹಾಣುರೂಪಮರೂಪಕಂ
ಚಂದ್ರಿಕಾಂತರತಾರಕೇವ ಸಮುಜ್ಜ್ವಲಂ ಪರಮಂ ಪದಂ. ’

ಅವರ ಸಾಹಿತ್ಯ ವಿಷಯಿಕ ನಿರ್ಣಯಗಳ ಪರ್ಯಾಪ್ತತೆ, ನಿಷ್ಪಕ್ಷಪಾತ ದೃಷ್ಟಿ, ವ್ಯಾಪಕತ್ವಗಳ ಬಗ್ಗೆ ಆಗಲೇ ಹೇಳಲಾಗಿದೆ. ಮೂಲ್ಯ ನಿರ್ಣಯ ಮಾಡುವಾಗ ಶ್ರೀ ಅರವಿಂದರು ಒಂದು ಕವಿಕೃತಿಯ ಸಾರಭೂತಶಕ್ತಿ, ಸೌಂದರ್ಯ ಮತ್ತು ವ್ಯಾಪ್ತಿಗಳನ್ನು ಒಂದು ಇಡಿಯಾಗಿ ಗ್ರಹಿಸುತ್ತಾರೆ. ಶೇಕ್ಸ್‌ಪಿಯರಸಿಗಿಂತ ಗಯಟೆ ಇನ್ನೂ ಆಳಕ್ಕೆ ಇಳಿದ; ಅವನಿಗಿಂತ ಇವನು ನಿಜವಾಗಿಯೂ ಹೆಚ್ಚಿನ ಪ್ರಜ್ಞಾವಂತ. ಹೀಗಿದ್ದರೂ ಇವನನ್ನು ಶೇಕ್ಸ್‌ಪಿಯರನಿಗಿಂತ ಕೆಳಮಟ್ಟದ ಕವಿಯೆಂದು ಗಣಿಸಲು ಇವನು ಅವನಂತೆ ಜೀವನದ ಅನಿವಾರ್ಯ ಪ್ರವೃತ್ತಿಯಿಂದ ಕವಿಕಾರ್ಯಕ್ಕಿಳಿಯದೆ, ಇಷ್ಟಾನುಸಾರವಾದ ಆಯ್ಕೆಯಿಂದ ಕವಿಯಾದದ್ದೇ ಕಾರಣ. ಹೋಮರ್, ಶೇಕ್ಸ್‌ಪಿಯರ್, ವಾಲ್ಮೀಕಿ ಮತ್ತು ವ್ಯಾಸರು ಜಗತ್ತಿನ ಅತಿದೊಡ್ಡ ಕವಿಗಳೆಂದು ಪರಿಗಣಿಸಲಾಗಿದೆ. ಈಸ್ಕಿಲಸ್, ವರ್ಜಿಲ್, ಕಾಲಿದಾಸ, ಡ್ಯಾಂಟೇ ಮತ್ತು ಮಿಲ್ಟನ್ನರು ಎರಡನೆಯ ವರ್ಗಕ್ಕೆ ಸೇರಿಸಲ್ಪಟ್ಟಿದ್ದಾರೆ. ಈ ಎರಡನೆಯ ವರ್ಗದವರು ತಮ್ಮದೇ ಆದ ಜಗತ್ತನ್ನು ಸೃಜಿಸಬಲ್ಲ ವಿಧಾತಾರರಲ್ಲ. ಡ್ಯಾಂಟೆಯ ಲೋಕೋತ್ತರವಾದ ಭುವನತ್ರಯವು ತನ್ನ ಕವಿಸಹಜ ದರ್ಶನ ಚೇತಸ್ಸಿನಿಂದ ನಿರ್ಮಿತವಾದುದಲ್ಲದೆ, ಆ ವಿಧದ ಸ್ವಾಭಾವಿಕ ವಿಧಾತೃತ್ವ ಶಕ್ತಿಯಿಂದಲ್ಲ. ಶೆಲ್ಲಿ, ಕೀಟ್ಸ್ ಮತ್ತು ವರ್ಡ್ಸ್‌ವರ್ತರು ಮಹಾವಿಧಾತೃಗಳ ಪಂಕ್ತಿಗೆ ಸೇರುವಂತೆ ಯಾವ ಕೃತಿಯನ್ನು ವಿಸ್ತಾರವಾಗಿ ಬರೆದಿಲ್ಲ. ‘ಕೀಟ್ಸನು (ಹಾಳುಮಾಡಿದ) ಹೈಪೀರಿಯನ್ನನ್ನು ಮುಗಿಸಿದ್ದರೆ, ಶೆಲ್ಲಿಯೂ ಇನ್ನೂ ಬದುಕಿ ಉಳಿದಿದ್ದರೆ, ಅಥವಾ ವರ್ಡ್ಸ್‌ವರ್ತನು ಪೆಟ್ರೋಲು ಕಡಿಮೆಯಾದ ಮೋಟಾರಿನಂತೆ ಉಗಿಯುಗಳೆ ಉಸ್ಸೆಂದು ಕುಕ್ಕರಿಸದಿದ್ದರೆ, ಆಗ ಅವರ ಸ್ಥಾನವೇ ಬೇರೆಯಾಗುತ್ತಿತ್ತು; ಆದರೆ ನಾವಿಲ್ಲಿ ಇದ್ದಷ್ಟೇ ವಿಷಯವನ್ನು ಗ್ರಹಿಸಬೇಕಾಗಿದೆ..... ಇವರನ್ನೂ ಮೇಲುದರ್ಜೆಗೆ ತೆಗೆದುಕೊಳ್ಳುವುದಾದರೆ ಯುರೋಪವು ಕವಿಯುಗಳಲ್ಲಿಯ ಉಳಿದ ಕೊನೆಯ ಪಕ್ಷ ಐವತ್ತು ಜನರ ಗತಿಯೇನು ? ’ (P. 303. Letters. 3rd series) .

ಶ್ರೀ ಅರವಿಂದರು ಸಾಹಿತ್ಯಿಕ ಕೃತಿಗಳ ಬೆಲೆಯನ್ನು ಅಳೆಯುವಾಗ ಎಷ್ಟು ಜಾಗ್ರತೆ ವಹಿಸುತ್ತಾರೆ. ಎಂಬುದನ್ನು ಡಬ್ಲ್ಯೂ. ಬಿ. ಯೀಟ್ಸ್ ಮತ್ತು ಎ. ಈ. ಅವರ ಬಗ್ಗೆ ಬರೆದುದನ್ನೋದಿದರೆ ಗೊತ್ತಾಗುವುದು: ‘ಯಾರಾದರೂ ಅವನ (ಯೀಟ್ಸನ) ಭಾಷೆ ಮತ್ತು ಪದವಿನ್ಯಾಸಗಳಲ್ಲಿಯ ದೊಡ್ಡ ಕಲೆಗಾರಿಕೆಯನ್ನು ಮನ್ನಿಸಲೇಬೇಕು. ಅದರಲ್ಲಿ ಅವನು ಎ. ಈ. ಗಿಂತ ಬಹಳ ಹೆಚ್ಚಿನವನು. ಅದೇ ಮೇರೆಗೆ, ಎ. ಈ. ಯ ವೇಗ ಮತ್ತು ರುಚಿತ್ವವಭಾಸಕತೆಗಳಲ್ಲಿ ಯೀಟ್ಸನನ್ನು ಮೀರಿಸಿದ್ದಾನೆ............ ಎ. ಈ. ಯ. ವಿಚಾರ ಮತ್ತು ದರ್ಶನ–ವಚನ ಪದ್ಧತಿಯು ಯೀಟ್ಸನವಕ್ಕಿಂತ ನನಗೆ ಹೆಚ್ಚು ಸಹೃದಯವೆನಿಸುತ್ತವೆ. ಯೀಟ್ಸನು ಅಲ್ಲಿ ಇಲ್ಲಿ ಸತ್ಯದ ಒಂದು ಭಾಸ್ವದಂಚಲವನ್ನು ಮಾತ್ರ ಗ್ರಹಿಸುತ್ತಾನೆ. ಆದರೆ ಅವರ ಬೇರೆ ಬೇರೆ ಕಾವ್ಯ ಸಿದ್ಧಿಗಳನ್ನು ವಿಮರ್ಶಿಸುವಾಗ ನನ್ನ ಮೇಲೆ ಪ್ರಭಾವಿಯಾಗಲು ಅದಕ್ಕೆ ಬಿಡಲಾರೆ.’ (P. 303–9. L. 3.).

ಶ್ರೀ ಅರವಿಂದರದು ಸಾರಗ್ರಾಹಕ ವಿಮರ್ಶೆ, ಪರಿಪೂರ್ಣದೃಷ್ಟಿಯ ರಸವಿವೇಕ. ಅವರ ‘ಭಾವಿ ಕಾವ್ಯ’ವನ್ನು ಓದುವಾಗ ಅವರು ಕೆಲವೇ ಜ್ಯೋತಿರ್ಮಯವೂ ಅರ್ಥಸೌಂದರ್ಯವೂ ಆದ ವಾಕ್ಯಗಳಲ್ಲಿ ಒಬ್ಬ ಕವಿಯ ಅಥವಾ ಒಂದು ಯುಗದ ಕವಿಕಾರ್ಯಕಲಾಪದ ಮೇಲೆ ಸಿಗಮುಸಿಸಿ ಹೇಳುವುದು ಯಾರನ್ನಾದರೂ ಮುಗ್ಧಗೊಳಿಸದಿರದು. ಒಂದೇ ಒಂದು ಅವತರಣಿಕೆಯಲ್ಲಿ ಅಥವಾ ಒಂದೆರಡರಲ್ಲಿ ಅವರು ಒಂದು ಸಾಹಿತ್ಯಿಕ ಯುಗದ ಆತ್ಮವನ್ನು ಅಥವಾ ಕವಿಮನದ ಸಮಗ್ರ ರೀತಿಯನ್ನು ಸೆರೆಹಿಡಿದಿಡುತ್ತಾರೆ. ಅವರ ಕವಿಯೋಗ್ಯತಾ ನಿರ್ಣಯ ಮತ್ತು ಕಾವ್ಯಪ್ರಯತ್ನಾಂದೋಲನ ವಿವೇಕ ಎಲ್ಲಕ್ಕಿಂತ ಹೆಚ್ಚು ನಮ್ಮನ್ನು ತಣಿಸುವುವು; ಹೃದ್ಬುದ್ಧಿಗಳಿಗೆ ಆಸ್ವಾದ್ಯಮಾನವಾಗುವುವು. ಏಕೆಂದರೆ, ಅವರ ವಿಮರ್ಶದೃಷ್ಟಿಯು

ಮೂಲಗ್ರಾಹಿ–ಅದು ಮೂಲದಿಂದ ಶಾಖೆಗೂ ಶಾಖೆಯಿಂದ ಮೂಲಕ್ಕೂ ಹರಿದಾಡುವಂಥದು. ಅವರ 'ರಾಷ್ಟ್ರ' ಸಾಹಿತ್ಯದ ವರ್ಣನೆ; ಗ್ರೀಕ್, ಲ್ಯಾಟಿನ್, ಫ್ರೆಂಚ ಅಥವಾ ಆಂಗ್ಲ ಕಾವ್ಯಕಲೆಯ ಮೇಲಿನ ಸಾರ ವಾಹಿಯಾದ ಸಿದ್ಧಾಂತ; ಆಂಗ್ಲೋ-ಸ್ಯಾಕ್ಸನ್ ಮತ್ತು ಕೆಲ್ಟಿಕ್ ಮನೋಧರ್ಮಗಳ ಸಂಮಿಲನದಿಂದ ಉದ್ಭವಿಸಿದ್ದೆಂದು ಆಂಗ್ಲ ಕಾವ್ಯಕಲೆಯ ಬಗ್ಗೆ ಅವರು ಹೇಳಿದ್ದು ಆ ಮಿಲನದಿಂದ ಆದರ ವಿಶಿಷ್ಟ ಸಲ್ಲಕ್ಷಣ ಗಳೂ ಪರಿಮಿತಿಗಳೂ ಬದ್ಧವಾಗಿವೆ ಎಂದ ಅವರ ನಿರ್ಣಯ; ಪ್ರಾಚೀನ–ಅರ್ವಾಚೀನ ಕಾವ್ಯಪದ್ಧತಿಗ ಳಲ್ಲಿಯ ಭೇದ; ಎಲಿಜಬೆತ್ ಕಾಲದ ನವ್ಯಾಭಿಜಾತವಾಙ್ಮಯದ ಮತ್ತು ಶೃಂಗಾರ ಸಾಹಸಿಕ ಕಾವ್ಯದ ಆಕರ್ಷಕ ಅವಲೋಕನ; ಭವ್ಯಕಾಲೀನ ಕಾವ್ಯಪದ್ಧತಿಯ ರೂಪ, ಶೈಲಿ ಮತ್ತು ಲಯಗತಿಗಳ ವರ್ಣನೆ; ಮುಕ್ತ ಛಂದಸ್ಸಿನ ಸಾಮರ್ಥ್ಯ–ಅಸಾಮರ್ಥ್ಯಗಳ ಮಾರ್ಮಿಕ ಚರ್ಚೆ; ಶೈಲಿಯಲ್ಲಿ ಸಾಧಿಸುವ ಪರಿಪೂರ್ಣತೆಗಳ ಸೌಪಾನಿಕ ವರ್ಗೀಕರಣ—ಈಯೆಲ್ಲವೂ ಅವರ 'ಭಾವಿಕಾವ್ಯ'ವನ್ನು ಓದುವ ಯಾವ ಸಾಹಿತ್ಯವಿದ್ಯಾ ರ್ಥಿಯ ಪ್ರಜ್ಞಾಚಕ್ಷುಸ್ಸನ್ನಾದರೂ ಪ್ರಖರಕಿರಣಗಳಿಂದ ಕುಕ್ಕದಿರದು; ಅವನ ಹೃದಯವನ್ನು ಸೆರೆಹಿಡಿಯ ದಿರದು. ಬ್ಲೇಕ್, ವರ್ಡ್ಸ್‌ವರ್ತ್, ಶೆಲ್ಲಿ ಅಥವಾ ಕೀಟ್ಸ್ ಮುಂತಾದ ಕವಿವರರ ಯೋಗ್ಯತೆಯನ್ನು ನಿರ್ಣ ಯಿಸಿದ ಹ್ರಸ್ವಲೇಖನಗಳು ನಮ್ಮ ಮನೋಮುಕುರದೆದುರು ತೆರೆದಿಡುವ ಭಾವ–ಭಾವನಾ ಮಣಿಮಾಲೆ ಗಳ ಸೊಬಗು ಈ ಕವಿಗಳ ಮೇಲೆ ಬರೆದ ಅಸಂಖ್ಯ ವಿಮರ್ಶಗ್ರಂಥಗಳ ಭಂಡಾರವನ್ನೇ ಸಂಶೋಧಿಸಿ ದರೂ ಸಿಕ್ಕದು. ಅವರ ವಿಮರ್ಶೆಯೆಂದರೆ ದ್ರಷ್ಟಾರನೂ ಮಹಾಪ್ರವಾದಿಯೂ ಆದ ಮೇಧಾವಿಯ ಸಹಜಸ್ಫೂರ್ತವಿವೇಚನೆ.

ಶ್ರೀ ಅರವಿಂದರ ಶಿಷ್ಯವರ್ಗಕ್ಕೆ ಈ ವಿಷಯದಲ್ಲಿ ಯಾರಾದರೂ ಕೃತಜ್ಞತೆಯನ್ನು ವ್ಯಕ್ತಪಡಿಸಲೇ ಬೇಕು. ಅದರಲ್ಲೂ ದಿಲೀಪಕುಮಾರ ರಾಯರಿಗೆ ಆ ಕೃತಜ್ಞತೆ ಹೆಚ್ಚಾಗಿ ಸಲ್ಲಬೇಕು. ಏಕೆಂದರೆ, ಅವರು ಕಲೆ–ಕಾವ್ಯಗಳಿಗೆ ಸಂಬಂಧಿಸಿದ ಎಲ್ಲ ವಿವಿಧ ವಿಷಯಗಳ ಬಗ್ಗೂ ಶ್ರೀ ಅರವಿಂದ ಗುರುಗಳ ಮನಃ ಕಾಸಾರದೊಳಗಿನ ವಿಚಾರಧಾರೆಗಳನ್ನು ಹೊರಗೆ ಧುಮ್ಮಿಕ್ಕುವಂತೆ ಮಾಡಿದರು; ಅಲ್ಲದೆ, ತಮ್ಮ ಕಾಗದ ಗಳಲ್ಲಿಯ ನಿಷ್ಪಾಪ ದೃಷ್ಟಿಯಿಂದ ಅವರನ್ನು ಆಕರ್ಷಿಸಿಯೂ ಅಜ್ಞಾನದಿಂದ ಅಥವಾ ಕುತರ್ಕಪ್ರದರ್ಶನದಿಂದ ಅವರನ್ನು ಪ್ರಲೋಭಿಸಿಯೂ ಅವಕ್ಕೆ ಶ್ರೀ ಅರವಿಂದರು ಉತ್ತರಬರೆಯುವಂತೆ ಮಾಡಿದರು. ಅವರಿಬ್ಬರ ಆಕಸ್ಮಿಕ ಸಂಪರ್ಕದಿಂದ ಶ್ರೀ ಅರವಿಂದರ ಅಶೋಷಣೀಯವೂ ಅವ್ಯಯವೂ ಆದ ಪ್ರತಿಭಾ–ಪ್ರಕಾಶೋತ್ಸ ಹೀಗೆ ಚಿಮ್ಮಿ ಹರಿಯುವಂತಾಯಿತು. ಶ್ರೀ ಅರವಿಂದರ ಪತ್ರಗಳು ಅವರ ಅನನುಕರಣೀಯ ವ್ಯವಹಾರ ಬುದ್ಧಿ ವೈಶದ್ಯವನ್ನೂ ಅಪಾರಜ್ಞಾನವನ್ನೂ ಗರ್ಭೀಕರಿಸಿಕೊಂಡಿವೆ. ಆ ಗರ್ಭೀಕರಣವು ಲಘುವಾಗಿಯೂ ಅಂದವಾಗಿಯೂ ಇದೆ. ಅನಪೇಕ್ಷಿತವಾಗಿ ಎಷ್ಟೋ ಕಡೆ ಆ ಪತ್ರಗಳಲ್ಲಿ ಅನೌಪಚಾರಿಕತೆ ಕಂಡು ಬಂದರೂ ಶ್ರೀ ಅರವಿಂದರ ರಸವಿವೇಚನೆಗೆ ಸಂಬಂಧಿಸಿದ ನಿರ್ಣಯಗಳಿಗೆ ಅವು ಅನಿವಾರ್ಯಪೂರಕಗಳೆ ನಿಸಿವೆ, ಅಪರಿಹಾರ್ಯ ಅನುಬಂಧವೆನಿಸಿವೆ. ಗುರುಗಳು ಒಮ್ಮೆ ಒಂದು ಭಾವ ಅಥವಾ ಕಲ್ಪನಾಚಿತ್ರದೊಡನೆ ಕ್ರೀಡಿಸುತ್ತಾರೆ; ಒಂದು ಪದ ಅಥವಾ ಶಬ್ದದೊಡನೆ ಲೀಲೆಯಾಡುತ್ತಾರೆ; ಸಾಂಪ್ರತ ಮೂಲ್ಯವಿವೇಕವ ನ್ನೊಮ್ಮೆ ಖಂಡಿಸುತ್ತಾರೆ; ವೈಮರ್ಶಿಕ ಅಪಗ್ರಹಣಗಳನ್ನು ಸಿಂಹಾವಲೋಕನ ಮಾತ್ರದಿಂದ ತಿದ್ದಿಬಿಡು ತ್ತಾರೆ; ಕವಿತೆಯ ಆದಿಬಿಂದುವಿಗೆ ಅಸಂಖ್ಯಮಾರ್ಗಗಳಿಂದ ನಮ್ಮನ್ನೊಯ್ಯುತ್ತಾರೆ. ಎರಡು ಮೂರು ಪತ್ರ ಗಳಲ್ಲಿ ಅವರು ರಸಶಾಸ್ತ್ರವನ್ನು ಸಶರೀರವಾಗಿ ಆವಿಷ್ಕರಿಸಿದ್ದಾರೆ! ಆಗೀಗ ಬರುವ ಮೃದುಗಂಭೀರವಾದ ಮಿಂಚಿನಂತೆ ಅಲ್ಲಲ್ಲಿ ಪುನಃಪುನಃಸಹಜ ಮೃದುಹಾಸ್ಯ ತೋರುತ್ತದೆ; ಮತ್ತು ಶೈಲಿಯು ಯಾವಾಗಲೂ ಸೂರ್ಯಪ್ರಕಾಶದಷ್ಟು ಸ್ಪಷ್ಟ, ನಿಂತ ನೀರಿನಷ್ಟು ತಿಳಿ, ಕೆತ್ತಿದ ವಜ್ರದಂತೆ ಜ್ಯೋತಿರ್ಮಯ. ಆ ಶೈಲಿಯ ಭಾವಗೀತೋಪಮ ರಮಣೀಯತೆ ಆದರ ವಾಸ್ತುಶಿಲ್ಪಸಹಜವೂ ಮಹಾಕಾವ್ಯಸದೃಶವೂ ಆದ ಘನಗದ್ಯಕ್ಕೆ

ಮಧುರ ಪ್ರತಿಯೋಗಿಯಾಗಿ ನಿಂತಿವೆ. ಈ ಪತ್ರಗಳ ಸಂದೇಶವನ್ನು ಬೇಕೆನಂತೆ ಹೀರಲಾಗುತ್ತದೆ. ನೂರು ಸಲ ಯಾವನಾದರೂ ಅವನ್ನು ಓದಬಹುದು; ಹಾಗೆ ಅಷ್ಟು ಸಲ ಓದಿದಾಗಲೂ ಅವುಗಳ ಅಮರನಾವೀನ್ಯ ವನ್ನೂ ತ್ರಿಕಾಲಾಬಾಧಿತವಾದ ಪಕ್ವಬುದ್ಧಿಮತ್ತೆಯ ಅಮಿತ ವೈವಿಧ್ಯವನ್ನೂ ಅವನು ಕಾಣಬಲ್ಲನು. ಕೀಟ್ಸನ ಅನಂತರ ಆಂಗ್ಲಭಾಷೆಯಲ್ಲಿ ಇಷ್ಟು ಅರ್ಥಾವಿಷ್ಕಾರಶಕ್ತಿಯುಳ್ಳ ಪತ್ರಗಳನ್ನು ಬರೆದವರೇ ಇಲ್ಲ ಮತ್ತು ಕೀಟ್ಸನವಕ್ಕಿಂತಲೂ ಇವು ಕಾವ್ಯದ ಭವಿತವ್ಯಕ್ಕೂ ಸಾಹಿತ್ಯವಿಮರ್ಶೆಗೂ ಹೆಚ್ಚು ಉಪಕಾರಿಗಳಾಗಿವೆ.

'ವೇದಾಂತಿಯ ಮುಖಮುದ್ರೆಯ ನೋಡಿ ಕನಿಕರ ಹುಟ್ಟುವುದು' ಎಂಬಂಥ ಮಿದುವೂ ಸ್ತಬ್ಧವೂ ಆದ ಮೆಲ್ನಗೆವಾತನ್ನು (ವೇದಾಂತಿ ಅಥವಾ) ತತ್ವಜ್ಞಾನಿಯನ್ನು ಕುರಿತು ಅರವಿಂದರು ಆಡಬಲ್ಲರು. ಕಲೆ ಯೆಂದರೆ ಭಾವಾಭಿವ್ಯಕ್ತಿ, ಭಾವಪ್ರಕಾಶನ ಎಂದ ಬೆನೆಡೆಟ್ಟೋ ಕ್ರೋಚೆಯ ಸಿದ್ಧಾಂತದ ಅಪರಿಪೂರ್ಣ ತೆಯ ಮೇಲೆ ಟೀಕಿಸುತ್ತ, ಶಬ್ದಶಕ್ತಿರಹಿತ ಪ್ರತಿಭಾವಂತನನ್ನು ಕಾಣಲಾರೆ ಅಥವಾ ಭಾವಚಿತ್ರವನ್ನು ದೃಶ್ಯರೂಪಕ್ಕೆ ತರಲಾರದ ಪ್ರತಿಭಾಸಂಪನ್ನನಿಲ್ಲ ಎಂದು, 'ಮೂಕನೂ ಅಕೀರ್ತಿವಂತನೂ ಆಗಿ ಉಳಿಯುವ ಶೇಕ್ಸ್‌ಪಿಯರ'ನ ಸಂಭವವನ್ನೂ 'ಅಸಹಾಯನೂ ಅಪರಿಣಾಮಿಯೂ ಆಗಿ ಉಳಿಯುವ ಎಂಗೆಲ್ಸನ' ಉದ್ಭವವನ್ನೂ ಅರವಿಂದರು ಅಲ್ಲಗಳೆದಿದ್ದಾರೆ. ಬರ್ಟ್ರೆಂಡ್‌ರಸೆಲ್ಲನು ಅಂತರ್ಮುಖರ ಮೇಲೆ ಮಾಡಿದ ನಿಂದೆಯನ್ನು ವಿವರಿಸುವಾಗ ಅವರು ಮಾಡಿದ ಅಪಹಾಸ್ಯ ವೈಭವಶಾಲಿಯಾದುದು; ಅದರ ಧ್ವನಿಯ ಬಣ್ಣವೇ ಬೇರೆ. ಅನಟೋಲ್‌ಫ್ರಾನ್ಸ್ ಮಾಡಿದ ದೇವರ ಅಣಕವನ್ನು ಟೀಕಿಸುವಲ್ಲಿ ಅವರು ಅನುಸರಿ ಸಿದ ಅದ್ಭುತ ವ್ಯಂಗ್ಯಮಾರ್ಗವು ಆ ವಿಡಂಬನ ಪಂಡಿತನ ವಾದಕ್ಕೆ ಪ್ರತಿಯಾಗಿ ಅವನ ಹಗ್ಗದಿಂದಲೇ ಅವನ ಕಟ್ಟಿಗೂ ಹೆಚ್ಚು ಬಿಗಿಯಾಗಿ ಅವನನ್ನು ಬಿಗಿದಿದೆ.

ಈ ಪತ್ರಗಳಲ್ಲಿ ಶ್ರೀ ಅರವಿಂದರು ಅನೇಕ ವಿಂಗಡಗಳನ್ನು ಮಾಡಿರುವುದು ಸಾಹಿತ್ಯಾಭ್ಯಾಸಿಗೆ ಅಮೂಲ್ಯವೆನಿಸುತ್ತದೆ. ಆಧುನಿಕ ಕಾವ್ಯಪದ್ಧತಿ ಬೆಳೆಸಿದ ಹೊಸ ಗುಣಗಳನ್ನು ವರ್ಣಿಸಿ, ಅವರು ಪರಂಪರಾ ಗತವಾದ ಕೆಲವನ್ನು ವಿಶ್ಲೇಷಿಸಿ ಹೇಳಿದ್ದಾರೆ. ಕಾವ್ಯದಲ್ಲಿಯ ವ್ರತನಿಷ್ಠೆಯ ರೀತಿ ಮತ್ತು ಸ್ವಯಂಭವ ಭಾವವೈಪುಲ್ಯ; ಉದಾತ್ತತೆ ಮತ್ತು ವೈಭವ; ಸೌಂದರ್ಯ ಮತ್ತು ಮಹತ್ವ; ಮಹತ್ವ ಮತ್ತು ಪೂರ್ಣತೆ; ಕಲ್ಪಕತೆಯ ಸ್ಫೂರ್ತಸೌಂದರ್ಯ ಮತ್ತು ಅಲೌಕಿಕ ದರ್ಶನ; ಪ್ರತೀಕಪದ್ಧತಿ ಮತ್ತು ಸಮಾಸೋಕ್ತಿಮಾರ್ಗ; ಚಂದ್ರಕಾಂತ ಮತ್ತು ಸೂರ್ಯಕಾಂತ ವಾಣಿ; ಪ್ರತೀಕಘಟಿತ ಮತ್ತು ಅನುಭಾವಿಕ ಕಾವ್ಯ – ಈಯೆಲ್ಲವೂ ಕಾವ್ಯದ ಗುರಿ ಮತ್ತು ಮಾರ್ಗಗಳ ಮೇಲೆ ಹೊಸ ಬೆಳಕನ್ನು ಬೀರುತ್ತವೆ.

ಎಷ್ಟೋ ವಿಮರ್ಶಕರೂಪದ ಬೀಸುವ ಕಲ್ಲುಗಳಿಗೆ ನುಚ್ಚುಗಳಾಗಿ ಸಿಕ್ಕಿದ ಸುಪ್ರಸಿದ್ಧ ವಿಷಯಗಳ ಮೇಲೆ ಶ್ರೀ ಅರವಿಂದರು ಹೊಸ ದೃಷ್ಟಿಯಿಂದ ವ್ಯಾಖ್ಯಾನಿಸಿ, ಹಿಂದೆ ಕಂಡಿರದಿದ್ದರೂ ಈಗ ಕಾಣಿಸಿದ ಕೂಡಲೆ ಮನ್ನಿಸಲ್ಪಡುವ ಕೆಲ ಅಂಶಗಳನ್ನು ವಿಶದಪಡಿಸಿದ್ದಾರೆ: ನೃತ್ಯಗೀತ ಲಯ ಮತ್ತು ಮಹಾಕಾವ್ಯ ಗತಿ; ಅಭಿಜಾತ ಕಾವ್ಯಮಾರ್ಗವನ್ನು ವೈಮರ್ಶಿಕಬುದ್ಧಿಯ ಕಾವ್ಯಪದ್ಧತಿ ಎಂದು ವರ್ಣಿಸಿದ್ದು; ಜಾನಪದ ಗೀತ ಮತ್ತು ಶಿಶುಗೀತ; ಲಯದ ಗೂಢಾತ್ಮ; ಅಲೆಗ್ಸಾಂಡ್ರೀಯ, ಅಷ್ಟಾಕ್ಷರೀಯ ಮತ್ತು ಸರಳರಗಳೆಯ ಛಂದೋಬಂಧಗಳು; ಮತ್ತು ಸ್ವತಃ ಶ್ರೀ ಅರವಿಂದರದೇ ಆದ ಪಾರಿಮಾಣಿಕ ಛಂದಃಸಿದ್ಧಾಂತ. ಮೇಲಗೀತದ ಪರಿಪೂರ್ಣತೆಯಿದ್ದಾಗ ಮಾತ್ರ ಮುಕ್ತಛಂದೋಬಂಧ ನ್ಯಾಯ್ಯ ಎನ್ನುತ್ತಾರೆ ಅವರು. ಆದರೆ ಅದರ ಪರಿಮಿತ ತೆಯ ಅರಿವು ಅವರಿಗೆ ಯಾವಾಗಲೂ ಇರುವುದರಿಂದ ತಮ್ಮ ಒಂದು ಪತ್ರದಲ್ಲಿ ಅದನ್ನು ಚೆನ್ನಾಗಿ ಹಾಸ್ಯ ಮಾಡಿದ್ದಾರೆ. 'ಮಿಶ್ರ ಸಗಣ ಮತ್ತು ಅಯಾಂಬ್(⌣ — ·)ಇವು ಸುಂದರವಾದ ಲಘು ಭಾವಗೀತಲಯಕ್ಕೆ

ಅನುಗುಣವೆನಿಸುವುವು. ಅದಕ್ಕೂ ಮುಕ್ತ ಛಂದಕ್ಕೂ ಯಾವ ಸಂಬಂಧವೂ ಇಲ್ಲ' (P. 128. L. 3.). ಪದ್ಯದಲ್ಲಿ 'ನಿರಂಕುಶ ಸ್ವರವಿನ್ಯಾಸ'ದ, ಅಂದರೆ ಪದಗತಿಯ ಆಂತರಿಕ ಧ್ವನಿಶಕ್ತಿಗೆ ಛಾಂದಸ ಕ್ರಮಬದ್ಧತೆ ಹೆಚ್ಚು ಪರಿಪೂರ್ಣವಾಗಿ ಅಧೀನವಾಗಬೇಕು ಎಂಬ ಅವರ ತತ್ತ್ವೋಪದೇಶವು ಪದ್ಯದ ಭವಿತವ್ಯಕ್ಕೆ ಮಹ ದರ್ಥ ಸೂಚಿಯಾಗಿದೆ. ಅದರಲ್ಲಿ ಸ್ವರವೇ ಪದ್ಯರಚನೆ ಮಾಡುತ್ತದೆ ಮತ್ತು ಛಂದಸ್ಸನ್ನು ಬರಿಯ ಲಘು ಅನುಕೂಲ್ಯ, ಆವಶ್ಯಕ ಸಂಯಮ ಎಂದು ಗಣಿಸಲಾಗಿದೆ. ಹೆಚ್ಚು ಉನ್ನತ, ಉದಾತ್ತ ಮಟ್ಟದಲ್ಲಿ ಎಲಿಜಬೆತ್ ಕಾಲೀನ ಕವಿಗಳು ವಾಕ್ಕಿನ ಮಹಾಶಕ್ತಿಯನ್ನು ಪುನಃ ಹಸ್ತಗತ ಮಾಡಿಕೊಂಡಿದ್ದರೆ, ಅಂದರೆ, ಸಂಪೂರ್ಣ ಸಹಜ ಸ್ಫೂರ್ತ ಪದ್ಧತಿಯ ಕಾವ್ಯಕ್ಕೆ ಅಗತ್ಯವಾದ ಪ್ರತ್ಯಕ್ಷ ಆವಿಷ್ಕಾರಕ ಪದ ಮತ್ತು ನಿಕಟ ಪ್ರತಿಕೃತಿಗಳನ್ನು ಅಳವಡಿಸಿಕೊಂಡಿದ್ದರೆ ಮೇಲಿನ ಅವರ ಅಭಿಪ್ರಾಯಗಳಾದರೂ ಅಷ್ಟೇ ಮುಖ್ಯವಾದವು. ಪತ್ರಗಳಲ್ಲಿ ಡಿ. ಎಚ್. ಲಾರೆನ್ಸರಿಂದ ಹಿಡಿದು ಬರ್ನಾರ್ಡ್ ಶಾರ ವರೆಗಿನ ಪರಸ್ಪರ ದೂರಸ್ಥ ಲೇಖಕರ ಆಕರ್ಷಕ ಯೋಗ್ಯತಾನಿರ್ಣಯಗಳಿವೆ. ಭಾರತೀಯ ಪ್ರತಿಭಾನ್ವಿತ ಲೇಖಕರಾದ ಕಾಲಿದಾಸ, ಬಂಕಿಮರಂಥ ವರ ಮೇಲೆಯೂ ಕಲೆಯ ರಾಷ್ಟ್ರೀಯ ಮೂಲ್ಯ ಎಂಬಂತಹ ವಿಷಯಗಳ ಮೇಲೆಯೂ ಶ್ರೀ ಅರವಿಂದರು ಪ್ರಬಂಧಗಳನ್ನು ಬರೆದಿದ್ದಾರೆ. ಇಷ್ಟಲ್ಲದೆ, ವೇದ ರಹಸ್ಯದಲ್ಲಿ ಮಾಡಿದ ಅವರ ಅಭ್ಯಾಸಗಳು, ಉಪನಿಷ ದರ್ಥ, ಗೀತಾಸಂದೇಶ– ಇವು ಸಂಶೋಧಕತ್ವ, ಯೌಗಿಕ ದರ್ಶನ, ಪಾಂಡಿತ್ಯ ಮತ್ತು ಭಾಷ್ಯಶಕ್ತಿಗಳನ್ನು ಅದ್ಭುತ ರೀತಿಯಿಂದ ಒಕ್ಕಡೆಯಲ್ಲಿ ಪ್ರದರ್ಶಿಸುತ್ತವೆ. ದಿವ್ಯಜೀವನ, ಯೋಗಸಾಮರಸ್ಯ ಮತ್ತು ಮಾನವ್ಯ ಚಕ್ರ ಮುಂತಾದ ತತ್ತ್ವಶಾಸ್ತ್ರಗಳಲ್ಲಿಯ ಕೆಲ ವಾಕ್ಯಗುಚ್ಛಗಳೂ ಅಧ್ಯಾಯಗಳೂ ಕಲೆಯ ನಿಗೂಢೋತ್ಸ ಗಳ ಮೇಲೆ ಬೆಳಕು ಬೀರಿ ಆತ್ಮದೊಡನೆ ಅದಕ್ಕಿರುವ ನಿಕಟ ಸಂಬಂಧವನ್ನು ಬಯಲುಪಡಿಸುತ್ತವೆ. 'ಸಾವಿತ್ರಿ' ಯಲ್ಲಿಯೂ 'ಅಹಾನ' ಮುಂತಾದ ಪದ್ಯಗಳಲ್ಲಿಯೂ ಮಹಾಸೌಂದರ್ಯಮಯ ವಾಕ್ಯಪುಂಜಗಳು ಸಿಕ್ಕುತ್ತವೆ; ಆ ಜೀವನೋತ್ಸಗಳು ಕಾವ್ಯ-ಕಲೆಗಳ ಉದ್ಗಮಸ್ಥಾನಗಳು; ಅವುಗಳು ಯಾರನ್ನಾದರೂ 'ಬನ್ನಿ, ಇಲ್ಲಿ ಮುಳುಗಿ ಮಿಂಾಯಿರಿ' ಎಂದು ಕರೆಯುವಂತಿವೆ.

ಈ ಲೇಖನಗಳಲ್ಲಿ ನವ್ಯಕಾವ್ಯದ ಮಂತ್ರೋಚ್ಚಾರ ಮಾಡುವ, ನವರಸ ಸಿದ್ಧಾಂತವನ್ನು ಬೋಧಿ ಸುವ ನಿರಂಕುಶ ಪ್ರಭುತ್ವ ಸಂಪನ್ನ ಸ್ವರವೊಂದನ್ನು ನಾವು ಕೇಳುತ್ತೇವೆ. ಅದ್ಭುತಸಾಮರ್ಥ್ಯ ವ್ಯಾಪ್ತಿಗ ಳುಳ್ಳ, ಅನ್ಯಾದೃಶ ಅಂತರ್‌ದರ್ಶನಗಾಂಭೀರ್ಯವುಳ್ಳ, ದೃಷ್ಟಿವೈಶಾಲ್ಯ ಮತ್ತು ದರ್ಶನೋನ್ನತಿವೆತ್ತ ಸಾಹಿತ್ಯ ವಿಮರ್ಶಕರಾಗಿ ಗುರುಗಳು ಕಾರ್ಯಾಸಕ್ತರಾದುದು ಇಲ್ಲಿ ಕಂಡುಬರುತ್ತದೆ. ಪಾಶ್ಚಾತ್ಯ–ಪೌರಸ್ತ್ಯ ಸಾಹಿತ್ಯ ಗಳಲ್ಲಿ ಸುಖವಾಗಿ ಸಂಚರಿಸುತ್ತ, ಈ ದ್ರಷ್ಟಾರರು ತಮ್ಮ ಬರಹಗಳಲ್ಲಿ ನವನಾಗರಿಕತೆಯೊಂದರ ಮಂತ್ರ ವೆನಿಸುವ ಅನಂತಸಂಖ್ಯಾವಾದ ತುಂಬುಗೊರಲಿನ ನಾಣೀವಿಧಾನಕ್ಕಾಗಿ ಸಿಷ್ಠತೆ ನಡೆಸಿದ್ದು ಗೋಚರ ವಾಗುತ್ತದೆ.

(ಪ್ರಕಟವಾಗಲಿರುವ 'Sri Aurobindo Memorial Volume' ಎಂಬ ಗ್ರಂಥಕ್ಕಾಗಿ ಬರೆದ ಆಂಗ್ಲ ಲೇಖನದ ೧-೪ ಹಾಗು ೧೨ನೆಯ ಭಾಗಗಳ ಅನುವಾದ)

—ವಿ. ಕೃ. ಗೋಕಾಕ

—ಬಿ. ಎಚ್. ಶ್ರೀಧರ

(ಅನುವಾದಕರು)

# ಅರವಿಂದ ದಲಾನಿ

ಅರವಿಂದಂ ಭಜ ದರಹಸಿತಂ ಭಜ ಶರದಾಕಾಶನಿಭಂ ಭಜ ರೇ
ಅರವಿಂದಂ ಪರಮಾನಂದಾಮೃತಶರಧೀಂದುಂ ಭಜ ಕರ್ಮಜ ರೇ ॥

ತತ್ತ್ವಜ್ಞಾನಸಮುದ್ರತರಂಗಾಸ್ಫಾಲನಖೇಲನವೇತ್ತಾರಂ
ಮಿಥ್ಯಾಮಿಥ್ಯದ್ವಂದ್ವಾಟವಿಗತಭೋಗಾಮಯಸಂಭೇತ್ತಾರಂ
ಕಾವ್ಯಾಕಾಶಘನೋದಯಘರ್ಘರಸುಸ್ವನಸಂಕಲಿತಾಸಾರಂ
ಸೇವಸ್ವಾಪದರ್ಶಾಂತರ್ಗತಮಧುಪಾತ್ರಚ್ಛವಿದರ್ಶಯಿತಾರಂ ॥೧॥

ದ್ವೈತಾದ್ವೈತವಿಶಿಷ್ಟವಿಚಾರವಿಲಕ್ಷಣಸಾಕಕಲಾನಂದಂ
ಸತ್ಯಾದ್ವೈತಾತ್ಮಕವಿಜ್ಞಾನದ್ರಷ್ಟಾರಂ ಮುತ್‌ಸ್ರಷ್ಟಾರಂ
ತರ್ಕಾತೀತಸುದರ್ಶನತಾಪರಿಸೇವನಚಾತುರ್ಯಾಧಾರಂ
ತರ್ಕಾತರ್ಕವಿಹಾರಂ ಭಜ ನರ ಭವದೂರಂ ಭುವನೋದ್ಧಾರಂ ॥೨॥

ನಾನಾಕಾರವಿವರ್ಜಿತವಿಶ್ವನಿದಾನಜನನ್ಯಾವಿಷ್ಕಾರಂ
ಕಾಮಾಚಾರನಿಮಗ್ನಕುದೇಹಿಕುಲಾಧೃತಶೀಲಬಹಿಷ್ಕಾರಂ
ನಿತ್ಯಾನಿತ್ಯವಿವೇಚನಲೋಚನದಾತಾರಂ ಸತ್‌ತ್ರಾತಾರಂ
ಕೃತ್ಯಾಕೃತ್ಯವಿಚಾರೋತ್ತರಮತಿಕರ್ತಾರಂ ಭಜ ಭರ್ತಾರಂ ॥೩॥

ಪ್ರಣತೋದ್ಧಾರಕೃತಂ ಶ್ರಿತಭಾರಭೃತಂ ಸಹವಾಸಿಸಹಸ್ರಯುತಂ
ಕ್ಷಣಿಕಾಕ್ಷಣಿಕಪದಾರ್ಥಸಮನ್ವಯತಂತ್ರಾನ್ವೇಷಣಯುಕ್ತಿಪಥಂ
ನವಪದದರ್ಶನಯತ್ನಸಮುದ್ಧೃತಸಾರಸ್ವತಸಾರಕ್ಷೀರಂ
ಪವನೋಪಮಪಾವಿತ್ರ್ಯನಿದರ್ಶಕವಿಕಸಜ್ಜೀವನಮಂದಾರಂ ॥೪॥

ಶಿಷ್ಯಾಲಕ್ಷ್ಯಪರಿಸ್ಥಿತಮುನಿಗೃಹಧಾತಾರಂ ಗುಪ್ತಾಚಾರಂ
ಭೃತ್ಯೋತ್ಸಾಹಸುಸೇವಿತಸುಂದರಪಾದಪಯೋಜಾಲಂಕಾರಂ
ಪ್ರತ್ಯಯಹೀನಜನಾದತಿದೂರನಿವಾಸಿನಮಾತ್ಮವ್ರತಧಾರಂ
ಸ್ತುತ್ಯಂ ಸಜ್ಜನಸಖ್ಯಂ ಪರಹಿತಕೃತ್ಯಂ ಭಜ ಭಕ್ತೋದ್ಧಾರಂ ॥೫॥

## ಸಮರ್ಪಣ

ಕುಜ್ಞಾನಪಾತ್ರಚುರ್ಯವಿದಾರಣಕಾರಣಮಜ್ಞಕೃಪಾಪಾರಂ
ಪ್ರಜ್ಞಾವಾದವಿಲಾಸವಚಃಪರಿಪುಷ್ಟಗ್ರಂಥಮಹಾಪೂರಂ
ಪದ್ಯಾದ್ಯಸಮರಸಪ್ರದವಾಙ್ಮಯನಿರ್ಮಾಣಾದ್ಭುತಧೀಮಂತಂ
ಹೃದ್ಯಂ ಬಹುಕೃತಗದ್ಯಂ ಚಿಂತನವಿದ್ಯಂ ಭಜ ವಾಕ್ಶ್ರೀಮಂತಂ ॥೬॥

ಕಾರಣಕಾರಣಮಾರ್ಗಣಮಗ್ನಮನೀಷಾಪ್ರೇರಣದಾತಾರಂ
ತಾರಣಯಂತ್ರವಿಚಾರಣಪರಮತಿಧಾರಣಧೈರ್ಯೋನ್ನೇತಾರಂ
ಸ್ವಾರ್ಥೋನ್ಮುಖವಿದ್ಯಾಮದವಾರಣವಾರಣವೈದ್ಯಕಯೋಕ್ತಾರಂ
ಆರ್ತತ್ರಾಣಪರಾಯಣಶೀಲಜಪುಣ್ಯಾಫಲೋದಯಭೋಕ್ತಾರಂ ॥೭॥

ಕಾಮಿನಿಕಾಂಚನವಾಂಛಾಸಂಚಿತಚಂಚಲದೃಕ್ಪ್ರತಿಪಂಚಾಸ್ಯಂ
ಪಂಚೇಂದ್ರಿಯಗತಪಂಚಾಸಕ್ತಿಪರಾಙ್ಮುಖಧೀಮೋಹನಲಾಸ್ಯಂ
ಸತ್ತ್ವೋದ್ರೇಕಸಮಾಧಿಸಮುದ್ಭವಸಂತೋಷಾಮೃತರುಚಿರಾಗಂ
ಸತ್ಯಪ್ರಣಯರಸಾವೇಶೋದ್ಗಮವಾಕ್ಯೋಚ್ಚಾರಪರಾವೇಗಂ ॥೮॥

ಭಾರತಬಂಧನಮೋಚನನಿಷ್ಠತಪೋವೀರಂ ಧ್ಯಾನಾಗಾರಂ
ಭಾರತಕೀರ್ತಿಲತಾಗ್ರವಿಕಸ್ವರಕೋಮಲಶುಭ್ರಸುಮಾಕಾರಂ
ಪೂರ್ವೋದಧಿತೀರೋತ್ಥಪ್ರತಿರವಿಸಾರ್ಯಾರಾಧ್ಯಗುಣೋದ್ದೀಪಂ
ಚಾರ್ವಾಕೀಣವಿಧರ್ಮೋನ್ಮುಖಜನಶಾತ್ಯಪ್ರತಿಸಾಯಕರೂಪಂ ॥೯॥

ಜಗದುದ್ಧಾರಣತಂತ್ರನಿಯೋಜನಮಂತ್ರಣಮುಖಯತ್ನಾವೇಶಂ
ನಿಗಮಾಗಮಗಗನಾಭೋಗಾಂತಃಸಂಚರದಕ್ಷಿಕೃತಾದೇಶಂ
ವಿಗಲಿತಮಾಯಾಮೋಹರಿಪುಪ್ರಜಮಗಣಿತಗುಣಶೇವಧಿನಾಥಂ
ಪ್ರಗತಿಪ್ರಣಯಿಸಮರವಿಂದಂ ಭಜ ಭಗವತ್ಪೂತಪದೋನ್ನೀತಂ ॥೧೦॥

ಕಾದಾಚಿತ್ಕನಿದಾನಜವಿಜ್ಞಾನೋತ್ಥಿತಲೌಕಿಕತಾಧ್ವಂಸಂ
ವಾದಾತೀತಾಲೌಕಿಕದರ್ಶನಯೋಜನಜೃಂಭಿತವಿದ್ವಾಂಸಂ
ವ್ಯಾಘೋದ್ಯಮಗತಲೋಭಾಶನಿಹತರಾಜನ್ಯಪ್ರತಿವಕ್ತಾರಂ
ವೇದಾರ್ಥಪ್ರತಿಪಾದನಪಥಗತಶಂಕಾಬಂಧವಿಮೋಕ್ತಾರಂ ॥೧೧॥

ಸಂಗಜಮಂಗಲಮುತ್ಕರಕಾಂತಿಕಲಾಪವಿಕೀರ್ಣಮಹಾಪಾಂಗಂ
ತುಂಗತಮೋಗಿರಿಶೃಂಗವಿಶಾಸನಪುಂಗವಮಂಭೋಜಾತಾಂಗಂ
ಸಂಗವಿಹೀನಂ ಸಂಘವಿಧಾನಂ ಸಂಗತಭಕ್ತದಯಾಧಾನಂ
ಗಂಗಾಸಮಗಾಂಭೀರ್ಯನಿಧಾನಂ ಭಂಗಾತೀತಸುಖೋದ್ಯಾನಂ ॥೧೨॥

—ಬಿ. ಎಚ್. ಶ್ರೀಧರ

# अरविन्ददलानि

अरविन्दं भज दरहसितं भज शरदाकाशनिभं भज रे
अरविन्दं परमानन्दामृतशरधीन्दुं भज कर्मज रे ॥

१

तत्त्वज्ञानसमुद्रतरङ्गास्फालनखेलनवेत्तारं
मिथ्यामिथ्यद्वन्द्वाटविगतभोगामयसंभेत्तारं
काव्याकाशघनोदयघर्घरसुस्वनसंकलितासारं
सेवस्वादर्शान्तर्गतमधुपात्रच्छविदर्शयितारम् ॥

२

द्वैताद्वैतविशिष्टविचारविलक्षणपाककलानन्दं
सत्याद्वैतात्मकविज्ञानद्रष्टारं सुस्रष्टारं
तर्कातीतसुदर्शनतापरिसेवनचातुर्याधारं
तर्कातर्कविहारं भज नर भवदूरं भुवनोद्धारम् ॥

३

नामाकारविवर्जितविश्वनिदानजनन्याविष्कारं
कामाचारनिमग्नकुदेहिकुलाहतशीलबहिष्कारं
नित्यानित्यविवेचनलोचन दातारं सत्त्रातार
कृत्याकृत्यविचारोत्तरमतिकर्तारं भज भर्तारम् ॥

४

प्रणतोद्धारकृतं श्रितभारभृतं सहवासिसहस्रयुतं
क्षणिकाक्षणिकपदार्थसमन्वयतन्त्रान्वेषणयुक्तिपथं
नवपदर्शनयत्नसमुद्धृतसारस्वतसारक्षीरं
पवनोपमपावित्र्यनिदर्शकविक्रमपज्जीवनमन्दारम् ॥

५

शिष्यालक्ष्यपरिस्थितमुनिगृहधातारं गुप्ताचारं
भृत्योत्साहसुसेवितसुन्दरपादपयोजालङ्कारं
प्रत्ययहीनजनादतिदूरनिवासिनमात्मव्रतधारं
स्तुत्यं सज्जनपथ्यं परहितकृत्यं भज भक्तोद्धारम् ॥

६

कुज्ञानप्राचुर्यविदारणकारणमज्ञकृपापारं
प्रज्ञावादविलासवचःपरिपुष्टग्रन्थमहापूरं
पद्याद्यसमरसप्रदवाङ्मयनिर्माणाद्भुतधीमन्तं
हृद्यं बहुकृतगद्यं चिन्तनविद्यं भज वाक्श्रीमन्तम् ॥

७

कारणकारणमार्गणमग्नमनीषाप्रेरणदातारं
तारणयन्त्रविचारणपरमतिधारणधैर्योन्नेतारं
स्वार्थोन्मुखविद्यामदवारणवारणवैद्यकयोक्तारं
आर्तत्राणपरायणशीलजपुण्यफलोदयभोक्तारम् ॥

८

कामिनिकाञ्चनवाञ्छावञ्चितचंचल दृक्प्रतिपंचास्यं
पंचेंद्रियगतपञ्चासक्तिपराङ्मुखधीमोहनलास्यं
सत्त्वोद्रेकसमाधिसमुद्भवसन्तोषामृतरुचिरागं
सत्यप्रणयरसावेशोद्गमवाक्योच्चारपरावेगम् ॥

९

भारतबन्धनमोचननिष्ठतपोवीरं ध्यानागारं
भारतकीर्तिलताप्रविकस्वरकोमलकुसुमाकारं
पूर्वोद्धितारोग्यप्रतिरविमार्याराध्यगुणोहापं
चार्वाकीणविधर्मोन्मुखजनशक्यप्रतिमायकरूपम् ॥

१०

जगदुद्धारणतन्त्रनियोजनमन्त्रगमुखयत्नावेशं
निगमागमगगनाभोगान्तःसञ्चरदक्षिकृतादेशं
विगलितमायामोहरिपुव्रजमगणितगुणशेवधिनाथं
प्रणतिप्रणयिनमरविन्दं भज भगवद्दृतपदोक्षीनम् ॥

११

कादाचित्कनिदानजविज्ञानोत्थितलौकिकतात्त्वंसं
वादातीतालौकिकदर्शनयोजनजृंभितविद्वांसं
व्याधोद्यमगतलोभाशानिहतराजन्यप्रतिवक्तारं
वेदार्थप्रतिपादनपथगतशङ्काबन्धविमोक्तारम् ॥

१२

वंगजमंगलमुकुरकान्तिकलापविकीर्णमहापांगं
तुंगतमोगिरिशृंगविशासनपुंगवमंभोजापांगं
संगविहीनं संघविधानं संगतभक्तदयाधानं
गंगासमगांभीर्यनिधानं भंगातीतसुबोधानम् ॥

— बि. एच्. श्रीधर

# ನಿವೇದನ

ನಮ್ಮ ಅಭಿಲಾಷೆಯಂತೆ ಆಗಸ್ಟ ೧೫, ೧೯೫೧ ಕ್ಕೆ ಪ್ರಕಟವಾಗಬೇಕಾಗಿದ್ದ "ಸಮರ್ಪಣ"ದ ಈ ಎರಡನೆಯ ಸಂಪುಟವು ಇದೀಗ ನವ್ಹೆಂಬರ ೨೪ ರ ಶುಭದಿನದಲ್ಲಿ ಅಚ್ಚಾಗಿ ಪ್ರಕಟವಾಗುತ್ತಿದೆ. ಆದರೂ ಇದರ ಮಾತೃಕೆಯು ಈ ಮೊದಲೇ ಸಿದ್ಧವಾಗಿದ್ದು ಆಗಸ್ಟ ೧೫ ಕ್ಕೆ ಶ್ರೀ ಮಾತೆಯವರ ದಿವ್ಯ ಚರಣಗಳಲ್ಲಿ ಅರ್ಪಿಸಲ್ಪಟ್ಟಿತು ಎಂಬ ಅಂಶವು ಸಮಾಧಾನಕರವಾಗಿದೆ.

ಮೊದಲನೆಯ ಸಂಪುಟದಲ್ಲಿ 'ಸಾಧನ ಚತುಷ್ಟಯ'ವೆಂಬ ಲೇಖನವನ್ನು ಬಹಳ ಹಿಂದಿನ ಅಂದರೆ ೧೯೨೮ ರ 'ಸ್ವಧರ್ಮ' ಮಾಸಪತ್ರಿಕೆಯಿಂದ ಹೊರತೆಗೆದು ಪ್ರಕಟಿಸಿದಂತೆ, ಈ ಸಂಪುಟದಲ್ಲಿ 'ಜೀವನ' ಪತ್ರಿಕೆಯ ೧೯೪೨ ರ 'ಅರವಿಂದ ವಿಶೇಷಾಂಕ'ದಿಂದ 'ಶ್ರೀ ಅರವಿಂದ-ದರ್ಶನ' ಎಂಬ ಲೇಖನವು ಉದ್ಧೃತವಾಗಿದೆ. ಸುಲಭವಾಗಿ ಲಭ್ಯವಿರದ ಇಂಥ ಸಾಹಿತ್ಯವನ್ನು ಈ ಜಾಗೃತ ಸಮಯದಲ್ಲಿ ಆಯ್ದು ಜನರಿಗೆ ಒದಗಿಸಿಕೊಡುವುದು 'ಸಮರ್ಪಣ'ದ ಉದ್ದೇಶ-ಕರ್ತವ್ಯಗಳಲ್ಲಿ ಒಂದಾಗಿದೆ.

ಶ್ರೀ ಅರವಿಂದರ ಹಾಗು ಶ್ರೀ ಮಾತೆಯವರ ಸಾಹಿತ್ಯವನ್ನು ಮೂಲದಲ್ಲಿ ಅರಿಯದ ಕನ್ನಡ ವಾಚಕ ವರ್ಗಕ್ಕೆ, ಜಿಜ್ಞಾಸುಗಳಿಗೆ 'ಸಮರ್ಪಣ'ವು ಅಂಥ ಮೂಲ ಸಾಹಿತ್ಯದ ಆಯ್ದ ಭಾಗಗಳನ್ನು ಭಾಷಾಂತರಿಸಿ ಕೊಡಬಯಸುವುದು. ಆಂಗ್ಲ ಭಾಷೆಯಲ್ಲಿಯೇ ನವ ರೀತಿ-ಶೈಲಿಗಳನ್ನು ವ್ಯಕ್ತಪಡಿಸುವ ಶ್ರೀ ಅರವಿಂದರ ಬರಹಗಳಿಗೆ ಕನ್ನಡದಲ್ಲಿ ತಕ್ಕ ಪರಿಭಾಷೆಯನ್ನು ರೂಢಗೊಳಿಸುವುದು ಅಷ್ಟು ಸುಲಭವಲ್ಲ. ಈ ಸಂಪುಟದಲ್ಲಿ ಅಲ್ಲಲ್ಲಿ ಸಮಾನಾರ್ಥದ ಆಂಗ್ಲ ಕನ್ನಡ ಪದಗಳನ್ನು ಕೊಡಲಾಗಿದೆ.

ಈ ಸಂಪುಟಕ್ಕೆ ಅಪೂರ್ವ ಶೋಭೆಯನ್ನು ಕೊಡುವ ಶ್ರೀ ಅರವಿಂದರ ಹಾಗು ಶ್ರೀ ಮಾತೆಯವರ ತೀರ ಇತ್ತೀಚಿನ ಭಾವಚಿತ್ರಗಳನ್ನು **ಆಶ್ರಮದವರೇ** ನಮಗೆ ಒದಗಿಸಿ ಕೊಟ್ಟಿದ್ದು 'ಸಮರ್ಪಣ'ದ ಭಾಗ್ಯವಿಶೇಷವೇ ಸರಿ.

ವಿವಿಧ ಲೇಖನ-ಕವನಗಳ ಮೂಲಕ ತಮ್ಮ ಭಕ್ತಿ ಭಾವನೆಗಳಿಗೆ ರೂಪುಗೊಟ್ಟು 'ಸಮರ್ಪಣ'ವು ಈ ರೀತಿಯಲ್ಲಿ ತನ್ನ ಕಾಣಿಕೆಯನ್ನು ಸಲ್ಲಿಸಲು ನೆರವಾದ ಕರ್ನಾಟಕದ ನಾನಾ ಭಾಗದ ಲೇಖಕ ಸಹೋದರರಿಗೆ 'ಸಮರ್ಪಣ'ವು ಕೃತಜ್ಞತೆಯನ್ನು ಸೂಚಿಸುವುದು.

ಕೊನೆಯದಾಗಿ ಈ ಸಂಪುಟವನ್ನು ಅಂದವಾಗಿ ವೇಳೆಗೆ ಸರಿಯಾಗಿ ಅಚ್ಚುಮಾಡಿಕೊಟ್ಟ 'ಸುಧಾ' ಮುದ್ರಣಾಲಯದವರಿಗೆ ನಾವು ಉಪಕೃತರಾಗಿದ್ದೇವೆ.

ನವ್ಹೆಂಬರ ೨೪, ೧೯೫೧.

**ಶ್ರೀ ಅರವಿಂದ ಮತ್ತು ಶ್ರೀ ಮಾತಾ ಮಂಡಲ,**
ಹುಬ್ಬಳ್ಳಿ.

# ಸಮರ್ಪಣ

## (ಶ್ರೀ ಅರವಿಂದರ ಪೂರ್ಣಯೋಗಕ್ಕೆ ಮೀಸಲಾದುದು)

**ಸಂಪುಟ ೧: ೧೯೫೦ ]** **[ ಕೆಲವೇ ಪ್ರತಿಗಳು ಲಭ್ಯವಿವೆ**

**● ಕೆಲವು ಲೇಖನಗಳು ●**

| | |
|---|---|
| ನಮಸ್ಕಾರ (ಕವನ) | ಶ್ರೀ ರವೀಂದ್ರನಾಥ ಠಾಕೂರ (ಅನು: ಪ್ರಹ್ಲಾದ ನರೇಗಲ್ಲ) |
| ಶ್ರದ್ಧೆ | ಶ್ರೀ ಅರವಿಂದರು ಮತ್ತು ಶ್ರೀ ಮಾತೆಯವರು (ಅನು: ವಸಂತ ಕುಲಕರ್ಣಿ) |
| ಶ್ರೀ ಅರವಿಂದಾಶ್ರಮ<br>ಸಾಧನ ಚತುಷ್ಟಯ | ರಾಮಚಂದ್ರ ಪಿಸೀತ |
| ಶ್ರೀ ಅರವಿಂದರ ಸಾಹಿತ್ಯ | ಅ. ವೆಂಕಪ್ಪಶಾಸ್ತ್ರಿ |
| ಶ್ರೀ ಅರವಿಂದರು (ಚರಿತ್ರೆ) | ಸಿಂಪಿ ಲಿಂಗಣ್ಣ |
| ವೇದರಹಸ್ಯ | ದ. ರಾ. ಬೇಂದ್ರೆ |
| ಶ್ರೀ ಅರವಿಂದರ ಯೋಗದ ಸಾಧನ ಮಾರ್ಗದಲ್ಲಿ | ಮಧುರಚೆನ್ನ |
| ಮಾನವತೆಯ ಏಳಿಗೆ | ಸದಾನಂದ ನಾಯಿಕ |
| ಶಾರೀರಕ ಶಿಕ್ಷಣ | ಸಂ. ವೆಂಕೋಬಾಚಾರ್ಯ ಮತ್ತು ರಾಮಚಂದ್ರ ಪಿಸೀತ |
| ಸಚ್ಚಿದಾನಂದ | ವಿ. ಕೃ. ಗೋಕಾಕ |
| ಈಶೋಪನಿಷತ್ತು | ರಂ. ಶ್ರೀ ಮುಗಳಿ |
| ಪೂರ್ಣಯೋಗದಲ್ಲಿ ಕ್ರಿಯೆಯ ಸ್ಥಾನ | ಸ. ಸ. ಮಾಳವಾಡ |

ಇವಲ್ಲದೆ ಶ್ರೀ ಅರವಿಂದರ ಮತ್ತು ಶ್ರೀ ಮಾತೆಯವರ ಅನೇಕ ಸಂದೇಶಗಳ, ಪತ್ರಗಳ ಮತ್ತು ಧ್ಯಾನ ಪ್ರಾರ್ಥನೆಗಳ ಅನುವಾದಗಳೂ ಇವೆ. ಹಾಗು ಗುರುಭಕ್ತಿಪರವಾದ ಅನೇಕ ಕವನಗಳೂ ಸ್ತೋತ್ರಗಳೂ ಇವೆ.

ಪ್ರತಿ ದೊರೆವ ಸ್ಥಳ:—

**ಶ್ರೀ ನಾಡಿಗೇರ ಲಕ್ಷ್ಮಣರಾಯರು**
**ಶ್ರೀ ಅರವಿಂದ ಮತ್ತು ಶ್ರೀ ಮಾತಾ ಮಂಡಲ,**
ದೇಶಪಾಂಡೆನಗರ, ಹುಬ್ಬಳ್ಳಿ.